# ಅನಂತಾನಂತದೆಡೆಗೆ

ಕುರ್ವನ್ನೇವೇಹ ಕರ್ಮಾಣಿ ।
ಜಿಜೀವಿಷೇಚ್ಛಗ್ಂ ಸಮಾಃ ॥
ಏವಂ ತ್ವಯಿ ನಾನ್ಯಥೇ ತೋಽಸ್ತಿ ।
ನ ಕರ್ಮ ಲಿಪ್ಯತೇ ನರೇ ॥

ಪ್ರಥಮ ಮುದ್ರಣ ೧೯೭೩



**ಬೆಲೆ: ಎಂಟು ರೂಪಾಯಿಗಳು**

ಮುದ್ರಣಕಾರರು

ಶ್ರೀ ಶಾರದಾ ಮುದ್ರಣಾಲಯ
ಶಂಕರ ಮಠ
ಬೆಂಗಳೂರು–4

"ಶ್ರೀಶಕ್ತಿಮಾತಾಪಾದಾರ್ಪಣಮಸ್ತು"

# ಅನಂತಾನಂತದೆಡೆಗೆ

ಮಲ್ಲಿಕಾ

ಲಕ್ಷ್ಮೀ ಪ್ರಕಾಶನ
೭, ಲ್ಯಾಂಗ್‌ಫೋರ್ಡ್ ರೋಡ್
ಬೆಂಗಳೂರು-೨೫

# ನಿವೇದನೆ

ಲಕ್ಷ್ಮೀ ಪ್ರಕಾಶನದಲ್ಲಿ ಹೊಚ್ಚ ಹೊಸದಾಗಿ ಅರಳಿದ ಕುಸುಮ 'ಅನಂತಾನಂತದೆಡೆಗೆ.' ಇದು ಸಾಮಾಜಿಕ ಜೀವನವಾರ್ಧಿಯಲ್ಲಿ ತೊಳಲಿ ಬಳಲಿ ದಡಕಂಡ ನಾರೀಮಣಿಯ ಕಥಾ ವಸ್ತುವನ್ನು ಒಳಗೊಂಡಿದೆ. ನನ್ನ ಲೆಕ್ಕಣಿಕೆಯ ಮಸಿಯೊರತೆ ಓದುಗರ ಮನಸ್ಸನ್ನು ತಣಿಸುವುದಾದರೆ ನನ್ನ ಶ್ರಮವು ಸಾರ್ಥಕಗೊಳ್ಳುವುದು.

ಸದ್ಯದಲ್ಲೇ 'ಶಿಲಾ ಚೇತನ' ಎಂಬ ಕಥಾ ಸಂಕಲನವನ್ನು ಪ್ರಕಾಶಿಸಲು ಉದ್ದೇಶಿಸಲಾಗಿದೆ. ಅದು ಇಷ್ಟರಲ್ಲಿಯೇ ಬೆಳಕು ಕಾಣಲಿದೆ ಎಂಬುದನ್ನು ಪ್ರಸ್ತುತಪಡಿಸಲು ಹರ್ಷಿಸುವೆ

**ಬೆಂಗಳೂರು** **ಮಲ್ಲಿಕಾ**

೨೯-೧೨-೭೨

# ಅನಂತಾನಂತದೆಡೆಗೆ

## ೧

....ತರುಣಾರುಣನ ಹೊಂಗಿರಣಗಳು ಅರೆದೆರೆದ ಗವಾಕ್ಷಿಯಲ್ಲಿ ಕೋಲು ಕೋಲಾಗಿ ಮೈ ಚಾಚಿದ್ದುವು.

....ವಾತಾವರಣ ಅತ್ಯಂತ ಉಷ್ಣೋಷ್ಣಭರಿತವಾಗಿದ್ದರೂ ಚೈತ್ರ ಮಾಸದ ವಸಂತ ವೈಖರಿಯಲ್ಲಿ ಬಂಡುಂಡ ಚಿತ್ತಾಲೋಕ ರಸಾನಂದವನ್ನು ಪಡೆದು ಆನಂದ ಪ್ರಮತ್ತವಾಗಿತ್ತು.

ವಿಶ್ರಾಂತಿ ಕೊಠಡಿಯ ಗವಾಕ್ಷಿಗಳೆಲ್ಲವನ್ನೂ ಹರವಾಗಿ ತೆರೆದು ಸವಿಗಾಳಿಯನ್ನು ಸಾನಂದದಿಂದ ಆಹ್ವಾನಿಸಿದಳು ನಿರ್ಮಲ. ಹಿಂದಿನ ದಿನ ವರ್ಷ ಭೈರವ ಭೋರಿಟ್ಟು ಸುರಿದಿದ್ದರೂ ಅಂದು ಬಿಸಿಲಿನ ತಾಪ ಇನಿತೂ ಕಡಿಮೆಯಾಗಿರಲಿಲ್ಲ. ಅಷ್ಟು ಮಾತ್ರವಲ್ಲ, ಮತ್ತಷ್ಟು ತಾಪದಾಯಕವಾದಂತಿತ್ತು. ಅಂಗಳದ ತುಂಬೆಲ್ಲಾ ಚೆಲ್ಲಿ ಸೂಸಿದ ಪುಷ್ಪರೇಣು—ಪುಷ್ಪದಳಗಳಿಂದ ವರ್ಣಮಯ ರಂಗೋಲಿ ಇಟ್ಟಂತೆ ಚಿತ್ರಿತವಾಗಿತ್ತು. ಕಿಟಕಿಯ ಬಳಿ ನಿಂತ ನಿರ್ಮಲ ಭಾವನಾಮಯಿಯಾಗಿ ನೋಟವನ್ನು ಹೊರಚೆಲ್ಲಿದಾಗ ಮಧ್ಯಾಹ್ನದ ಬಿಡುವಿನಲ್ಲಿ ಹೊರಗಡೆ ಕಲೆತಿದ್ದ ಸಮವಸ್ತ್ರ ಭೂಷಿತರಾದ ಅಸಂಖ್ಯ ಬಾಲಕಿಯರು ದೃಷ್ಟಿಗೆ ಬಿದ್ದರು...ಹಾಲ್ಗೆನ್ನೆಗಳ ಸುಂದರ ಸೊಬಗು, ತುಟಿಗಳಲ್ಲಿ ಮಿನುಗುವ ಅಮಾಯಕ ನಗು, ಮಾತಿನ ಮಧುಮಯ ಮರ್ಮರ ಅತ್ಯಂತ ಆಕರ್ಷಣೀಯವಾಗಿತ್ತು. ಸ್ವಲ್ಪ ಹೊತ್ತು ಅಲ್ಲೇ ನಿಂತು ನೋಡಿದ ನಂತರ ಹಿಂದಿರುಗಿ ಬಂದು ಕೈಗೆ ಮಾಸಿಕವೊಂದನ್ನು ತೆಗೆದುಕೊಂಡಳು. ಒಂದೆರಡು ಪುಟಗಳನ್ನು ತಿರುವಿ ಹಾಕುವುದರಲ್ಲಿ ಸಹ ಅಧ್ಯಾಪಕಿಯರಾದ ಲೀಲಾ ಪಾರ್ವತಿಯರು ಒಮ್ಮೆಗೇ ಒಳಗಡೆ ಪದಾರ್ಪಣ ಮಾಡಿದರು. ಹೆಜ್ಜೆಗಳು ತಾಳಲಯಬದ್ಧವಾಗಿದ್ದುವು. ಕಣ್ಣುಗಳಲ್ಲಿ ಮಿನುಗುತಿದ್ದ ಮಿಂಚು ಪಾರಸ್ಪರಿಕ ಪ್ರೇಮಾಭಿಸಾರದ ಸಂಬಂಧವನ್ನು ಸ್ಫುರಿಸುವಂತಿತ್ತು.

"ಪರೀಕ್ಷೆ ಇಷ್ಟರೊಳಗಾಗಿ ಮುಗಿದಿದ್ದರೆ ಎಲ್ಲರೂ ಆರಾಮವಾಗಿರಬಹುದಾಗಿತ್ತು." ಎಂದಳು ಲೀಲಾ, ಹಣೆಯ ಮೇಲೆ ಮೂಡಿದ ಬೆವರಿನ ತುಂತುರು ಹನಿಗಳನ್ನು ಕರವಸ್ತ್ರದಿಂದ ಒರಿಸಿಕೊಳ್ಳುತ್ತ.

ಆ ವಿಚಾರದಲ್ಲಿ ಇಡೀ ಆಡಳಿತ ವರ್ಗ ಏಕೀಭವಿಸುತ್ತದೆ. ಆದರೆ ಆಗಾಗ್ಗೆ ಭುಗಿಲೇಳುವ ನಾನಾ ಸಮಸ್ಯೆಗಳಿಂದ ಸಾಧ್ಯವಾಗುತ್ತಲೇ ಇಲ್ಲ. ಅದು ಎಲ್ಲರಿಗೂ ಗೊತ್ತು. ಅಂತಲೇ ಏನೋ ಒಂದು ಬಗೆಯ ನೈರಾಶ್ಯಪೂರ್ಣ ವಾಣಿಯಲ್ಲಿ ಉತ್ತರಿಸಿದಳು ನಿರ್ಮಲ.

"ಈ ಸಮಸ್ಯೆ ಎಷ್ಟು ಕಾಲದಿಂದ ಎಳೆದಾಡುತ್ತಿದೆಯೋ...."

ಮಾತು ಮುಗಿಯುವುದರೊಳಗಾಗಿ ಅಪರಿಚಿತ ವ್ಯಕ್ತಿಯೊಬ್ಬ ಅನಿರೀಕ್ಷಿತವಾಗಿ ಬಾಗಿಲ ಬಳಿ ಕಾಣಿಸಿಕೊಂಡು "ಒಳಗೆ ಬರಬಹುದೇ?" ಎಂದ. ತುಟಿಗಳಲ್ಲಿ ನಸುನಗು ಹರಿದಿತ್ತು.

"ಬನ್ನಿ, ಬನ್ನಿ" ಎಂದ ಪಾರ್ವತಿ "ಇವರು ಅಮರನಾಥರ ಬದಲಿಗೆ ಬಂದಿದ್ದಾರೆ." ಎಂದು ಗೆಳತಿಯರಿಗೆ ಪರಿಚಯಿಸಿದಳು. ಮುಖಬಿಂಬದಲ್ಲಿ ದೈನಂದಿನ ಸರಳತೆ ಮಾಯವಾಗಿತ್ತು.

ಅವನು ಮೂವರಿಗೂ ವಂದನೆಯನ್ನು ಸಲ್ಲಿಸಿ ತನ್ನ ಪರಿಚಯ ಹೇಳಿಕೊಂಡ. ಅವನು ಅದೇ ತಾನೇ ಬಂದುದರಿಂದ ಅವನ ಪರಿಚಯ ಯಾರಿಗೂ ಇರಲಿಲ್ಲ. ಕೇವಲ ಕೆಲವು ನಿಮಿಷಗಳ ಮುಂಚೆ ಅವನ ಪರಿಚಯ ಹೊಂದಿದವಳು ಪಾರ್ವತಿ. ಅವನನ್ನು ನೋಡುತ್ತಲೂ ನಿರ್ಮಲೆಗೆ ಎಲ್ಲಿಲ್ಲದ ಆಶ್ಚರ್ಯ. ವಿಷಯವನ್ನು ಒಮ್ಮೆಗೇ ನಂಬುವುದಕ್ಕಾಗಲಿಲ್ಲ. ಅಮರನಾಥ ರಾಜೀನಾಮೆ ಕೊಟ್ಟಿದ್ದಾಗಲೀ ಅಥವಾ ಇನ್ನೊಬ್ಬ ಉಪಾಧ್ಯಾಯನನ್ನು ತೆಗೆದುಕೊಂಡದ್ದಾಗಲೀ ಇದುವರೆಗೆ ತಮಗೆ ತಿಳಿಯದ ವಿಷಯ. ಬಹುಶಃ ಎರಡು-ಮೂರು ದಿನಗಳಿಂದ ಆಫೀಸಿನ ಕಡೆ ಹೋಗಿರಲಿಲ್ಲವೇನೋ...ಆದರೂ ಎಂತಹ ಅನಿರೀಕ್ಷಿತ ?

ಪ್ರಶ್ನೆ ಮನದಲೆಯಲ್ಲಿ ಫಣಿಯಂತೆ ಹೆಡೆಯೆತ್ತಿ ನಿಂತಿತು. ಹೃದಯ ಕುಂಡಲಿನಿಯಲ್ಲಿ ವಿಚಿತ್ರ ಆಲೋಡನೆಯುಂಟಾಯಿತು. ವಿಷಯ ಕಾದ ಸೀಸದಂತೆ ಕರ್ಣಪಟಲಗಳಿಗೆ ತಾಗಿ ವಿಚಾರ ಶಕ್ತಿಯು ಬುಡಮೇಲಾದರೂ ಎಲ್ಲರ ಮುಂದೆ ಶೋಕ ಪ್ರದರ್ಶಿಸಬಹುದಾದ ವಿಷಯವೂ ಅಲ್ಲ ಅದು. ತನ್ನನ್ನು

ತಾನು ಹತೋಟಿಯಲ್ಲಿಟ್ಟುಕೊಳ್ಳಲು ಶಕ್ತಿಮೀರಿ ಶ್ರಮಿಸಿದ್ದಳು ನಿರ್ಮಲ. ದೇಹದಾದ್ಯಂತ ನಸುಕಂಪನದ ಅಲೆ ಹರಿದಾಡ ಹತ್ತಿತು. ಪ್ರಾಸಂಗಿಕವಾಗಿ-ಸಾಂಪ್ರದಾಯಕವಾಗಿ ಹೊಸ ವ್ಯಕ್ತಿಯನ್ನು ಸ್ವಾಗತಿಸುವುದು ಕೂಡ ಆ ಘಳಿಗೆಯಲ್ಲಿ ಮರೆತು ಹೋಯಿತು. ಅಮರನಾಥನ ರಾಜೀನಾಮೆಯ ವಿಚಾರ ತನಗೆ ಗೊತ್ತಿಲ್ಲವೆನ್ನುವುದೂ ಸಹ ಅವಮಾನಕರವೇ....ಆ ಮುಹೂರ್ತದಲ್ಲಿ ಉಂಟಾದ ಎಣೆಯಿಲ್ಲದ ಆಶ್ಚರ್ಯಾವೇಗವನ್ನು ಅದುಮಿ ಹಿಡಿಯುವುದು ಒಂದು ಸಾಹಸ ಪ್ರಸಂಗವೇ ಆಯಿತೇನೋ. ಆದರೂ ಸಾವರಿಸಿಕೊಂಡು ಜಾಹೀರಾತಿಗೆ ಬೀರುವಂತಹ ಕೃತಕ ನಗೆಯನ್ನು ಬೀರಿದಳು ನಿರ್ಮಲ.

ಅಪರಿಚಿತ ವ್ಯಕ್ತಿ ಮಂದಸ್ಮಿತನಾಗಿ ಅಂದ,

"ನನ್ನ ಹೆಸರು ರಾಮತೀರ್ಥ....ನನಗೆ ಎಂಟು ವರುಷಗಳ ಅನುಭವ ವಿದೆ."

ಲೀಲಾ ಪಾರ್ವತಿಯರು ಆತನೊಡನೆ ಪ್ರಾಸಂಗಿಕವಾಗಿ ಕುಶಲ ಪ್ರಶ್ನೆ ನಡೆಸಿದರು. ನಿರ್ಮಲಳ ನಿಶ್ಶಬ್ದ ಪ್ರಕೃತಿಯ ಅಂತರಾಳದಲ್ಲಿ ಕೋಲಾಹಲ ಪೂರ್ಣ ಯುದ್ಧ ನಡೆಯುತಿತ್ತು. ಆದರೂ ಸಹ ಶ್ರೀಮದ್ಗಾಂಭೀರ್ಯವನ್ನು ಪ್ರದರ್ಶಿಸದೆ ಗತ್ಯಂತರವಿರಲಿಲ್ಲ. ಕೈಯ್ಯಲ್ಲಿದ್ದ ಮಾಸಿಕವನ್ನು ಮುಚ್ಚಿ ನೂತನ ಸಹೋದ್ಯೋಗಿಯನ್ನು ಸ್ವಾಗತಿಸುತ್ತ ಎರಡು ಮಾತಿನಲ್ಲಿ ಪೂರ್ವೋತ್ತರವನ್ನೂ ಕುಶಲವನ್ನೂ ವಿಚಾರಿಸಿಕೊಂಡಳು. ಮೂವರ ಪರಿಚಯವನ್ನೂ ಪಡೆದುಕೊಂಡನಂತರ ರಾಮತೀರ್ಥ ನಿರ್ಗಮಿಸಿದ. ಪಾರ್ವತಿ ಒಮ್ಮೆಲೇ ಕಮನೀಯ ಕುತೂಹಲದಿಂದ ಕೇಳಿದಳು.

"ನಿನಗಿದು ಗೊತ್ತೇ ಇರಲಿಲ್ಲವೇ ನಿರ್ಮಲಾ ?"

ಎಂತಹ ಮರ್ಮಾಂತಿಕ ಪ್ರಶ್ನೆ ?

ಅಜ್ಞಾತ ಶಂಕೆ-ಭಯಗಳಿಂದ ಹೃದಯ ಜರ್ಜರಿತವಾದಂತೆ ಭಾಸವಾಯಿತು. ನಿರ್ಮಲ ಬಹಳ ಕಷ್ಟದಿಂದ ತನ್ನನ್ನು ತಾನು ನಿಗ್ರಹಿಸಿಕೊಂಡು ಉತ್ತರಿಸಿದಳು "ಗೊತ್ತಿತ್ತು....!"

"ನಿಜವಾಗಿ....?"

"ಹೌದು. ಗೊತ್ತಿದ್ದರೂ ಮಾಡುವುದೇನು ?" ಅತ್ಯಂತ ಉದಾಸೀನದಿಂದ ನುಡಿಯನ್ನು ಹೊರಹಾಕಿದಳು. ಚಿದಾಕಾಶದ ಅತಲಗಳಲ್ಲಿ ಜಿರು

ಗಾಳಿ ಬೀಸತೊಡಗಿತ್ತು. ಹೃದಯ–ಮಸ್ತಿಷ್ಕಗಳೆರಡೂ ನಿಶ್ಚೇಷ್ಟವಾದಂತೆ ....ಒಂದೆರಡು ಕ್ಷಣ ಕಣ್ಣ ಮುಂದಿನ ವಸ್ತುಸಮಸ್ತವೂ ಗಿರಗಿರ ಸುತ್ತಿದಂತಾಯಿತು. ರಕ್ತದ ಅತೀವ ಒತ್ತಡದಿಂದ ನರಗಳು ಸೀಳಿ ಹೋಗುತ್ತಿವೆಯೋ ಎಂಬಷ್ಟು ಸಿಡಿತ....ದೇಹಾಂತರಿತ ಭಯಂಕರ ಅನುಭವ–ಕೊನೆಗಾಣದ ಆ ಪ್ರತಿಕ್ರಿಯೆಗಳನ್ನು ತಡೆಯಲಾಗದೆ ಮನೆಗೆ ಹೋಗಿಬಿಡಲೇ ಎಂಬ ಯೋಚನೆ. ಆದರೆ, ಮಧ್ಯಾಹ್ನದ ತರಗತಿಗಳನ್ನು ಮುಗಿಸದೆ ಹೋಗುವಂತಿಲ್ಲ.

ಅಮರನಾಥನ ವರ್ತನೆ ವಿಚಿತ್ರವಾಗಿದ್ದರೂ ಹೇಳದೆ ಹೋಗುವಷ್ಟು ಉದ್ಧಟತನ ತೋರಿಯಾನೆಂದು ಎಂದೂ ಅನಿಸಿರಲಿಲ್ಲ. ನಂಬಿಸಿ ಕೊರಳು ಕೊಯ್ಯುತ್ತಾನೆಂದು ಆಗ ಯಾರಾದರೂ ಸ್ಪಷ್ಟವಾಗಿ ಹೇಳಿದ್ದರೂ ಎಚ್ಚರಿಸಿದ್ದರೂ, ಖಂಡಿತವಾಗಿಯೂ ನಂಬುವುದಕ್ಕಾಗುತ್ತಿರಲಿಲ್ಲ. ಇನ್ನು ನನ್ನ ಗತಿಯೇನು? ಪುನಃ ಪ್ರಾಣಗಳನ್ನು ತೆತ್ತು, ಈ ಬರಡು ಬಾಳನ್ನು ಹೊತ್ತು ಬದುಕುವುದಾದರೂ ಏಕೆ? ಎಂಬ ಪ್ರಶ್ನೆ ಅವ್ಯಾಹತವಾಗಿ ಹೃದಯ ಸಂಪುಟವನ್ನು ಹಿಂಡಿ ತುಟಿಗಳು ನಡುಗತೊಡಗಿದವು. ಕಣ್ಣುಗಳಲ್ಲಿ ಲಾಲಿಮೆ ಮಿಂಚಿನಂತೆ ಮೂಡಿತು. ಗೆಳತಿಯರ ಮುಂದೆ ಮನೋದೌರ್ಬಲ್ಯವನ್ನು ತೋರಗೊಡದಿರಲು ಮಾಸಿಕದ ಮೇಲೆ ಸರ್ವ ಸಹಸಾ ಕಣ್ಣಾಡಿಸತೊಡಗಿದಳು.

ಲೀಲಾ-ಪಾರ್ವತಿಯರ ಕಣ್ಣುಗಳು ಪರಸ್ಪರ ಮೌನ ಸಂಭಾಷಣೆ ನಡೆಸಿದುವು. ಆತನ ಇತ್ತೀಚಿನ ವರ್ತನೆ ವ್ಯತಿರಿಕ್ತ ಫಲಿತಾಂಶವನ್ನು ಸಾರಿ ಹೇಳುತಿತ್ತು. ಆದರೂ ಸಹ....ನಂಬುಗೆಯನ್ನು ಬಿಟ್ಟುಕೊಟ್ಟಿರಲಿಲ್ಲ. ಅಂತಲೇ ಅತ್ಯಂತ ಕುತೂಹಲದಿಂದ ಪ್ರಶ್ನೆ ಹಾಕಿದಳು ಪಾರ್ವತಿ,

"ಅಮರನಾಥ ನಿನಗೀ ವಿಚಾರ ತಿಳಿಸಿದ್ದರೇ ನಿರ್ಮಲ ? "

ನಿರ್ಮಲ ಒಂದೆರಡು ಕ್ಷಣ ಮಾನಸಿಕ ವೇಗವನ್ನು ಹತ್ತಿಕ್ಕಿ ಅವಳ ಕಡೆ ಹುಬ್ಬೆತ್ತಿ ನೋಡಿದಳು. ಆ ಮುಹೂರ್ತದಲ್ಲಿ ಆಂತರಂಗಿಕ ಅವ್ಯವಸ್ಥೆಯನ್ನೆಲ್ಲ ಹುದುಗಿಟ್ಟಂತೆ ನಯನದ್ವಯಗಳು ಫಳಫಳ ಮಿಂಚಿದುವು. ಸಹಜ ಅನುಭಾವದ ತರಂಗಗಳಿಗೆ ತಾಗಿದಂತೆ ಕಂಠಸ್ವನ ಅತ್ಯಂತ ಸರಳವಾಗಿ ಹೊಮ್ಮಿತ್ತು,

"ಮೊದಲೊಮ್ಮೆ ಹೇಳಿದ್ದರು. ಇತ್ತೀಚೆಗೆ ಅವರನ್ನು ಭೇಟಿಯಾಗಿರಲಿಲ್ಲ."

ಆದರೆ.... !

ವಿಷಯ ಒಗಟಾಗಿ, ಜಟಿಲವಾಗಿ ಅಜ್ಞಾತ ಆಶಂಕೆಯಂತೆ ಬಳಿಯನ್ನು ಸುತ್ತಮುತ್ತ ಹರಡಿದಾಗ ಅರ್ಥೈಸಲಾಗದೆ ಏನೋ ಒಂದು ರೀತಿಯ ಸ್ನೇಹ ಸಹಜವಾದ ಸಲಿಗೆಯಿಂದ ನುಡಿದಳು ಲೀಲಾ.

"ಇದೇನೋ ಒಂದು ರೀತಿಯ ಮಸಲತ್ತು ಎನ್ನಿಸುತ್ತೆ! ಇಬ್ಬರೂ ಕೂಡಿ ನಡೆಸಿರಬಹುದು! ಯುಕ್ತ ಸಮಯದಲ್ಲಿ ನೀನೂ ಕೈಕೊಡುವವಳೇ!"

ವಾಕ್ಯಸರಣಿ ಹಾಸ್ಯ ಪ್ರಧಾನವಾಗಿ ಹರಿಯಿತು.

ಆ ಸಂಚಿಕೆಯ ಸಂಪುಟವ ಮೇಲೆ ಒಡಕು ಸ್ವರವನ್ನು ಹಾಯಿಸಲು ಮನಸ್ಸು ಒಪ್ಪಲಿಲ್ಲ. ಅಂತಲೇ ಅದಕ್ಕನುಗುಣವಾಗಿ ಉತ್ತರಿಸುವ ಅಗತ್ಯ ತೋರಿ ಏನೋ ಒಂದು ರೀತಿಯಲ್ಲಿ ನಾಟಕೀಯವಾಗಿ ಮೈ ಕೈ ಮುರಿಯುತ್ತ ನುಡಿದಳು.

"ನೀವು ಏನಾದರೂ ಅಂದುಕೊಳ್ಳಿ. ಇಂದು ನನಗೆ ಆರೋಗ್ಯವೇ ಚೆನ್ನಾಗಿಲ್ಲ. ಜ್ವರ ಬರುವಂತೆ ಮೈ ಕೈ ನುಲಿತ. ರಜೆ ತೆಗೆದುಕೊಂಡು ಮನೆಗೆ ಹೋಗೋಣವೆನ್ನಿಸುತ್ತೆ. ಈ ಕೊನೆ ಘಳಿಗೆಯಲ್ಲಿ ತೆಗೆದುಕೊಳ್ಳಲು ಮನಸ್ಸು ಬರುವುದಿಲ್ಲ. ಹೇಗಾದರೂ ಕೆಲಸ ಮುಗಿಸಿ ಹೋಗುವೆ."

ಹೆಚ್ಚು ಮಾತು ಬೆಳೆಸುವ ಉತ್ಸುಕಕ್ಕೆ ಅಲ್ಲಿಂದಲ್ಲೇ ತಡೆಗಟ್ಟಿಹಾಕಿ, ಯಾಂತ್ರಿಕವಾಗಿ ತನ್ನ ದಫ್ತರವನ್ನು ತೆಗೆದುಕೊಂಡು ಹೊರಟಳು. ನಿರ್ಮಲ ಮುಖಭಾವ ಗಾಂಭೀರ್ಯದಿಂದ ಕೂಡಿತ್ತು. ಬೆವರಿನ ಬಿಂದುಗಳು ಹಣೆಯ ಮೇಲೆ ತುಂತುರು ತುಂತುರಾಗಿ ಮೂಡಿದ್ದುವು. ಮನಃಪ್ರಾಣಗಳು ಕಳವಳ–ಭಯಗಳಿಂದ ತತ್ತರಿಸಿ ಬಿರುಗಾಳಿಗೆ ಸಿಕ್ಕಿದ ಕದಳಿಯಂತಾಗಿದ್ದುವು. ಹೆಜ್ಜೆ ಹೆಜ್ಜೆಗೂ ಹಾದಿ ಸರಿದರೂ ದೇಹ ಕುಸಿಯುತ್ತಿರುವಂತೆ ಭಾಸವಾಗುತಿತ್ತು. ಹೂದೋಟದ ಸುಂದರ ಹಾದಿಯನ್ನು ಯಾಂತ್ರಿಕವಾಗಿ ಕಳೆದು ತರಗತಿಗೆ ಪದಾರ್ಪಣೆ ಮಾಡಿದಾಗ ಹುಡುಗಿಯರು ತಟ್ಟನೆ ಮಾತುಕತೆಯನ್ನು ಅಷ್ಟಕ್ಕೆ ನಿಲ್ಲಿಸಿ ಎದ್ದುನಿಂತು "ಗುಡ್ ಮಾರ್ನಿಂಗ್ ಮಿಸ್" ಎಂದರು.

"ಒಕ್ಕೊರಲ ದನಿಯಿಂದ ವಿಕಟ ವಿಪ್ಲವ ಚಿತ್ರಾಲೋಕ ಸಂಪೂರ್ಣ ಆಲೋಡಿತವಾಯಿತು. ಆ ಹಾಲ್ಗೆನ್ನೆಗಳಲ್ಲಿ ನಲಿಯುತಿದ್ದ ಅನಾಯಕ ನಗು, ಕಣ್ಣುಗಳ ತುಂಟಭಾವ ಮನೋಜ್ಞವಾಗಿತ್ತು. ಬಾಳಿನ ಕಹಿಯನ್ನು ಇನಿತೂ ಅರಿಯದೆ ಪುಟಿ ಪುಟಿಯುವ ಜೀವಗಳ ಲವಲವಿಕೆ ಮನವನ್ನು ಸೂರೆ

ಗೊಳ್ಳುವಂತಿದ್ದರೂ ಪಾಠ ಹೇಳಲು ಮನಸ್ಸೇ ಇರಲಿಲ್ಲ. ಪ್ರತಿ ವಂದನೆಯನ್ನು ಸಲ್ಲಿಸಿ ವೇದಿಕೆಯನ್ನೇರಿದಳು ನಿರ್ಮಲ. ಬಾಲಜನವೂ ಸಂಪತ್ತಿಯ ಮೇಲೆ ನೋಟ ಹರಿದಾಡಿತು. ತರಗತಿ ಭರ್ತಿಯಾಗಿತ್ತು ; ಯಾರೊಬ್ಬರೂ ಹಿಂದುಳಿದಿರಲಿಲ್ಲ. ಎಲ್ಲರಿಗೂ ನೋಟ್ಸ್ ಕೊಟ್ಟು 'ಬರೆದುಕೊಳ್ಳಿ' ಎಂದು ಹೇಳಿ ಮೇಜಿನ ಮೇಲಿದ್ದ ಪುಸ್ತಿಕೆಯೊಂದನ್ನು ತಿರುವಿಹಾಕುತ್ತ ಕುಳಿತಳು. ಕೈಗಳು ಮರಗೈಗಳಂತೆ ಚಲಿಸುತಿದ್ದುವು. ಬಹಳ ಕಷ್ಟದಿಂದ ಒಂದು ತಾಸು ಕುಳಿತು ಪಾಠವನ್ನು ಗಮನಿಸಿ ಮನೆಯ ಕಡೆ ಹೊರಟಳು. ಹೃದಯಕುಂಡ ಕಲ್ಲು ಹೊತ್ತಂತೆ ಭಾರವಾಗಿತ್ತು.

ಹೊತ್ತು ನಾಲ್ಕರ ಅಂಚಿಗೆ ಸರಿದಿತ್ತು. ಮೋಡಗಳ ನೆಲೆಯಲ್ಲಿ ಸೂರ್ಯ ಥಳಥಳಿಸುತಿದ್ದ, ವಾತಾವರಣ ಉಷ್ಣವಾಗಿದ್ದರೂ ಮಧುರ ಗಂಧದಿಂದ ಕೂಡಿತ್ತು.

ಎರಡು ಮೈಲಿಗಳ ಹಾದಿ ಹೇಗೆ ಸರಾಗವಾಗಿ ಕಳೆಯಿತೋ ಅದು ಗಮನಕ್ಕೆ ಬಂದಿರಲಿಲ್ಲ. ಯುಕ್ತ ಸ್ಥಳವನ್ನು ತಲುಪಿದಾಗ ಎಲ್ಲೂ ಕುಸಿದು ಬೀಳಲಿಲ್ಲವಲ್ಲಾ ಎಂಬ ಸಮಾಧಾನ; ಒಡಲುದುಂಬಿದ ದುಃಖವನ್ನು ಸಹಿಸಲಾರೆನಲ್ಲಾ ಎಂಬ ಪರಿತಾಪ.

ಇದುವರೆಗೂ ಕಡು ಕಷ್ಟದಿಂದ ನಲುಗಿದ ಜೀವವಾಗಿದ್ದರೂ ನಂಜಿಸಿ ಕೊರಳು ಕೊಯ್ಯುವ ಮಾನವ ಹೃದಯದ ನಂಜನ್ನು ಎಂದೂ ಉಂಟಿರಲಿಲ್ಲ; ಘೋರ ಘೋರ ಪರಿಣಾಮವನ್ನು ಯೋಚಿಸಿಯೂ ಇರಲಿಲ್ಲ. ಮೇಲಾಗಿ ಕಿಂಕುರ್ವಾಣತೆ ತುಂಬಿದ ಮನಸ್ಸಿಗೆ ಸಮಯೋಚಿತ ಪರಿಜ್ಞಾನವೂ ಮೂಡದು.

ಹಾ.... !



ಅಂದು, ಬೆಳಗಿನ ಸುಮಧುರ ವಾತಾವರಣದಲ್ಲಿ—ಉತ್ಸಾಹ ತುಂಬಿದ ಘಳಿಗೆಯಲ್ಲಿ—ಜೀವನದ ವಿಜಯ ಕೇತನವನ್ನು ಘೋಷಿಸುವಂತೆ ಬಿ.ಎಡ್., ಪರೀಕ್ಷೆಯ ಫಲಿತಾಂಶ ಹೊರಬಿದ್ದ ದಿನ ಆನಂದದ ಮೂಟೆಯಾಗಿ ಅಮರನಾಥ ಅಂದಿದ್ದ,

"ಹೃತ್ಪೂರ್ವಕವಾದ ಅಭಿನಂದನೆಗಳು!"

"ನಿಮಗೂ ಹೃತ್ಪೂರ್ವಕವಾದ ಅಭಿನಂದನೆಗಳು!" ಪ್ರತಿವಂದಿಸಿದಳು ನಿರ್ಮಲ.

"ನೀವು ಉತ್ತೀರ್ಣವಾಗುವ ವಿಚಾರ ಎಲ್ಲರಿಗೂ ಖಚಿತವಾಗಿತ್ತು. ಆದರೆ ನನ್ನದೇ ಆಶ್ಚರ್ಯ! ನಾನು ಖಂಡಿತ ಉತ್ತೀರ್ಣನಾಗುವೆನೆಂದು ನಂಬಿರಲಿಲ್ಲ. ಬಹುಶಃ ಯಾವುದೋ ಪುಣ್ಯಜೀವಿಯ ಪ್ರಭಾವ ನನ್ನನ್ನು ಕಾಪಾಡಿರಬಹುದು!"

ನುಡಿ ಅರ್ಥಗರ್ಭಿತವಾಗಿತ್ತು. ಕಣ್ಣುಗಳಲ್ಲಿ ವಿನೂತನ ಕಾಂತಿ ಮಿನುಗುತಿತ್ತು.

ಆತನ ರೀತಿ ಅರ್ಥವಾಗದಿದ್ದರೂ ಬಹುಶಃ ತನ್ನ ತಾಯಿಯನ್ನು ಕುರಿತು ಹೇಳಿರಬಹುದೆಂದು ಭಾವಿಸಿಕೊಂಡಳು ನಿರ್ಮಲ. ಅದರಿಂದ ಅವಳಿಗೆ ನಿಜವಾಗಿಯೂ ಸಂತಸ ಮೂಡಿತು. ತುಟಿಗಳಲ್ಲಿ ಎಳೆನಗುವನ್ನು ಸೂಸಿ ಉತ್ತರಿಸಿದಳು,

"ಹೌದು; ಅಮರಬಾಬೂ! ಹೆತ್ತವರ ಭಾಗ್ಯ."

"ಹೆತ್ತವರದು ಮಾತ್ರವೇನು? ಜೀವನ ಭಾಗಿಗಳದೂ ಉಂಟಷ್ಟೆ?"

"ಹೌದು; ಅದೂ ಉಂಟು......ಅವರಿನ್ನೂ ಪೀಠದಲ್ಲಿ ಉಪಸ್ಥಿತರಿಲ್ಲವಾದ್ದರಿಂದ ಹೆಸರಿಸುವುದು ಪ್ರಯೋಜನವಿಲ್ಲ ಎಂದು ಕೈ ಬಿಡಲಾಯಿತು; ಕೋಪಿಸಿಕೊಳ್ಳಬಾರದು!"

ಎರಡೂ ಕಡೆಯಿಂದ ಎಳೆನಗುವಿನ ಚಿಲುಮೆ ಉಕ್ಕಿ ಹರಿಯಿತು.

ಅಮರನಾಥ ತಾರುಣ್ಯಸಹಜವಾದ ಉದ್ವೇಗದಿಂದ ಪುಳಕಿತನಾದ. ನಯನಗಳು ಎರಡು ಜ್ವಲಂತ ಗ್ರಹಗಳಂತೆ ಉಜ್ವಲವಾಗಿ ಬೆಳಗಿದುವು. ಸಂಕೋಚರಹಿತ ಅರ್ಥಪೂರ್ಣವಾಣಿಯಲ್ಲಿ ನುಡಿದ,

"ಈ ಸರಸ್ವತೀ ಪೀಠ, ಈ ವಿಲೋಲವಾಯು, ಈ ನೀಲಾಕಾಶ ಸಾಕ್ಷಿಯಾಗಿ ನನ್ನ ಜೀವನದ ಅರ್ಥವತ್ತಾದ ಗಾಥೆಯ ಸಾಕ್ಷಾತ್ಕಾರ ನನ್ನ ಎದುರಿನಲ್ಲಿಯೇ ಆಗಿದೆ!"

ನಿರ್ಮಲೆಯ ಕಪೋಲಪಾಲಿ ಚಂದನಪೂರಿದಂತೆ ಒಮ್ಮಿಂದೊಮ್ಮೆಲೇ ರಂಗು ತಳೆಯಿತು. ಆ ಕ್ಷಣವೇ ಅಲ್ಲಿಂದ ಕಾಲ್ತೆಗೆಯುವ ಮನಸ್ಸು. ಆದರೆ

ಮೌನವೂ ಲಜ್ಜೆಯೂ ಸಮ್ಮತಿ ಸೂಚಕವಾಗುವುದು ಎಂಬುದು ಆತ್ಮಗತ ಅಂಶ. ಅಂತಲೇ ದೃಢವಾಗಿ ನಿಂತು ದೀಪ್ತಕಂಠದಿಂದ ಉತ್ತರಿಸಿದಳು,

"ಈ ಶರೀರ ಭೂಮಿಗೆ ಭಾರ ಸ್ವರೂಪವಲ್ಲ. ಸರಸ್ವತೀ ಮಂದಿರದಲ್ಲಿ ವಿನಮ್ರದಾಸಿಯಾಗಿ ಜೀವನವನ್ನು ಸಾರ್ಥಕಗೊಳಿಸಬಲ್ಲೆ. ವಿಧಾತನ ಸೃಷ್ಟಿ ಉದ್ದೇಶವಿಲ್ಲದೆ ನಡೆಯುವುದಿಲ್ಲ ಅಮರಬಾಬೂ!"

"ಅಂತಲೇ ನಿಮ್ಮ ಸೃಷ್ಟಿಯಾಗಿದೆ ಎಂಬುದು ನನಗೂ ಗೊತ್ತು ನಿರ್ಮಲ. ಆದರಿಂದಾಗಿಯೇ ನಾನು ಬಾಯ್ತೆರೆದದ್ದು. ಮುಂದೆ ನೀವೇ ನೀವಾಗಿ ಜೀವನವನ್ನು ರೂಪಿಸಿಕೊಳ್ಳುವ ಭಂಗ ನಿಮಗೆ ಬಾರದಿರಲಿ ಎಂದು ನಾನು ಸಹಾಯ ಹಸ್ತ ನೀಡಲು ಉದ್ದೇಶಿಸಿರುವೆ."

ಅಕ್ಷರ ಅಕ್ಷರದಲ್ಲೂ ಸಂಭ್ರಮಯುಕ್ತ ಪಟುತ್ವ ಕಾಣಿಸುತಿತ್ತು. ಮುಖ ಮಂಡಲದಲ್ಲಿ ತುಂಟತನ ಮುದ್ರಿತವಾಗಿತ್ತು. ಇಂತಹ ಅನುಭವ ಈಗಾಗಲೇ ಅನೇಕ ಬಾರಿ ಆಗಿದ್ದುದರಿಂದ ತಕ್ಷಣ ಶರಣಾಗುವಂತಹ ಮಂದ ಮತಿಯಾಗಿ ರಲಿಲ್ಲ ನಿರ್ಮಲ. ಒಂದೆರಡು ಕ್ಷಣ ಯೋಚಿಸಿ ಮೆಲುದನಿಯಲ್ಲಿ ನುಡಿಯನ್ನು ಹೊರಹಾಕಿದಳು,

"ನನಗಂತಹ ಅವಸರವೇನಿಲ್ಲ. ಈಗಿರುವ ಸಂಸಾರದ ಹೊರೆಯೇ ನನಗೆ ಸಾಕಾಗಿದೆ. ಇದಕ್ಕಿಂತ ಹೆಚ್ಚಿನದನ್ನು ಹೊರಲು ನಾನಿನ್ನೂ ಶಕ್ತಳಾಗಿಲ್ಲ."

-"ನಿಮಗೆ ಅಂತಹ ಭಾರವೇನೂ ಬೀಳಲಾರದು. ನೀವು ಯೋಚಿಸ ಬೇಕಾಗಿಲ್ಲ."

"ನನ್ನನ್ನು ಕ್ಷಮಿಸಿ ಬಿಡಿ."

"ನೀವು ಅಷ್ಟು ಮುಂದೆ ಹೋಗಬೇಕಾಗಿಲ್ಲ. ಕ್ಷಮೆ ಎಂಬುದೇ ಮಾನವ ಧರ್ಮ."

ಪ್ರಸಂಗೋಚಿತವಾಗಿ ಮುಗುಳುನಕ್ಕಳು ನಿರ್ಮಲ. ಹೃದ್ದೇಶದಲ್ಲಿ ನೂತನ ಭಾವವಿಶೇಷ ಮೆಲ್ಲನೆ ಮೊಳಕೆಯೊಡೆಯಿತು. ಒಂದೆರಡು ಘಳಿಗೆ ಯೋಚನೆಯ ಅಲೆಯಲ್ಲಿ ಸಿಕ್ಕಿ ಮರವಟ್ಟಂತಾದಾಗ ಅಮರನಾಥನ ವಾಣಿ ಕರ್ಣಪಟಲಗಳಿಗೆ ವಿನಯಪೂರ್ವಕವಾಗಿ ತಾಗಿತು.

"ನಿಮ್ಮ ಅಂತರಾತ್ಮನಿಗೆ ಏನು ತೋರುತ್ತದೆಯೋ ಅದನ್ನೇ ಹೇಳಿ

ಯೋಚಿಸಿ ಹೇಳಿದ ಮಾತು ಎಲ್ಲಾ ಸಮಯದಲ್ಲೂ ದೃಢವಾಗಿರುವುದು ಸಾಧ್ಯವಿಲ್ಲ. ಮನಸ್ಸು ಎಷ್ಟೆಂದರೂ ಚಂಚಲ.”

ಅರೆ....... ! ಎಂತಹ ಅಶ್ವರ್ಯ?

ಅವರ ಅಂತಃಪ್ರಜ್ಞೆ ಎಷ್ಟುಬೇಗನೆ ಗ್ರಹಿಸಿತು? ನಿಜವಾಗಿಯೂ ಪರಸ್ಪರ ಅಂತಃಸ್ಥಲಸಾಮ್ಯ ಇದ್ದರೂ ಇರಬಹುದು ......ಎಂಬ ಭಾವನೆ ಇದ್ದಕ್ಕಿದ್ದಂತೆಯೇ ಮನೋಮಂದಿರವನ್ನು ಆವರಿಸಿತು. ಏನೆನ್ನಬೇಕೋ ಹೊಳೆಯಲಿಲ್ಲ. ಆ ಮುಹೂರ್ತದಲ್ಲಿ ನವೀನ ಜನ್ಮಧಾರಣೆ ಮಾಡಿದಂತೆ ನಿಮಿಷಗಳೆಲ್ಲ ಕಲಬೆರತು ಕಲಸುಮೇಲೋಗರವಾದುವು. ನಿಮೀಲಿತ ನೇತ್ರಗಳು ಗರಿಕೆ ಹಾಸಿನ ಮೇಲೆ ಹರಿದಿದ್ದುವು-ಕೌಲೀನ್ಯ ಭಾರದಿಂದ ಕುಗ್ಗಿದಂತೆ.

ಅಮರನಾಥ ಒಂದು ಘಳಿಗೆ ನಿಟ್ಟಿಸಿದ. ಪಚ್ಚಕಾಂತಿಯ ಉದ್ಯಾನದ ಮಧ್ಯೆ ನಿಂತ ನಿರ್ಮಲೆ ಮನೋಹರೆಯಾಗಿ ಕಂಡಳು. ಮರುಕ್ಷಣದಲ್ಲಿ ವಿದ್ಯಾಪೀಠದ ಗಂಟೆ ಉಚ್ಚಸ್ವರದಲ್ಲಿ ಮೊಳಗಿತು-ಕರ್ತವ್ಯವನ್ನು ಸಾರಿ ಹೇಳುವಂತೆ.

ಠಣ್. ಠಣ್. ಠಣ್. ಠಣ್. ಠಣ್. ಠಣ್ !

ಎಲ್ಲರೂ ಅವರವರ ತರಗತಿಗಳಿಗೆ ಹೊರಟರು. ಅಮರನಾಥ-ನಿರ್ಮಲೆಯರೂ ಅಲ್ಲಿಂದ ಕಾಲ್ತೆಗೆದರು.

ಅಂದಿನ ಕರ್ತವ್ಯದ ಹೊಣೆಯನ್ನು ಇಳುಹಿದನಂತರ ಗ್ರಂಥಾಗಾರಕ್ಕೆ ಕಾಲಿಟ್ಟಾಗ ಕಾಲಮಾನ ಐದರ ಅಂಚನ್ನು ದಾಟಿತ್ತು. ಅನುಭೂತಸಂಧ್ಯಾಶಾಂತಿಗೆ ಮನವನ್ನು ತೆತ್ತು ಸರಸ್ವತೀ ಭಂಡಾರದಲ್ಲಿ ಅದೆಷ್ಟು ಹೊತ್ತು ಕಳೆದಿದ್ದಳೋ....ಒಂದೆರಡು ಪುಸ್ತಕವನ್ನು ಆರಿಸಿಕೊಂಡು ಮನೆಯಕಡೆ ಹೆಜ್ಜೆ ಹಾಕಿದಾಗ ಅಸ್ತಗಿರಿಯ ಮಸ್ತಕದ ಮೇಲೆ ಶಾಂತಸೂರ್ಯ ಮಾಂಗಲ್ಯದ ಮಳೆಗರೆಯುತ್ತಿದ್ದ. ಶರೀರ ದಣಿದಿದ್ದರೂ ಆ ಸ್ವರ್ಣಧಾರೆಯಲ್ಲಿ ಮಿಂದು ಪುಳಕಿತವಾಯಿತು. ಹಾದಿ ಸ್ವಲ್ಪ ದೂರ ಏಕನಿಷ್ಠೆಯಿಂದ ಸಾಗಿತ್ತೇನೋ.... ಅಷ್ಟರಲ್ಲಿ ಹಿಂಬಾಲಿಸಿಬಂದ ಅಮರನಾಥ ಹಸನ್ಮುಖಿಯಾಗಿ “ನನಗೂ ಈ ಕಡೆ ಹೋಗುವ ಪ್ರಸಂಗ ಬಂತು.” ಎಂದ.

“ಓ ...... ಹೋ!”

ನುಡಿ ಸಮಯೋಚಿತವಾಗಿ ಹೊರಬಿತ್ತು.

“ನಿಮಗೆ ಓದು ಮುಂದುವರಿಸುವ ಯೋಚನೆ ಇದೆಯೆ?”

"ಇವೆ. ನನಗಿಂತ ಹೆಚ್ಚು ಅಂಕ ಪಡೆದಿರುವವರು ಇರುವುದರಿಂದ ನನಗೆ ಎಂ. ಎ. ಗೆ ಸೀಟು ಸಿಗುವ ಸಾಧ್ಯತೆ ತುಂಬ ಕಡಿಮೆ. ನನಗೆ ಅದೇ ಯೋಚನೆಯಾಗಿದೆ."

"ಒಂದುವೇಳೆ ಸಿಕ್ಕಿದರೆ ...... ?"

"ಸಿಕ್ಕಿದರೆ ಓದುವೆ."

"ನನ್ನ ಸಬ್ಜೆಕ್ಟಿನಲ್ಲಿ ಈಗ ಸೀಟಿಗೆ ಕೊರತೆ ಇಲ್ಲ. ಆರ್ಥಿಕ ಪರಿಸ್ಥಿತಿಯೇ ಕಷ್ಟ. ಸಂಬಳ ಸಹಿತ ರಜೆ ಸಿಕ್ಕುವುದಾದಲ್ಲಿ ಆದೀತು. ಆದರೆ ಅದು ಸಾಧ್ಯವೇ ಇಲ್ಲ."

"ಮುಂದಿನ ಅಭ್ಯಾಸ ಮಾಡದಿದ್ದರೆ . ಕಾಲಾನುಕಾಲಕ್ಕೂ ಇಷ್ಟೆ."

"ನಿಜ ... ....ಏನು ಮಾಡುವುದೋ ಅರ್ಥವಾಗುತ್ತಿಲ್ಲ."

"ನಿಮ್ಮವರಾರಾದರೂ ಸಹಾಯ ಮಾಡುವಂತಿದ್ದರೆ ನೋಡಿ...."

"ಕಷ್ಟ." ದನಿ ಭಾರವಾಗಿತ್ತು, ಚಿಂತಾಕುಲತೆಯಿಂದ ವಿವಶವಾದಂತೆ ನಸು ತಲೆಬಾಗಿ ಮುಂದುವರಿದ. ಕಣ್ಣುಗಳಲ್ಲಿ ಹೊಮ್ಮಿದ ಭಾವನಾದೀಪ್ತಿ ನಿಸ್ಸಹಾಯಕತೆಯನ್ನು ಸಾರಿ ಹೇಳುವಂತಿತ್ತು,

"ಕೆಲವು ದಿನ ಕಾದು ನೋಡಿರಿ. ನಿಮ್ಮ ಸಂಪಾದನೆಯಲ್ಲಿ ಅರ್ಧ ಭಾಗ ವನ್ನು ಮುಂದಿನ ಅಭ್ಯಾಸಕ್ಕಾಗಿ ಮೀಸಲಿಡುವಷ್ಟು ಉಳಿತಾಯ ಮಾಡಿ ಕೊಳ್ಳಿರಿ." ಎಂದಳು ನಿರ್ಮಲ.

"ನಿಮ್ಮ ಸಲಹೆಗೆ ಧನ್ಯವಾದಗಳು. ಆದರೆ ನಾನೇ ಹಿರಿಯ ಮಗನಾದುದ ರಿಂದ ಸಂಸಾರದ ಹೊಣೆ ನನ್ನ ಮೇಲಿದೆ. ಸಧ್ಯಕ್ಕೆ ಉಳಿತಾಯ ಸಾಧ್ಯವೇ ಇಲ್ಲ." ನೈರಾಶ್ಯಪೂರ್ಣಧ್ವನಿ ಎದೆಯಾಳದಿಂದ ಹರಿದು ಬಂತು.

ಸ್ವಲ್ಪದೂರ ಮೂಕ ನಿವೇದನೆಯಿಂದ ಸಾಗಿತು—ಹಾದಿ. ಅನಂತರ ಅಮರನಾಥ ಮೌನ ಮುರಿದ,

" ನೀವು ಮುಂದಾಗಿ ಮನೆಗೆ ಹೋಗಬೇಕಿತ್ತೇನೋ........ನನ್ನಿಂದಾಗಿ ನಡಿಗೆ ನಿಧಾನವಾಯಿತು,ಅಲ್ಲವೇ ?

"ಪರವಾಯಿಲ್ಲ........"

"ನಿಮ್ಮದೂ ಸಹ ಕಷ್ಟ. ನನ್ನಂತೆಯೇ ಹೆಚ್ಚಿನ ಹೊಣೆಗಾರಿಕೆ ಹೊತ್ತಿದ್ದೀರಿ. ದೇವರು ನಿಮಗೆ ಸಹಾಯ ಮಾಡಲಿ." ಎಂದ ಅವನು ಸ್ವಲ್ಪ ಹೊತ್ತು

ಸುಮ್ಮನಿದ್ದು ಪುನಃ ಮುಂದುವರಿದ "ಈಗ ಹಿಂದಿನಂತಲ್ಲ. ಕಾಲ ತೀವ್ರ ಗತಿಯಲ್ಲಿ ಬದಲಾಯಿಸುತ್ತಿದೆ. ಹೆಣ್ಣು-ಗಂಡು ಕೂಡಿ ದುಡಿದರೇನೇ ಜೀವನ ಸಂವೃದ್ಧಿ. ಪುರುಷನಿಗಿರುವಷ್ಟೆ ಹೊಣೆಗಾರಿಕೆ ಸ್ತ್ರೀಯರಿಗೂ ಇದೆ. ಅದನ್ನು ನಮ್ಮ ಅಖಿಲ ಸ್ತ್ರೀಜನ ಕಂಡುಕೊಳ್ಳಬೇಕು."

ನಿರ್ಮಲ ವಿಷಯವನ್ನು ಹೃತ್ಪೂರ್ವಕವಾಗಿ ಸಮರ್ಥಿಸಿದರೂ ಯಾವ ಉದ್ದೇಶದಿಂದ ಆ ನುಡಿಯನ್ನು ಹೊರಗೆಡಹಿದನೆಂಬುದು ಅರ್ಥವಾಗಲಿಲ್ಲ. ಸೈದ್ಧಾಂತಿಕವಾಗಿಯೋ ಅಥವಾ ಸಾಂತ್ವನಪೂರ್ವಕವಾಗಿಯೋ ಎಂಬುದೂ ಹೊಳೆಯಲಿಲ್ಲ. ಹಾಗೇ ಹಾದಿಯ ನೇರಕ್ಕೆ ದೃಷ್ಟಿಯನ್ನು ಹರಿಸಿ ಮನದಲ್ಲಿ ಅಲೆಯಲೆಯಾಗಿ ಚರಿಸುವ ವಿಚಾರ ತರಂಗಗಳನ್ನು ಅವಲೋಕಿಸುತ್ತ ಮುಂದುವರಿದಳು. ಏನು ಹೇಳಲೂ ಮನಸ್ಸು ಒರಲಿಲ್ಲ.

ಅಮರನಾಥ ತಾನೇ ತಾನಾಗಿ ವಿಷಯವನ್ನು ಮುಂದಿಟ್ಟ,

"ನಾವೊಂದು ಬಯಸಿದರೆ ವಿಧಿ ಇನ್ನೊಂದು ಬಯಸುತ್ತದೆ. ಇರಲಿ ನಾನೊಂದು ಉದ್ದೇಶಕ್ಕೆ ಕಟ್ಟುಬಿದ್ದಿರುವೆ. ಅದೆಂದರೆ, ನನಗೆ ಮೂವರು ತಂಗಿಯರಿದ್ದಾರೆ. ಅವರನ್ನು ಓದಿಸಿ ಕೆಲಸಕ್ಕೆ ಸೇರಿಸಿ ಅವರ ಜನ್ಮವನ್ನು ಸಾರ್ಥಕಪಡಿಸುವುದು ಅನಂತರ ಮದುವೆಯ ಪ್ರಶ್ನೆ. ಅದಕ್ಕೆ ನಾನು ಅಂತಹ ಮಹತ್ವ ಕೊಡುವುದೂ ಇಲ್ಲ. ಆ ವಿಚಾರದಲ್ಲಿ ಅವರಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಡುವೆ. ಅಂದರೆ ನನ್ನ ಸಹಕಾರ-ಸಹಾನುಭೂತಿ ಇಲ್ಲ ಎಂದೇನಿಲ್ಲ. ಅವರಿಚ್ಛೆಯೇ ನನ್ನಿಚ್ಛೆ!"

ನಿರ್ಮಲ ಮಾತಾಡಲಿಲ್ಲ. ವಿಷಯವನ್ನರಿತು ಅನಿರ್ವಚನೀಯ ಆನಂದ ಸ್ರೋತದಲ್ಲಿ ಅಂತರಂಗ ನಿಮಜ್ಜಿತವಾಯಿತು. ಅದೇ ನೇರಕ್ಕೆ ವಿಷಯ ತನ್ನೆಡೆಗೆ ಹರಿಯಿತು. ತನ್ನ ತಂದೆ ರಾಮರಾಯ ಬದುಕಿರುವಾಗ ಹೈಸ್ಕೂಲಿನಿಂದ ಮುಂದಕ್ಕೆ ಓದುವುದೇ ಬೇಡವೆಂದು ವಿದ್ಯಾಪೀಠದ ಮೆಟ್ಟಲನ್ನು ಇಳಿಸಿದ್ದ. ಅದೇ ವರ್ಷ ರಾಮರಾಯನ ಕಾಲವಾದನಂತರ ಕಾನ್ವೆಂಟಿನವರ ಸಹಾಯದಿಂದ ಸ್ಕಾಲರ್‌ಶಿಪ್ ಪಡೆದು ವಿದ್ಯಾಭ್ಯಾಸವನ್ನು ಮುಂದುವರಿಸಿದ್ದಳು. ಆಗಿನಿಂದಲೇ ಜೀವನದ ಬವಣೆ ಹೆಗಲೇರಿತು. ಇಬ್ಬರು ತಮ್ಮಂದಿರು, ತಾಯಿ, ಚಿಕ್ಕ ತಂಗಿ ಇವರ ಹೊಣೆಗಾರಿಕೆ ಹೆಜ್ಜೆ ಹೆಜ್ಜೆಯನ್ನೂ ಗಟ್ಟಿಸಿ ಮುಂದೂಡುತಿತ್ತು. ಅಂದಿನಿಂದಲೂ ಮಕ್ಕಳಿಗೆ ಮನೆಪಾಠಮಾಡಿ ಧನಾ

ರ್ಜನೆ ಮಾಡಿದ್ದಾಳೆ. ಬಿ.ಎ. ಬಿಎಡ್., ಮುಗಿಸಿ ಅಲ್ಲೇ ಕಾನ್ವೆಂಟಿನಲ್ಲಿ ಶಿಕ್ಷಕಿಯಾಗಿ ಎರಡು ವರ್ಷ ತುಂಬಿತ್ತು. ಮುಂದಿನ ಅಭ್ಯಾಸವನ್ನು ಕೈಕೊಂಡು ಕಾಲೇಜ್ ಅಧ್ಯಾಪಕಿಯಾಗುವ ಹಂಬಲ ಮನಃಪ್ರಾಣಗಳನ್ನು ಆವರಿಸಿತ್ತು. ಅಷ್ಟು ತನ್ನಿಂದ ಸಾಧ್ಯವಾದರೆ ಸಂಸಾರ ನಿರ್ವಹಣೆ ಹೆಚ್ಚಿನ ಭಾರವಲ್ಲ ಎಂಬ ಯೋಚನೆ ಮನದಲ್ಲಿ....ತಮ್ಮಂದಿರಾದ ಪ್ರಸನ್ನ, ಪ್ರಫುಲ್ಲರ ಕಾಲೇಜು ವಿದ್ಯಾಭ್ಯಾಸಕ್ಕೆ ದುಡಿಮೆಯಲ್ಲಿ ಬಹುತೇಕ ಖರ್ಚಾಗುತ್ತದೆ. ತಂಗಿ-ವಿಮಲೆಯ ವೆಚ್ಚ ಅಷ್ಟಿಲ್ಲದಿದ್ದರೂ ಜೀವನ ವೆಚ್ಚ ಸಾಮಾನ್ಯವೇನಲ್ಲ. ಈ ಸಾಲಿನಲ್ಲಿ ಪ್ರಸನ್ನನ ವಿದ್ಯಾಭ್ಯಾಸ ಮುಗಿಯುವುದರಿಂದ ಹಣ ಸ್ವಲ್ಪ ಮಟ್ಟಿಗೆ ಉಳಿತಾಯವಾಗುವುದು........ಆ ಯೋಚನೆ ಬಂದಾಗ ಜೀವ ನಿಡಿದಾಗಿ ಉಸಿರಾಡಿತು.

ಅಮರನಾಥ ಏನೋ ಒಂದುರೀತಿಯಲ್ಲಿ ಚಿಂತಿತನಂತೆ ಕಂಡು ಬಂದರೂ ಧೃಡವಾದ ಸ್ವರದಲ್ಲಿ ನುಡಿದ,

"ನನಗೆ ಬಡತನವೆಂಬುದು ಇಂದು ನಿನ್ನೆಯ ಸ್ನೇಹಸಾಮಗ್ರಿಯಲ್ಲ, ಜನ್ಮದಾರಭ್ಯದಿಂದ ಪಡೆದುಕೊಂಡ ಅನುಬಂಧ. ಅದರಿಂದಾಗಿ ಅಂತಹ ಪರಿತಾಪವೂ ಇಲ್ಲ. ಈಗಿಂದಲೇ ಆರ್ಥಿಕ ನೆರವು ದೊರೆತಿದ್ದಲ್ಲಿ ಸ್ವಲ್ಪ ಮುಂದಾಗಿ ಭುಜದಭಾರವನ್ನು ಇಳಿಸಿಕೊಳ್ಳಬಹುದಾಗಿತ್ತು ಎಂಬ ಯೋಚನೆ ... ....ಆದರೂ ಅಷ್ಟೇ ಅಲ್ಲ. ಈ ಶರೀರ ಕೃತಜ್ಞತೆಯ ಭಾರದಿಂದ ಕುಸಿಯುತ್ತಿರುವಂತೆ ಭಾಸವಾಗುತ್ತಿದೆ. ಅಂದಿಂದಿಗೂ ಇತರರ ಆಶ್ರಯದಿಂದ ಉಸಿರಾಡಿದ ಜೀವ ಎಂದೆಂದಿಗೂ ಆಭಾರಿಯಾಗಿರಲೇಬೇಕು. ಬಹುಶಃ ನಾನು ಸಾಯಲೂ ಸ್ವತಂತ್ರನಲ್ಲ." ದನಿ ಭಾರವಾಗಿದ್ದರೂ ತುಟಿಗಳಲ್ಲಿ ಶುಷ್ಕನಗೆ ಅರಳಿತು.

ನಿರ್ಮಲ ಮುಗುಳು ನಕ್ಕಳು.

ಅಮರನಾಥ ವಿನಯ ವಿಧೇಯತೆಗಳ ವಶೀಭೂತನಾಗಿ ಮುಂದುವರಿದ,

"ಋಣಭಾರ ಎಂಬುದು ಸಾಮಾನ್ಯವಲ್ಲ. ನನಗೀಗ ಅನ್ನಿಸುವುದೇನೆಂದರೆ ಹೊರಗಿನವರ ನೆರವಿಗಿಂತ ನಮ್ಮನಮ್ಮಲ್ಲೇ ಸಹಾನುಭೂತಿ ಮೂಡಿದರೆ-ಜೀವನಧರ್ಮ ನಿರ್ಣೀತವಾದರೆ ಅದರಿಂದ ಎಷ್ಟೋ ಸಮಾಧಾನ.... ...ಆದರೆ ಅಂತಹ ಭಾಗ್ಯ ಇದುವರೆಗೆ ಕೈಗೂಡಿ ಬರಲಿಲ್ಲ. ಒಮ್ಮೆ ಯಾವರೂ

ಸಂತಸದಿಂದ ಉಸಿರಾಡಿಲ್ಲ. ಮುಂದೆಯೂ ಇದೆಯೋ ಇಲ್ಲವೋ ಅದೇ ಅನುಮಾನ."

"ದೇವರಿದ್ದಾನೆ....!"

ಅಲ್ಲಿಂದ ಮುಂದೆ ಇಬ್ಬರ ಹಾದಿಯೂ ಕವಲೊಡೆಯಿತು. ಶೀಳು ಹಾದಿಗೆ ಕಾಲಿಡುತ್ತ ಅಮರನಾಥ ನುಡಿದ "ಇದುವರೆವಿಗೂ ನನ್ನ ಯಾವ ಹಂಬಲವೂ ಕೈಗೂಡಲಿಲ್ಲ. ಆಸೆ–ನಿರಾಸೆಗಳಲ್ಲಿ ಜೀವ ತೊಳಲಿ ಬಳಲಿದೆ. ಇನ್ನು ಮುಂದಿನದಾದರೂ ಕೈಗೂಡಲೆಂಬ ಆಶಯವೇ ಜೀವನಕ್ಕೆ ಪರಮಾಧಾರ. ಇಲ್ಲದಿದ್ದಲ್ಲಿ ಈ ಜೀವ ಉಸಿರಾಡುತಿತ್ತೋ ಇಲ್ಲವೋ....ಅಂತೂ ಬೆಳಕಿಗಾಗಿ ತೀವ್ರ ಹೋರಾಟ ನಡೆಸುತ್ತಿರುವೆ."

ಅಮರನಾಥನ ಪರಿತಾಪ ಪುಷ್ಟವಾಣಿಯಲ್ಲಿ ಅನಿರೀಕ್ಷಿತವಾಗಿ ಮೂಡಿದ ಲಘುಕಂಪನ ಮನಃಪ್ರಾಣಗಳಲ್ಲಿ ಅತೀವ ಅನುಕಂಪ ಮೂಡಿಸಿತು. ನಿರ್ಮಲ ನಸು ತಲೆ ಬಾಗಿದಳು.

ಅವಳ ಲಜ್ಜೆ–ಸಂಕೋಚಗಳನ್ನು ದೂರಗೊಳಿಸಲೆತ್ನಿಸುವಂತೆ ಅಮರನಾಥ ಪುನಃ ಒತ್ತಿ ಹೇಳಿದ,

"ನಾರೀ ಸುಲಭ ಲಜ್ಜೆ ಒಂದಾನೊಂದು ಕಾಲದಲ್ಲಿ ಭೂಷಣವಾಗಿತ್ತು. ಈಗ ಧೈರ್ಯ ಸಾಹಸ ವಿದ್ಯಾವಿನಯ ವಿಶೇಷಗಳು ಭೂಷಣ. ಜೀವನಕ್ಕೆ ಮುಖ್ಯಗುರಿ ಸಮಾನತೆ. ಇಷ್ಟನ್ನು ಅರಿತವರಾರೂ ಜೀವನಕ್ಕೆ ಭಯಪಡಬೇಕಾಗಿಲ್ಲ."

"ನಿಜ...."

"ಯೋಚಿಸಿ ನೋಡಿ, ನಿಮ್ಮಲ್ಲಿ ನನ್ನದೊಂದು ಭಿಕ್ಷೆಯಿದೆ; ಶರಣಾರ್ಥಿಯಿದೆ."

ನಿರ್ಮಲ ಮಾತಾಡದೆ ಮುಗುಳು ನಕ್ಕಳು. ಕೆನ್ನೆಗಳು ಲಜ್ಜೆಗೆಂಪು ತಳೆದುವು.

ಅವನು ಬಿಟ್ಟು ಹೋಗುವಂತೆ ಹೆಜ್ಜೆ ತೆಗೆದ. ಸೀಳವಾದ ಶರೀರ ತಾಮ್ರಸಲಾಕೆಯಂತೆ ಚಲಿಸಿತು. ತೊಟ್ಟ ನೆಹರು ಬನೀನು ಪಾಯಿಜಾಮು ಆತನ ವ್ಯಕ್ತಿತ್ವಕ್ಕೆ ಭೂಷಣವಾಗಿವೆ. ಪ್ರಶಸ್ತ ಹೆಜ್ಜೆಗಳ ಪಟತ್ಕಾರ ಕರ್ಣಪಟಲಗಳಿಗೆ ಸಮ್ಮೋಹಕತೆಯಲ್ಲಿ ತಾಗುತಿತ್ತು. ನಿರ್ಮಲ ನೇರಹಾದಿಯಲ್ಲಿ

ಹೆಜ್ಜೆ ಹಾಕಿದಳು. ತಲೆಯಲ್ಲಿ ಸುಳಿಸುತ್ತುತ್ತಿದ್ದ ವಿಚಾರ ಸರಣಿಗೆ ಅಂತ ರಾತ್ರಿ ಯಾವರೀತಿ ಉತ್ತರಿಸುವುದೆಂಬುದು ಇನ್ನೂ ನಿರ್ಣೀತವಾಗಿರದಿದ್ದರೂ ಒಮ್ಮೆಲೇ ಚಿತ್ತ ಸ್ವಾಸ್ಥ್ಯವನ್ನು ಕಳೆದುಕೊಳ್ಳುವಷ್ಟು ಮೂರ್ಖಳಲ್ಲ ಆವಳು.

ಆದರೆ.... !

....ದೂರ ನೀಲ ಗಗನದಲ್ಲಿ ಸಂಧ್ಯಾಸೂರ್ಯ ಅರುಣಕಿರಣಗಳನ್ನೆರಚಿ ಆಮಿಷವನ್ನು ತೋರುತಿದ್ದಾನೆ!

....ಶಾಂತ ಶೀತಲ ವಾಯುಮಂಡಲದಲ್ಲಿ ಸುಗಂಧಿತ ಗಂಧ ಅತ್ಯಂತ ಕಮನೀಯವಾಗಿದೆ!

....ಶುಭ್ರ ಮೋಡಗಳ ಮಧ್ಯೆ ಶೋಭಿತ ಶುಕ್ರಗ್ರಹ ಚೋದಿತನಾಗಿದ್ದಾನೆ!

೩

ಯಾವುದೋ ದುರ್ದಮ್ಯ ಅಗೋಚರ ಶಕ್ತಿ ಯಾವುದೋ ಅಚಿಂತನೀಯವಾದ ಪರಿಸ್ಥಾನಕ್ಕೆ ಅಪ್ರತ್ಯಕ್ಷವಾಗಿ ತನ್ನ ಭಾಗ್ಯಶುಕ್ತಿಯನ್ನು ಅಪ್ರತ್ಯಕ್ಷವಾಗಿ ಎಳೆದೊಯ್ಯುತ್ತಿದ್ದುದನ್ನು ಸತೀ ಜಾನಕೀ ಎಂದೂ ಅರಿತಿರಲಿಲ್ಲ........

ತನ್ನ ಪರಿಸರದ ಇತರ ಗೃಹಿಣಿಯರಂತೆ ಆಕೆಯೂ ದಿನವಹಿ ವ್ಯವಹಾರದಲ್ಲಿ ತೀವ್ರ ಮುಳುಗಿ ಬಡತನದ ಭವಣೆಯಲ್ಲಿಯೂ ಸಂತೃಪ್ತಿಯ ಉಸಿರಾಡಿದ್ದಳು....

ಜೀವನರಥ ಬೀಳುತ್ತೇಳುತ್ತ ಹರಿಯುತಿದ್ದಂತೆಯೇ ಒಂದು ಅಶುಭ ರಾತ್ರಿಯಲ್ಲಿ ಅನಿರೀಕ್ಷಿತವಾಗಿ ಕುಂಕುಮ ಭಾಗ್ಯವನ್ನು ಸೆಳೆದುಕೊಂಡಿತು ವಿಧಿ. ಸಣ್ಣ ಕುಟೀರದಲ್ಲಿ ದುಃಖದ ಕಡಲು ಕೋಡಿಗಟ್ಟಿ ಹರಿಯಿತು. ದಿಕ್ಕೆಟ್ಟ ತಾಯಿಯೊಂದಿಗೆ ಕಂಗಾಲಾದ ನಾಲ್ವರು ಮಕ್ಕಳು ಕಂಬನಿಗರೆಯುತಿದ್ದ ಕರುಣಾಜನಕ ದೃಶ್ಯ ಕಲ್ಲನ್ನೂ ಕರಗಿಸುವಂತಿತ್ತು. ದುರ್ಘಟನೆಯ ವಾತ್ಯಾಚಕ್ರದಲ್ಲಿ ಸಿಕ್ಕಿ ಜರ್ಜರಿತವಾದ ಸಂಸಾರದ ಸಹಾಯಕ್ಕೆ ಸ್ವಜನರಾರೂ ಮುಂದಾಗಲಿಲ್ಲ. ನಿರ್ಮಲಾ ಶಾಲಾ ಹಂತವನ್ನು ಮುಗಿಸಿ ಮನೆಯಲ್ಲಿ ಉಳಿದಿದ್ದಳು ಶಾಲೆಯ ವಿವಿಧ ರಂಗಗಳಲ್ಲಿ ಕಲಿಯುತಿದ್ದ ಇಬ್ಬರು

ತಮ್ಮಂದಿರು, ಕೊನೆಯ ತಂಗಿ...ಯಾವ ರೀತಿ ಜೀವನಕ್ಕೆ ರೂಪುಕೊಡಬೇಕೋ ಅರ್ಥವಾಗದೆ ತಲ್ಲಣಿಸಿದ್ದ ನಿರ್ಮಲೆಯನ್ನು ಕಂಡು ಮನಕರಗಿದ ಅವಳ ಉಪಾಧ್ಯಾಯಿನಿಯು ಕಾನ್ವೆಂಟಿನ ಮದರ್ ಸುಪೀರಿಯರ್ ಬಳಿಗೆ ಕರೆದುಕೊಂಡು ಹೋದಳು. ಅನಂತರ ಅವರು ಅವಳಿಗೆ ಬದುಕುವ ಹಾದಿಯನ್ನು ಶ್ರದ್ಧೆ ವಹಿಸಿ ತೋರಿಕೊಟ್ಟರು. ಮುಂದಿನ ಉಚಿತ ವಿದ್ಯಾಭ್ಯಾಸದೊಂದಿಗೆ ಪರಿಸರದ ಬಾಲಜನಮೂದಳಕ್ಕೆ ಪಾಠ ಹೇಳುವ ವಿಧಾನವನ್ನು ಹೇಳಿಕೊಟ್ಟು ಉಪಕರಿಸಿದ್ದರು. ಅನಂತರ ಸಂಸಾರದ ಹೊಣೆ ನಿರ್ಮಲೆಯ ಹೆಗಲೇರಿತು.

ಒಮ್ಮೆ ಕಾನ್ವೆಂಟಿನಿಂದ ಮಗಳು ಏಳು ಗಂಟೆಯಾದರೂ ಮನೆಗೆ ಬಾರದುದು ಅದೆಷ್ಟು ಕಳವಳ ಮೂಡಿಸಿತೋ. ಅತ್ಯಂತ ಭಯವಿಹ್ವಲೆಯಾದ ತಾಯಿ ಶಾಲೆಯ ಕಡೆ ಓಡುತ್ತಲೇ ಹೋಗಿ ಹಣಿಕಿದರೆ ಕಾಗದದ ರಾಶಿಯ ಮಧ್ಯೆ ನಿರ್ಮಲ ಮಂಡಿಸಿದ್ದಾಳೆ. ತಯಾರಿತ ಲಕೋಟೆಗಳು, ಕತ್ತರಿಸಿದ ಕಾಗದಗಳು, ಕಾರ್ಯತತ್ಪರರಾದ ಹುಡುಗಿಯರು...ನೋಡಿದೊಡನೆಯೇ ಅಪರಿಮಿತ ಆನಂದದ ಮೂರ್ತಿಯಾದಳು ಸ್ವಾಮಿನಿ. ಅಂದಿನಿಂದ ಸಾಯಂಸಮಯದಲ್ಲಿ ಶಾಲೆಯ ವಿವಿಧ ರಂಗಗಳಲ್ಲಿ ಕೆಲಸ; ಸಾಕಷ್ಟು ಪಗಾರ, ಬೆಳಗಿನ ಹೊತ್ತು ಬಾಲಜನಮೂದಳದ ಮಧ್ಯೆ ಅವಳು ಉಪಾಧ್ಯಾಯಿನಿ.

ನೈಸರ್ಗಿಕ ಒತ್ತಡದಿಂದ ಜೀವನೋದ್ದೇಶವನ್ನು ಸರಾಗವಾಗಿ ಬಾಲ್ಯದಿಂದಲೇ ಕಂಡುಕೊಂಡ ನಿರ್ಮಲಳಿಗೆ ಕಾನ್ವೆಂಟಿನಲ್ಲಿ ಜನಪ್ರಿಯತೆ ಸರಾಗವಾಗಿ ದೈವಿಕ ವರದಂತೆ ಲಭಿಸಿತು. ಆ ವಿಶಾಲವಾದ ಸರಸ್ವತೀ ಆಲಯದಲ್ಲಿ ಸಡಗರದಿಂದ ಓಡಾಡುವ ಅಪ್ರಬುದ್ಧ ವ್ಯಕ್ತಿತ್ವ ಉಷಃಕಾಲೀನ ಮಲ್ಲಿಕೆಯಂತೆ ಶುಭ್ರಮನೋಹರವಾಗಿತ್ತು.

ಎಷ್ಟೇ ಶ್ರದ್ಧೆ ವಹಿಸಿದರೂ ಗಳಿಸುವ ಕುಡಿಕೆ ಹಣ ಐವರ ಸಂಸಾರಕ್ಕೆ ಕದಾನ್ನವನ್ನು ಒದಗಿಸುವುದೂ ಕಷ್ಟವೇ. ಆದರೂ ಗಳಿಕೆಯ ಶ್ರದ್ಧೆ ಜೀವನ ಶ್ರದ್ಧೆಯನ್ನು ಬೋಧಿಸುತಿತ್ತು; ಮುಂಗಳದೆಡೆಗೆ ನಡೆಯುವುದನ್ನು ಕಲಿಸುತಿತ್ತು. ತಮ್ಮಂದಿರು ಹಂತಹಂತವಾಗಿ ಶಾಲಾ ಜೀವನವನ್ನು ಮುಗಿಸಿದಾಗ ಜೀವನಬಟ್ಟೆಯ ಎಳೆಎಳೆಗಳು ರೂಪುಗೊಂಡುವು. ಅವರನ್ನು ಪ್ರಿನ್ಸಿಪಾಲರ ಸಹಾಯದಿಂದ ನೀಜೆ ಕಾಲೇಜಿಗೆ ಹಚ್ಚಿ ಹಗಲು ಕೆಲಸ ಹಿಡಿಸಿದಾಗ ನಿಡಿದಾದ ಉಸಿರು ಬಿಟ್ಟಳು ಮಕ್ಕಳ ತಾಯಿ.

ಬೃಹದ್ ಸಮಾಜ ವ್ಯವಸ್ಥೆಯ ಸುಖಾಶ್ರಯದಲ್ಲಿ ಸಂಜನಿಸಿದ ಸುಳ್ಳು-ಮೋಸ-ಮೌಢ್ಯ-ಅನಾಚಾರ-ಸ್ವಾರ್ಥಗಳ ಪರಮಾವಧಿಯಲ್ಲಿ ಸತ್ಯಾರ್ಥ ಪ್ರಕಾಶ ಪ್ರಚ್ಛನ್ನವಾಗಿ ವಾಸ ಮಾಡುತ್ತಿಲ್ಲ ಎಂದೇನಿಲ್ಲ. ಅದನ್ನು ಗುರುತಿಸುವುದರಲ್ಲಿ ಬುದ್ಧಿಯು ಹರಿತವಾಗಿರದಿದ್ದಲ್ಲಿ ಪರಿಮಿತ ಉಪ್ಪಿನ ಬೊಂಬೆಯೊಂದು ಸಾಗರವನ್ನಳೆಯಲು ಹೋದಂತಾಗುತ್ತದೆ. ಯಾವುದರ ಮೂಲಕ ಆತ್ಯಂತಿಕ ಕಲ್ಯಾಣ ಸಾಧಿಸಬಲ್ಲೆವೋ ಅದು ಸಾಮಾಜಿಕ ದೃಷ್ಟಿಯಲ್ಲಿ ಮಿಥ್ಯವಾಗಿ-ಕಲುಷಿತವಾಗಿ ಕಂಡರೂ ಅದೇ ಪರಮ ಸತ್ಯ; ಎಂಬ ನೆಚ್ಚು ನೆತ್ತರಿನ ಝರಿಯಲ್ಲಿ ನಿತ್ಯ ಪ್ರವಹಿಸುವುದರಿಂದ ಮುಂದಿಟ್ಟ ಹೆಜ್ಜೆಗಳು ಕಷ್ಟನಷ್ಟಗಳ ಪಾಲಾದರೂ ಜೀವನ ಬಂಧ ಬಿಗಿಯುತಿತ್ತು. ಅಂತಃಪ್ರಜ್ಞೆ ವಿಸ್ಮಯಾಧಿಕ್ಯದಿಂದ ಭಾವಾವೇಶಗೊಳ್ಳುತಿತ್ತು; ಉಜ್ವಲ ನಯನಗಳಲ್ಲಿ ಔತ್ಸುಕ್ಯ ತುಂಬುತಿತ್ತು. ನೈಸರ್ಗಿಕ ಒತ್ತಡದಿಂದ ಜೀವನ ಜ್ಯೋತಿಯನ್ನು ಎತ್ತಿಹಿಡಿದರೂ ಹೇಳಿಕೊಳ್ಳಬಹುದಾದಂತಹ ವಿಕಚಾಯಮಾನ ಗೌರವಾನ್ವಿತ ರೂಪುರೇಷೆ ಇದುವರೆಗೆ ಮೂಡಲೇ ಇಲ್ಲ. ಮುಂದಾದರೂ ಮೂಡುವುದೆಂಬ ನಂಬಿಕೆ ಸಹ ಉಳಿಯಲಿಲ್ಲ. ಆಂದಮೇಲೆ ಈ ಜೀವನ ಕುಸುಮ ದಳದಳವಾಗಿ ಬಾಡಿದರೆ ಆಶ್ಚರ್ಯವಿಲ್ಲ ಎಂಬ ನಗ್ನಸತ್ಯ ಚಿತ್ತಭಿತ್ತಿಯಲ್ಲಿ ಪ್ರಾಸಂಗಿಕವಾಗಿ ಸುಳಿಸುಳಿಯುವಾಗ ಈ ಕ್ಷುದ್ರ ಜಗತ್ತಿನಿಂದ ದೂರದೂರವಾಗಿ ಹೋಗಬೇಕು ಎಂಬ ಇಚ್ಛೆ ಮನಃಪ್ರಾಣಗಳನ್ನು ಆವರಿಸುತಿತ್ತು.

ಆದರೂ ಅದರೆಡೆಗೆ ಗಮನವನ್ನು ಹರಿಸುವಷ್ಟು ಸಮಯವಾಗಲೀ ಸಮಯೋಚಿತ ಪರಿಜ್ಞಾನವಾಗಲೀ ಇಲ್ಲವೇನೋ ಎಂಬಷ್ಟು ಕಾಲ ಪ್ರಮತ್ತ. ಬಾಳಿನ ಅಸ್ತವ್ಯಸ್ತ ವಿನ್ಯಾಸದಲ್ಲಿ-ಕೇವಲ ಕೈದೀವಿಗೆಯ ಸಹಾಯದಿಂದ ಕೈಗೊಂಡ ಮಾರ್ಗಯೋಗ ಸಾಮಾನ್ಯವೂ ಅಲ್ಲ; ಗಮ್ಯಸ್ಥಾನ ಯಾವ ದಿಕ್ಕಿನಲ್ಲಿ ಯಾವ ರೀತಿಯಲ್ಲಿ ರೂಪುಗೊಂಡಿದೆಯೋ ದೇವರೇ ಬಲ್ಲ. ಈ ಎಲ್ಲಾ, ಅನಿಶ್ಚಿತ ಪರಿಸ್ಥಿತಿಯಲ್ಲಿ ಹಲವಾರು ಚಿಂತೆಗಳ ಕಾರಸ್ಥಾನವಾದ ಚಿತ್ತ ದೇಹಸ್ವಾಸ್ಥ್ಯವನ್ನು ಆಗಾಗ ಕಳೆಯುತಿದ್ದುದೂ ಉಂಟು. ಅಂತೂ ಇಂತೂ ಹಗಲೆಲ್ಲ ಬಿಡುವಿಲ್ಲದೆ ದುಡಿದು ದಣಿದು ಮನೆಗೆ ಬಂದರೆ ಆ ಕಿಷ್ಕಿಂದಾ ಪುರಿಯಲ್ಲಿ ಹಾಯಾಗಿ ಉಸಿರಾಡುವುದೂ ಕಷ್ಟವೇ. ತಾನು ಕಾನ್ವೆಂಟಿನಲ್ಲೇ ಉಳಿಯಬಹುದಾದರೆ ಇನ್ನೊಬ್ಬರು ಸರಾಗವಾಗಿ ಉಸಿರಾಡಬಹುದು ಎಂಬ

ಯೋಚನೆ ಅದುವರೆಗೆ ಎಷ್ಟೋ ಬಾರಿ ಮೂಡಿತ್ತು. ಆದರೂ ಬಾಯ್ಬಿರೆಯಲು ಮನಸ್ಸಾಗಿರಲಿಲ್ಲ. ಇಂದು ಪ್ರಯತ್ನಪೂರ್ವಕವಾಗಿ ಆ ವಿಚಾರವನ್ನು ಹೊರಹಾಕಲು ಉದ್ದೇಶಿಸಿದಳು ನಿರ್ಮಲ. ರಾತ್ರಿ ದಾರಿದ್ರ್ಯದೇವತೆಯ ಪ್ರಸಾದವನ್ನು ಸಮನಾಗಿ ಹಂಚಿಕೊಳ್ಳುವಾಗ ವಿಷಯವನ್ನು ಮುಂದಿಟ್ಟಳು,

"ಅಮ್ಮಾ, ನೀವು ಒಪ್ಪುವಿರಾದರೆ ನಾನು ರಾತ್ರಿ ಕಾನ್ವೆಂಟಿನಲ್ಲೇ ತಂಗಬಹುದು. ನನಗೆ ವಾರ್ಡನ್ ಕೆಲಸ ಸಿಗುವ ಸಂಭವವಿದೆ."

ಆ ಮಾತಿಗೆ ತತ್ತರಿಸಿದಂತೆ ಉತ್ತರಿಸಿದಳು ಜಾನಕಿ "ಅಯ್ಯೊ, ಎಂಥ ಮಾತಾಡುತ್ತಿ ಮಗಳೇ! ನೀನು ಹೋದರೆ ನಮ್ಮ ಗತಿಯೇನು?" ಮುಖಭಾವದಲ್ಲಿ ವಿಸ್ಮಯ ಆತಂಕಗಳು ನೆಲೆಗೊಂಡಿದ್ದುವು.

"ಅದಕ್ಕೇಕೆ ಅಷ್ಟು ಆತಂಕ? ಇಷ್ಟಕ್ಕೂ ನಾನೇನು ಊರು ಬಿಟ್ಟು ಹೋಗುವುದಿಲ್ಲವಲ್ಲ?"

"ಆದರೂ........"

"ನೀವು ಹೀಗಂತೀರಿ ಎಂಬುದು ಗೊತ್ತಿತ್ತು. ಅದಕ್ಕೇ ಬಹಳ ದಿನಗಳಿಂದ ಹೇಳಿರಲಿಲ್ಲ. ವಾರ್ಡನ್ ಕೆಲಸ ಕೈಗೊಂಡರೆ ಆದಾಯವೂ ಹೆಚ್ಚುತ್ತೆ. ಇಲ್ಲಿಂದ ಒಬ್ಬರು ಹೊರಹೋದರೆ ಇನ್ನೊಬ್ಬರು ಸರಾಗವಾಗಿ ಉಸಿರಾಡಬಹುದು."

ವಾಕ್ಯಸರಣಿ ಎದೆಯಾಳದಿಂದ ಹರಿದುಬಂತು. ಪ್ರತ್ಯುತ್ತರವನ್ನು ಆಸಕ್ತಿಯಿಂದ ನಿರೀಕ್ಷಿಸಿದಳು ನಿರ್ಮಲ. ಹೊಳೆಹೊಳೆಯುವ ಕಣ್ಣುಗಳಲ್ಲಿ ಆಶಾಭಾವ ಮಿನುಗುತಿತ್ತು. ನೆಟ್ಟನೋಟ ಹಿಮ್ಮರಳಲಿಲ್ಲ.

ಆದರೆ ತಾಯಿಯ ಮನೋಭಾವವೇ ಬೇರೆ. ಆ ಮಗಳ ಮೇಲೆ ಇರಬಹುದಾದಂತಹ ಪ್ರೀತಿ ಅನಿರ್ವಚನೀಯ. ಅಂದಿಂದಿಗೂ ಬಾಳಿಗಾಸರೆ ಇತ್ತು, ಕುರುಡುತನಕ್ಕೆ ಊರುಗೋಲಾದ ಅವಳ ಸಹವಾಸ ರಾತ್ರಿಮಾತ್ರವೇ ದೊರೆಯುತಿತ್ತು. ಆ ಕಿಂಚಿತ್ ಸುಖವನ್ನೂ ಸಹ ಇನ್ನು ಬಿಟ್ಟುಕೊಡುವುದೆಂದರೆ ಮನಸ್ಸು ಸರ್ವಥಾ ಒಪ್ಪಲಿಲ್ಲ. ಸ್ವಲ್ಪ ಹೊತ್ತು ಯೋಚಿಸಿ ಅತ್ಯಂತ ಕಳಕಳಿಯಿಂದ ನುಡಿದಳು ತಾಯಿ,

"ನಿನ್ನ ಮೇಲೆ ಅದೆಷ್ಟು ಪ್ರೀತಿ ಇಟ್ಟಿರುವೆ ಎಂಬುದು ದೇವರಿಗೆ ಗೊತ್ತು. ನಿನಗೆ ಅದು ಅರ್ಥವೇ ಆಗುತ್ತಿಲ್ಲ. ಅದೇ ಆಶ್ಚರ್ಯ!"

"ಅದಕ್ಕೂ ಇದಕ್ಕೂ ಸಂಬಂಧ ಇಲ್ಲಮ್ಮಾ. ನಾನು ವಾರ್ಡನ್ ಆದರೆ ಪ್ರೀತಿ ಎಲ್ಲಿ ಹೋಗುತ್ತೆ ?"

ಆ ವೇಳೆಗೆ ಪ್ರಸನ್ನ ಪ್ರಫುಲ್ಲ ಇಬ್ಬರೂ ಮುಸಿ ಮುಸಿ ನಗುತ್ತಿದ್ದರು.

ಆಗ ತಾಯಿಗೆ ನಿಜವಾಗಿಯೂ ಸಿಟ್ಟು ಬಂತು; ವ್ಯಂಗ್ಯವಾದ ದನಿಯಲ್ಲಿ ನುಡಿದಳು,

"ಸೊಗಸಾದ ನಗು ! ಕೈಕಾಲು ಬಲಿತಮೇಲೆ ತಾಯಿ ಏಕೆ ಬೇಕು ಹೇಳಿ ?"

"ಯಾಕಮ್ಮಾ ಅಷ್ಟು ಕೋಪ ?" ಪ್ರಸನ್ನ ಪ್ರಶ್ನಿಸಿದ. ಕಣ್ಣುಗಳಲ್ಲಿ ತುಂಟಭಾವ ನಲಿಯುತ್ತಿತ್ತು. ಅರೆಬಿರಿದ ತುಟಿಗಳಲ್ಲಿ ಅರಳಿದ ನಗು ಅಡಗಿರಲಿಲ್ಲ. ಮತ್ತೆ ಅವನೆಂದ "ವಾರ್ಡನ್ನಾದರೆ ಇನ್ನೂ ಕ್ಷೇಮ ಅಲ್ಲವೆ ?"

ಆ ಗಳಿಗೆಯಲ್ಲಿ ಚಿತ್ತ ಉತ್ಕ್ರಾಂತವಾಗಿತ್ತು. ಯಾರ ಅಭಿಮತವೂ ಆಕೆಗೆ ಒಪ್ಪಿಗೆಯಾಗುವಂತಿರಲಿಲ್ಲ. ತಟ್ಟೆಯಲ್ಲಿದ್ದ ಊಟ ಅಲ್ಲೇ ಉಳಿಯಿತು. ಒಂದೆರಡು ಕ್ಷಣ ಆಲೋಚಿಸಿ ಸುಖದುಃಖಗಳನ್ನುಂಡು ಪರಿಮ್ಲಾನಮುಖಿ ಯಾಗಿ ಬಿತ್ತರಿಸಿದಳು "ವಾರ್ಡನ್ ಆಗುವುದರಿಂದ ಇಲ್ಲಿ ರಾತ್ರಿ ತಂಗುವ ಅವಕಾಶವೂ ತಪ್ಪಿಹೋಗುತ್ತೆ. ಅನಂತರ ವಾರಕ್ಕೊಮ್ಮೆ ಭೇಟಿಯಾದರೆ ಹೆಚ್ಚು. ಅದೇ ನನಗೆ ಸಂಕಟ."

"ಅದಕ್ಕೇನು ಮಾಡುವುದಕ್ಕಾಗುತ್ತೆ ? ಅವಳೇನು ಚಿಕ್ಕಮಗುವೇ ಮಗ್ಗುಲಲ್ಲೇ ಇಟ್ಟುಕೊಳ್ಳುವುದಕ್ಕೆ ?"

ಆಗ ಮಾತೃಹೃದಯ ಸಿಡಿದೆದ್ದಿತು "ಒಳ್ಳೆ ಚೆನ್ನಾಗಿದೆ! ನಾನು ಕೆರೆ ಬಾವಿ ಕಾಣಲೇನು ?"

"ಇಷ್ಟಕ್ಕೇಕೆ ಅಷ್ಟು ಆತಂಕ ? ಇಲ್ಲಿ ಒಬ್ಬರು ಕಡಿಮೆಯಾದರೆ ಇನ್ನೊಬ್ಬರಿಗೆ ಅನುಕೂಲ, ಯೋಚಿಸಿನೋಡಿ !" ನುಡಿಯನ್ನು ಒತ್ತಾಯ ಪೂರ್ವಕವಾಗಿ ಹೊರಹಾಕಿದಳು ನಿರ್ಮಲ. ಆಶಾಭರಿತ ಹೃದಯ ಒಪ್ಪಿಗೆ ಯನ್ನು ನಿರೀಕ್ಷಿಸಿತ್ತು.

ಮನೋಮಂದಿರದಲ್ಲಿ ಅಶಾಂತಿಯು ಕಿಡಿ ಜ್ವಲಿಸುತ್ತಿತ್ತು. ತಟ್ಟನೆ ತೊಟ್ಟು ಕಳಚಿದಂತೆ ನುಡಿದಳು ಜಾನಕಿ, "ಸದ್ಯಕ್ಕೆ ಆ ಯೋಚನೆ ಬೇಡವೇ

ಬೇಡ. ದೇವರು ಕೊಟ್ಟಿದ್ದರಲ್ಲಿ ಹಂಚಿ ಉಣ್ಣೋಣ."

"ಇರಲಿ, ಬಿಡಿ ಅಮ್ಮಾ! ಅದಿನ್ನೂ ಒಳ್ಳೆಯದಲ್ಲವೇ ?" ಎಂದ ಪ್ರಫುಲ್ಲ.

"ಅದು ಖಂಡಿತ ಒಳ್ಳೆಯದು" ಎಂದ ಪ್ರಸನ್ನ.

ಆದರೆ ತಾಯಿಯ ರೀತಿಯೇ ಬೇರೆ. ಆ ಮಗಳ ಸಾಮೀಪ್ಯವಿಲ್ಲದ ಬದುಕು ವ್ಯರ್ಥ ಎನ್ನುತ್ತದೆ ಅಂತರಂಗ. ಒಂದೆರಡು ಘಳಿಗೆ ಆಕೆ ಮಾತಾಡಲೇ ಇಲ್ಲ. ವಿಷಯವನ್ನು ಅರ್ಥೈಸಲಾರದಷ್ಟು ಕಸಿವಿಸಿ ಮನದಾಳದಲ್ಲಿ ಮೂಡಿತ್ತು. ಅವಳು ಹಸಿಗಣ್ಣಾಗಿ ನುಡಿದಳು "ನಿನ್ನ ಕಲ್ಯಾಣವೇ ಕಲ್ಯಾಣ. ಈಗಲೇ ಅವಸರ ಬೇಡ, ನೋಡೋಣ."

"ಅಂದರೆ....ನಿಮಗೆ ವಾರ್ಡನ್ ಕೆಲಸ ಕಾದಿರುತ್ತದೆಯೇ ?"

"ಅದಿನ್ನೂ ಖಾಲಿಯಾಗಿಲ್ಲವಲ್ಲ ?"

ಆ ಪ್ರಶ್ನೆ ಅಲ್ಲಿಗೆ ಮಂಗಳ ಹಾಡಿದರೂ ಇಲ್ಲಿಯವರೆಗೆ ಮಾತುಕತೆಯಲ್ಲಿ ಪಾಲ್ಗೊಳ್ಳದಿದ್ದ ವಿಮಲ ವಿಚಾರಾತ್ಮಕವಾಗಿ ನುಡಿದಳು "ಸರಿ.... ನೀನು ಅಲ್ಲಿದ್ದಲ್ಲಿ ಅದರಿಂದ ಅನೇಕ ಮಕ್ಕಳಿಗೆ ಅನುಕೂಲವಾಗುತ್ತೆ. ಆದರೆ, ಒಂದೇ ಒಂದು ಮಗುವಿಗೆ ಅನ್ಯಾಯ ಮಾಡಿದಂತಾಗುತ್ತದೆ."

"ಅಂದರೆ.... ?"

"ಯೋಚಿಸಿನೋಡು, ಆ ಮಕ್ಕಳು ಈ ಮಕ್ಕಳು ಎಂಬ ಪರಿಭೇದವಿಲ್ಲವಷ್ಟೆ ?"

"ಬಿಡಿಸಿ ಹೇಳು ವಿಮಲೂ!"

"ನೀನಲ್ಲಿ ಉಳಿದರೆ ನನಗೆ ಪಾಠ ಹೇಳುವವರಾರು ?"

"ಹೋಗಲಿ ಬಿಡಮ್ಮ, ಸದ್ಯಕ್ಕೆ ಅದಕ್ಕಾಗಿ ಪ್ರಯತ್ನಿಸುವುದಿಲ್ಲ. ನಿನ್ನ ವಿದ್ಯಾಭ್ಯಾಸ ಉತ್ತಮವಾಗದೆ ಅದನ್ನು ಯೋಚಿಸುವುದೂ ಸರಿಯಲ್ಲ." ಎಂದಳು ನಿರ್ಮಲ. ತನಗೆ ಸಮಂಜಸವಾದ ವಿಚಾರ ಎಷ್ಟು ಮುಂದಿಗೆ ಅಸಮಂಜಸವಾಗುವುದೆಂಬುದು ಮನವರಿಕೆಯಾಯಿತು. ನೆಟ್ಟನೋಟ ಅವಳಿಂದ ಹಿಮ್ಮರಳಲಿಲ್ಲ. ತೂಗುದೀಪದ ಬೆಳಕಿನಲ್ಲಿ ಮುಖದ ಮೇಲೆ ಮಿನುಗುತ್ತಿದ್ದ ಭಾವಧಾರೆ ಸ್ಪಷ್ಟವಾಗಿ ಕಾಣಿಸುತಿತ್ತು.

ಸ್ವಾದಿಸಿ ಕೊನೆಯ ತುತ್ತನ್ನು ನುಂಗಿ ನೀರನ್ನು ಆಪೋಷಣೆ ಮಾಡಿ

ವಿಸ್ಮಯ ವಿಶೇಷದಿಂದ ಮಾತಾಡದೆ ಸುಮ್ಮನೆ ಕುಳಿತಿದ್ದಾಳೆ. ಚಿದಾಕಾಶದಲ್ಲಿ ಯಾವುದೋ ಕಂಡರಿಯದ ಬಿರುಗಾಳಿ ಬೀಸುತಿತ್ತು. ಒಂದಲ್ಲ ಒಂದುದಿನ ಈ ಕುಲಸಂಜಾತರೆಲ್ಲರೂ ಹೊರಹೋಗುವವರೇ ಎಂಬ ಕಟುಸತ್ಯ ಮೊಟ್ಟ ಮೊದಲಾಗಿ ಅವಳ ಗಮನಕ್ಕೆ ಬಂದಿತ್ತೋ ಏನೋ....

ವಾಸ್ತವಿಕ ಜೀವನದ ಹಲವಾರು ಮುಖಗಳು ಸುತ್ತಮುತ್ತ ಹಲ್ಕಿರಿಯ ತೊಡಗಿದುವು.

೪

....ಅದೊಂದು ಸುಂದರವಾದ ಶಾಂತ ಶೀತಲ ಪ್ರಾತಃಸಮಯ.

....ಜಗದ್ವಲಯದಾದ್ಯಂತ ತಣ್ಣಗೆ ತೀಡುವ ಸುಗಂಧಸಿಕ್ತ ತಂಗಾಳಿ.

ಮನೆಯ ಮೆಟ್ಟಿಲು ಇಳಿದಾಗಲೇ ಸುಮಧುರ ವಾತಾವರಣ ತನುಮನಗಳನ್ನು ಆವರಿಸಿತು. ಆ ಮುಂದಿನ ಎರಡು ಮೈಲಿಗಳ ಹಾದಿ ನಗರ ವಲಯದ ಗಲಾಟೆ-ಗದ್ದಲಗಳಿಂದ ಕೂಡಿದ್ದರೂ ಮನಸ್ಸಿಗೆ ಅಂತಹ ಕಿಸಿಸಿಗೆ ಏನೂ ಮೂಡದಷ್ಟು ಪ್ರಕೃತಿ ಪ್ರಸನ್ನೆಯಾಗಿದ್ದಾಳೆ. ಹೊತ್ತು ಒಂಭತ್ತರ ಅಂಚನ್ನು ಮುಟ್ಟುವ ಮುನ್ನ ಕಾನ್ವೆಂಟಿನ ವಲಯಕ್ಕೆ ಪದಾರ್ಪಣೆ ಮಾಡಿತು ಅಲ್ಲಿನ ಉಪಾಧ್ಯಾಯ ಮಂಡಳಿ. ತರಗತಿಗಳು ಆರಂಭವಾಗುವುದು ಹತ್ತೂವರೆಗಾದರೂ ನೂತನ ವಿದ್ಯಾರ್ಥಿಗಳಿಗೆ ಪೂರ್ವಭಾವೀ ಶಿಕ್ಷಣ ಮತ್ತು ಉತ್ತಮ ತರಬೇತಿಗಳಿಗಾಗಿ ಒಂದೆರಡು ಗಂಟೆ ಮೀಸಲು. ಆ ಪ್ರಯುಕ್ತ ಉಪಾಧ್ಯಾಯವರ್ಗ ಎಂಟುವರೆ ಗಂಟೆಗೇ ಮನೆಯನ್ನು ಬಿಡುವುದು ಅನಿವಾರ್ಯ.

ನಿರ್ಮಲ ಆ ಬೃಹದ್ ಪ್ರಾಕಾರದ ಮಧ್ಯೆ ನೆಲೆನಿಂತ ಕಾನ್ವೆಂಟಿನ ಅಂಗಳವಲ್ಲಿನ ಹೂದೋಟದ ಸುರಮ್ಯಹಾದಿಗೆ ಚರಣಸ್ಪರ್ಶ ಮಾಡಿದಾಗ ಮಾಮರದ ನೆತ್ತಿಯಲ್ಲಿ ಅಡಗಿ ಕುಳಿತ ಕೋಗಿಲೆಯೊಂದು ಇಂಪಾದ ದನಿಯನ್ನು ಹರಿಯಬಿಟ್ಟಿತು.

ಕೂ ಊ ಊ ಊ ಊ ವು ! ಕೂ ಊ ಊ ಊ ಊ ವು !

ಆ ಸವಿಗೊರಳ ಸವಿ ಮನದಾಳಕ್ಕೆ ಸರ್ರನೆ ಇಳಿಯಿತು. ನಿರ್ಮಲ

ಸಾನಂದ ವಿಶೇಷದಿಂದ ತಲೆಯೆತ್ತಿ ನೋಡಿದಳು. ಪಕ್ಷಿ ದೃಷ್ಟಿಗೆ ಬೀಳದಿಪ್ಪರೂ ನೋಟ ಹಿಮ್ಮರಳದೆ ಅಲ್ಲಿಂದಲ್ಲೇ ಚಲಿಸಹತ್ತಿತು. ಸಮಗ್ರ ರಾಜ್ಯದ ಪ್ರಸನ್ನತೆ ಅಲ್ಲಿ ಕೇಂದ್ರೀಕೃತವಾದಂತೆ ಆನಂದೋತ್ಸಾಹದಿಂದ ಹಾಡುತ್ತಲೇ ಇತ್ತು. ಕುತೂಹಲತೃಷಿತ ನೋಟ ಸೋಲೊಪ್ಪಿಕೊಂಡ ಮೇಲೆ ಅಲ್ಲಿಂದ ಹೆಜ್ಜೆ ತೆಗೆದಳು ನಿರ್ಮಲ. ಮನೋದಧಿಯಲ್ಲಿ ಜೀವನ ಸಂಗೀತ ನವಹುರುಪಿನಿಂದ ಧುಮುಧುಮಿಸಹತ್ತಿತು. ರಕ್ತದ ಕಣಕಣವೂ ತುಳುಕುತ್ತಿರುವಂತೆ ನರನಾಡಿಗಳು ಉಲ್ಲಸಿತವಾಗಿದ್ದುವು. ಪುಷ್ಪವನ ಸುಗಂಧ ಸಿಕ್ತವಾಗಿತ್ತು. ಗರಿಕೆ ಹುಲ್ಲಿನ ಹಾಸು ಹಸರು ಕಕ್ಕುವಂತಿತ್ತು. ತೋಟದ ಮಾಲಿಗಳು ಆಗಲೇ ಕೆಲಸ ಆರಂಭಿಸಿದ್ದಾರೆ. ಕೈಯಲ್ಲಿ ಪುಸ್ತಕಗಳನ್ನಾಂತ ಹಾಲ್ಗೆನ್ನೆಯ ಹುಡುಗಿಯರು ಗುಂಪುಗುಂಪಾಗಿ ಬರುತ್ತಿದ್ದಾರೆ. ಅವರ ಮಾತಿನ ಮರ್ಮರ, ಮೋಹಕ ನಗು, ನೀಲಿಯ ಸಮವಸ್ತ್ರ ದರ್ಶನೀಯವಾಗಿತ್ತು.

ಕೈಯಲ್ಲಿನ ಪುಸ್ತಿಕೆಯನ್ನು ಎದೆಗಾಂತು ಹಿಡಿದು ಮೆಟ್ಟಲನ್ನು ಹತ್ತಿದಾಗ ನೋಟ ಮರಿಯಳ ಸುಂದರ ವಿಗ್ರಹದ ಕಡೆ ಹರಿಯಿತು. ಕೈಯಲ್ಲಿ ಸುಂದರ ಮಗುವನ್ನಾಂತ ತಾಯಿಯ ಭಂಗಿ ಮನಮೋಹಕವಾಗಿತ್ತು. ಒಂದೆರಡು ಕ್ಷಣ ಅಲ್ಲಿ ನೆಲೆ ನಿಂತ ನೋಟ ಚಲಿಸಿದಾಗ ಬಾಗಿಲ ಬಳಿ ಎದುರಾದ ಲೀಲ ಕಾಮನಬಿಲ್ಲಿನಂತಹ ಹುಬ್ಬುಗಳನ್ನು ಏರಿಸಿ ಹಾಸ್ಯ ಪ್ರಧಾನವಾದ ದನಿಯಲ್ಲಿ ಆಶ್ಚರ್ಯಭಾವವನ್ನು ಸೂಸಿ ಪ್ರಶ್ನಿಸಿದಳು,

"ಏನಪ್ಪಾ ವಿಶೇಷ? ಏನೋ ಒಂದು ಹೊಸ ಬಗೆಯ ಪಟುತ್ವ ನಿನ್ನಲ್ಲಿ ಆವಾಹನೆಯಾಗಿದೆ?"

"ಸರಿ, ಸರಿ. ನನಗೆ ತಿಳಿಯದಂತೆ ಎಲ್ಲಿಂದ ಬರಬೇಕು?"

"ಬಹುಶಃ...." ಎಂದ ಲೀಲಾ ತುಂಟನಗೆಯನ್ನು ಬೀರಿ "ಹೇಳಿಬಿಡಲೆ?" ಎಂದಳು.

"ಹೇಳು, ಹೇಳು! ಅದಕ್ಕೇನಂತೆ?"

"ಹೃದಯಸ್ಥಿತ ರಾಗಾನುರಾಗವೇ ಇರಬೇಕು!"

ಅವಳು ಯಾವ ಉದ್ದೇಶದಿಂದ ಆ ಮಾತನ್ನು ಹೇಳಿದಳೋ ಅದನ್ನು ಊಹಿಸಲಾರದಷ್ಟು ಮಂದಬುದ್ಧಿಯಲ್ಲ ನಿರ್ಮಲ. ಸಮಯೋಚಿತವಾಗಿ ಇನ್ನೊಂದು ರೀತಿಯಲ್ಲಿ ಅದನ್ನು ಸ್ಥಿರೀಕರಿಸಿದಳು,

"ಹೌದಮ್ಮಾ! ಈ ಅಗಾಧವಾದ ಸ್ನೇಹ–ಪ್ರೇಮಗಳ ಸಂಯೋಜನೆ ರಾಗಾನುರಾಗವನ್ನು ಕಾಯಾ ವಾಚಾ ಸೃಜಿಸುತ್ತದೆ. ಒಂದು ವಿಧವಾಗಿ ಅರ್ಥೈಸಿದರೆ ಅದರ ಅದ್ಭುತ ವಿಕಾಸಕ್ಕಾಗಿಯೇ ನಾವು ಸರಸ್ವತೀ ಪ್ರಸಾದವನ್ನು ಆತ್ಮಪೂರ್ವಕವಾಗಿ ಹಂಚುತ್ತಿರುವುದು! ನಿನ್ನ ಸಹಭಾಗಿತ್ವ ಇನ್ನೊಂದು ರೀತಿಯಲ್ಲಿ ಅದಕ್ಕೆ ಪೂರಕ! ಯೋಚಿಸಿನೋಡು, ಪಟುತ್ವ ಎಲ್ಲಿಂದ ಎಲ್ಲಿಯವರೆಗೆ ಹರಿದಿದೆ."

ಆ ಮಾತುಗಳಿಂದ ಲೀಲಳ ಶರೀರ ಮತ್ತು ಅಂತರಂಗ ಭಾವೋದ್ವೇಗದಿಂದ ಪುಲಕಗೊಂಡವು...... ಪ್ರಕೃತಿ ಸಮಸ್ತವೂ ಭಾವಾನುಲೋಕನದಿಂದ ಜಾಗ್ರತಗೊಂಡಂತೆ ತೋರಿ ಆ ಅಪೂರ್ವ ಜಾಗರಣೆಯಲ್ಲಿ ನವೋನ್ಮಾದಿನಿಯಾದ ಅವಳು ಅತ್ಯಂತ ಆನಂದಪರವಶಳಾದಳು.

ಅದೇ ಸಮಯಕ್ಕೆ ಅಮರನಾಥ ಆಗಮಿಸಿದ. ರಾತ್ರಿಯ ಸಂಪೂರ್ಣ ವಿಶ್ರಾಂತಿ, ಬೆಳಗಿನ ಪ್ರಶಾಂತ ವಾತಾವರಣ ತನುಮನಗಳಿಗೆ ಪುಷ್ಟಿಯನ್ನು ನೀಡಿತ್ತು. ನಿತಾಂತ ಲವಲವಿಕೆಯಿಂದ ಅಂಗರಾಗದಲ್ಲಿ ಹೊಸ ಖಳೆ ಸ್ಫುರಿಸುತಿತ್ತು. ಸಹೋದ್ಯೋಗಿಗಳನ್ನು ನೋಡಿ, ತುಟಿಗಳಲ್ಲಿ ತಿಳಿನಗೆಯನ್ನು ಸೂಸಿ ಅಭಿವಾದಿಸಿದ.

ಇಬ್ಬರೂ ಪ್ರತಿವಂದನೆಯನ್ನು ಸಲ್ಲಿಸಿದರು.

ಲೀಲಾ ಆಫೀಸಿನ ಕಡೆ ಹೊರಟಳು. ಹೆಜ್ಜೆಗಳು ತ್ವರಿತಗತಿಯ ಪಾಲಾಗಿದ್ದುವು. ನಿರ್ಮಲ ಹೂದೋಟದ ಸುಂದರವಾದ ಹಾದಿಯನ್ನು ಹಿಡಿದು ಬೀಸುಗಾಳಿಯಲ್ಲಿ ತೇಲಿಹೋಗುತ್ತಿರುವಂತೆ ಅನ್ಯಮನಸ್ಕಳಾಗಿ ಎಂಟನೆಯ ತರಗತಿಯ ಕಡೆ ಹೊರಟಳು. ಒಂಭತ್ತನೆಯ ತರಗತಿ ಅಮರನಾಥನದು, ಅವನೂ ಅದೇ ಹಾದಿ ಹಿಡಿದ. ಹತ್ತು ಮಾರು ಕಳೆವನಂತರ ಕೈಯಲ್ಲಿದ್ದ ದಫ್ತರವನ್ನು ವಿಶಾಲ ವಕ್ಷಕ್ಕಾಂತು ಹಿಡಿದು ಅಮರನಾಥ ಸ್ನೇಹಾನುರಾಗತಂದಿಲನಾಗಿ ಮೃದುಮಂದ ದನಿಯಲ್ಲಿ ನುಡಿದ,

"ನಾನು ಎಂ.ಎ.,ಗೆ ಸೇರುವುದೆಂದು ತೀರ್ಮಾನಿಸಿರುವೆ. ಅದರಿಂದ ಅಧಿಕ ಆರ್ಥಿಕ ಅಡಚಣೆ ಉಂಟಾಗುತ್ತದೆ. ಯಾವರೀತಿ ಭರಿಸಬೇಕೋ ಅರ್ಥವಾಗುತ್ತಿಲ್ಲ."

ಆ ಮಾತು ಏತಕ್ಕಾಗಿ ತನ್ನ ಮುಂದೆ ಪ್ರಸ್ತಾಪಿಸಲ್ಪಟ್ಟಿತು ಎಂಬುದು

ಸೂಕ್ಷ್ಮ ಬುದ್ಧಿಗೆ ಹೊಳೆಯದಿರಲಿಲ್ಲ. ನಿರ್ಮಲ ಯೋಚನೆಯ ಸೆಳವಿನಲ್ಲಿ ಸಿಕ್ಕಿ ಕ್ಷಣಿಕ ಮೌನಭಾರದನಂತರ ಪ್ರಾಸಂಗಿಕವಾಗಿ ಪ್ರಶ್ನಿಸಿದಳು,

"ರಜೆ ಕೇಳಿದ್ದೀರಾ ?"

"ಸಂಬಳವಿಲ್ಲದ ರಜೆ ಸಿಕ್ಕಿದೆ."

ನಿರ್ಮಲ ಅದೇ ವಿಚಾರವನ್ನು ಮನದಲ್ಲಿ ಮೆಲುಕು ಹಾಕುತ್ತ,

"ನೀವು ಒತ್ತಾಯಿಸಬಹುದಾಗಿತ್ತು......"

ಮಿಷನರಿಗಳ ರಾಜ್ಯದಲ್ಲಿ ನಮಗೂ ನಿಮಗೂ ಆ ಸೌಲಭ್ಯ ಬರುವುದಿಲ್ಲ!" ಅರಳುಕಂಗಳು ಲಘುಹಾಸ್ಯ ಸೂಚಕವಾಗಿ ಇನ್ನಷ್ಟು ಅರಳಿದುವು. ತುಟಿಗಳಲ್ಲಿ ಎಳೆನಗು ಮಿನುಗಿತು.

ಅವನ ನುಡಿ ಹಾಸ್ಯಭರಿತವಾಗಿದ್ದರೂ ಮನವನ್ನು ಸೂಜಿಯಂತೆ ಚುಚ್ಚಿತು. ನಿರ್ಮಲ ಮೌನಧಾರಣೆ ಮಾಡಿದಳು.

"ಹಣಕ್ಕೇನು, ಎಲ್ಲಾದರೂ ಸಿಗಬಹುದು....ನಮ್ಮನಮ್ಮಲ್ಲಿ ಆಂತರಿಕ ಸ್ನೇಹ ಸಂಬಂಧವಿಲ್ಲದೆ ತೆಗೆದುಕೊಳ್ಳುವುದೆಂದರೆ ಏನೋ ಒಂದು ರೀತಿಯ ಸಂಕೋಚ."

"ಹಾಗೆಂದರೆ ಓದು ಸಾಗಬೇಕಲ್ಲ?"

"ನನಗೂ ಅದೇ ಚಿಂತೆ. ಫೀಜು ಕಟ್ಟಲು ಎರಡು ದಿನ ಮಾತ್ರ ಉಳಿದಿದೆ."

"ಈಗ ಅಷ್ಟೂ ನಿಮ್ಮಲ್ಲಿಲ್ಲವೇ ?"

"ನಮ್ಮ ಸಂಸಾರಸಾಗರಕ್ಕೆ ಎಷ್ಟಿದ್ದರೂ ಸಾಲುವುದಿಲ್ಲ. ಇನ್ನೆರಡು ವರ್ಷ ಈ ಸಂಕಟ. ಅಲ್ಲಿಗೆ ತಮ್ಮಂದಿರ ವಿದ್ಯಾಭ್ಯಾಸ ಮುಗಿಯುತ್ತದೆ. ಅನಂತರ ಹಾಯಾಗಿ ಉಸಿರಾಡಬಹುದು."

"ಎಲ್ಲರದೂ ಅಷ್ಟೆ; ಈ ದೇಶದ ಜನಜೀವನ ತುಂಬಿಬರಬೇಕಾದರೆ ಇನ್ನೆಷ್ಟು ಕಾಲವೋ...."

ಆ ವಿಚಾರಸರಣಿ ಎಡೆಯಾಳಕ್ಕಿಳಿಯಿತು. ಸ್ವಲ್ಪ ಹೊತ್ತು ಯೋಚಿಸುತ್ತಿದ್ದು ಅನಂತರ ಭಾವಾವಿಷ್ಟನಾಗಿ ಮೆಲುಧ್ವನಿಯಲ್ಲಿ ಅಂದ "ನಾನು ನಿಮ್ಮೊಡನೆ ಹೃದಯ ಬಿಚ್ಚಿ ಮಾತಾಡಲು ಉದ್ದೇಶಿಸಿರುವೆ. ದಯವಿಟ್ಟು ಅವಕಾಶ ಕೊಡುವಿರಾ ?"

"ಅದರಿಂದೇನು ಪ್ರಯೋಜನ?"

ಅಮರನಾಥ ನಡುವೆ ಬಾಯಿ ಹಾಕಿದ, "ಅಷ್ಟೇಕೆ ಯೋಚನೆ? ನಾವು ಹೆಜ್ಜೆ ಹೆಜ್ಜೆಯಲ್ಲೂ ಸಹಕಾರ ಜೀವನಕ್ಕೆ–ಮಾನವ ಪ್ರಜ್ಞೆಗೆ ಬದ್ಧರಾಗಿದ್ದೇವೆ, ಎಂಬುದನ್ನು ಯಾವ ಕಾರಣಕ್ಕೂ ಬಿಟ್ಟುಕೊಡುವಂತಿಲ್ಲ... ನನ್ನ ವಿಚಾರ ಸಾಹಿತ್ಯವನ್ನು ಇದುವರೆಗೆ ಯಾರ ಮುಂದೆಯೂ ತೆರೆದಿಡುವ ಸಾಹಸವನ್ನು ಮಾಡಿಯೇ ಇರಲಿಲ್ಲ; ನಿಮ್ಮಲ್ಲಿ ಬೆಳೆಸಿಕೊಂಡ ಆತ್ಮೀಯತೆ ಬೇರೆಡೆ ಬೆಳೆಯುವುದು ಅಸಂಭವ....ಭಗವಂತ ಯಾವ ಕಾರಣಕ್ಕಾಗಿ ನಮಗೆ ಮಾನವ ಜನ್ಮವನ್ನು ಕೊಟ್ಟಿದ್ದಾನೋ ಅದರ 'ಸಾರ್ಥಕತೆ' ಪರಸ್ಪರ ಸಹಕಾರದ ಮೂಲಕವೇ ಆಗಬೇಕಷ್ಟೆ?"

"ಸಹಕಾರ ಆತ್ಮತೃಪ್ತಿಯಿಂದ ಒದಗಬಲ್ಲುದೇ ವಿನಾ...."

"ದಯವಿಟ್ಟು ನನ್ನ ಮಾತನ್ನು ಪರಾಂಬರಿಸುವಿರಾ?"

"ಅಷ್ಟು ದೊಡ್ಡ ಮಾತಾದರೂ ಏಕೆ ಅಮರನಾಥಬಾಬೂ?"

"ನನ್ನಲ್ಲಿ ದೊಡ್ಡದು–ಚಿಕ್ಕದುಗಳ ಪರಿಭೇದವಿಲ್ಲ. ಸಮಾಜದಲ್ಲಿ ಎಲ್ಲರೂ ಸರಿಸಮಾನರು."

"......."

"ನೀವು ನನ್ನನ್ನು ಅರ್ಥಮಾಡಿಕೊಂಡಿದ್ದೀರೋ, ಇಲ್ಲವೋ.... ನಾನಂತೂ ನಿಮ್ಮನ್ನು ಸಂಪೂರ್ಣವಾಗಿ ಅರ್ಥಮಾಡಿಕೊಂಡಿರುವೆ" ಎಂದ. ಅಕ್ಷರ ಅಕ್ಷರಗಳೂ ಪ್ರೀತಿ ವಿಶ್ವಾಸಗಳ ಝುರಿಯಂತೆ ಹರಿದುಬಂದುವು. ಹೃದಯಾಗಾರ ಸುಖದುಃಖಗಳ ಒಕ್ಕೂಟವಾಗಿದ್ದರೂ ತುಟಿಗಳಲ್ಲಿ ಎಳೆ ನಗುವಿನ ಧಾರೆ ಚೆಲ್ಲಿ ಸೂಸಿತು. ಅತ್ಯಂತ ಸೂಕ್ಷ್ಮವಾಗಿ ಅವಳ ಮುಖ ಭಾವವನ್ನು ಅವಲೋಕಿಸಿದ.

ನಿರ್ಮಲ ಒಂದೆರಡು ಘಳಿಗೆ ಮೌನಧಾರಣೆ ಮಾಡಿದಳು. ಮನೋ ವೇದಿಯ ಮೇಲೆ ನೂರಾರು ಆನೆಗಳು ನುಗ್ಗಿ ಬಂದಂತಾಯಿತು. ಎಷ್ಟು ಯೋಚಿಸಿದರೂ ಏನು ಹೇಳಬೇಕೋ ಹೊಳೆಯಲಿಲ್ಲ. ಕೌಲೀನ್ಯಭಾರದಿಂದ ಕಿಂಕರ್ತವ್ಯತೆ ತುಂಬಿದ ಮನದಿಂದ ಲಜ್ಜಾವೇಗಕ್ಕೆ ಸಿಕ್ಕಿ ಮುಖಮಂಡಲ ಅನಿರೀಕ್ಷಿತವಾಗಿ ರಂಗು ತಳೆಯಿತು. ಹೃದಯಮೃದಂಗ ಆಯ ತಪ್ಪಿದಂತೆ ವ್ಯಾಪ್ತಿಗೆ ಮೀರಿ ಮಿಡಿಯಹತ್ತಿತು. ಮನೋದೌರ್ಬಲ್ಯವನ್ನು ತೋರ

ಗೊಡದಿರಲು ತನ್ನನ್ನು ತಾನೇ ನಿಗ್ರಹಿಸಿ ಗಂಭೀರವಾಗಿ ಹೆಜ್ಜೆ ಹಾಕಿದಳು.

ಅವಳ ಮೌನ ಪೌರುಷಯುತವಾದ ಸ್ವಾಭಿಮಾನಕ್ಕೆ ಧಕ್ಕೆಯನ್ನು ತಂದಿತೇನೋ. ಅವನು ಸ್ವಲ್ಪ ಅಸಮಾಧಾನದಿಂದ ಅಂದ "ಬಹುಶಃ ನನ್ನ ಪ್ರಾರ್ಥನೆ ನಿಮಗೆ ಲಘುವಾಗಿ ಕಂಡಿರಬಹುದು. ಅದಕ್ಕೇ ನಾನೊಬ್ಬ...."

ನಿರ್ಮಲ ಕೆಸರಿನಲ್ಲಿ ಮುಳ್ಳು ತುಳಿದವಳಂತೆ ಮಿಡುಕಿಬಿದ್ದು ನಡುವೆ ಬಾಯಿ ಹಾಕಿದಳು,

"ಹಾಗಂತಲ್ಲ, ನಿಮ್ಮಷ್ಟು ಧೈರ್ಯ ನಮಗಿಲ್ಲ ಎಂದರೆ ಒಪ್ಪಿಕೊಳ್ಳು ತ್ತೀರಷ್ಟೆ? ಏನೇ ಇರಲಿ, ಇಂತಹ ವಿಚಾರಗಳನ್ನು ಹತ್ತು ಬಾರಿ ಯೋಚಿಸ ತಕ್ಕದ್ದು. ಮೇಲಾಗಿ ನಾನು ಪೂರ್ಣ ಸ್ವತಂತ್ರಳೂ ಅಲ್ಲ. ನನಗೆ ತಾಯಿ ಇದ್ದಾರೆ."

"ಒಪ್ಪಿಕೊಳ್ಳುವೆ. ಅವರದೇನಿದ್ದರೂ ಅನಂತರ. ಮೊದಲು ನೀವು ಮತ್ತು ನಿಮ್ಮ ನಿರ್ಧಾರ."

ಅವಳು ಬಾಯ್ದೆರೆಯಲಿಲ್ಲ. ಹೃದಯದ್ವಯಗಳು ಮೌನ ಸಂಭಾಷಣೆ ನಡೆಸಿದುವು. ಸ್ವಲ್ಪಹೊತ್ತು ನಿರಾತಂಕವಾಗಿ ಉರುಳಿತು. ಅನಂತರ ಅವನೆಂದ,

"ನಿಮ್ಮಲ್ಲಿ ಇದೊಂದು ಆತ್ಮಶಃ ನಿವೇದನೆ ...ದಯವಿಟ್ಟು ನಿರಾಕರಿಸ ಬಾರದು." ಮಾತು ಮುಗಿದಾಗ ಕಂಠ ಗದ್ಗದವಾಗಿತ್ತು. ಭಾವೋದ್ವೇಗ ದಿಂದ ಮುಖಬಿಂಬ ರಂಗು ತಳೆದಿತ್ತು. ಮರುಕ್ಷಣದಲ್ಲಿ ತನಗೆ ತಾನೇ ಅಂಕುಶವಾಗಿ ಕರುಣಕಾತರ ದೃಷ್ಟಿಯಿಂದ ನೋಡುತ್ತ ಪುನಃ ಬಿನ್ನೈಸಿ ಕೊಂಡ "ಈ ನಿರ್ಭಾಗ್ಯ ನಿಮ್ಮೊಂದಿಗೆ ಏನಾದರೂ ಅನುಚಿತವಾಡಿದ್ದರೆ ದಯವಿಟ್ಟು ಕ್ಷಮಿಸಿಬಿಡಿ."

ಆ ವಿನಯವಿಶೇಷ ಎದೆಯಾಳಕ್ಕಿಳಿದಾಗ ಹೆಂಗರುಳು ಬಿಸಿಲಟ್ಟಿದ ಮಂಜಿನಂತಾಯಿತು. ಸಿಡಿದಾದ ನಿಟ್ಟುಸಿರು ಬಿಟ್ಟು ಕ್ಷೀಣಶ್ರಾಂತ ಕಂಠ ದಿಂದ ನುಡಿದಳು ನಿರ್ಮಲ,

"ನಿಮ್ಮ ಸ್ನೇಹ-ಸೌಹಾರ್ದಕ್ಕೆ ತುಂಬ ವಂದನೆಗಳು."

"ಬರೀ ಇಷ್ಟರಲ್ಲೇ ಮುಗಿಸಬೇಡಿ!"

ಇಬ್ಬರ ಮುಖದಲ್ಲೂ ಎಳೆನಗು ಮಿನುಗಿತು. ಅಷ್ಟರಲ್ಲಿ ಇಬ್ಬರೂ

ಹೂದೋಟದ ಹಾದಿಯನ್ನು ಕಳೆದು ಶಾಲೆಯ ಮೆಟ್ಟಿಲನ್ನು ಹತ್ತುತಿದ್ದರು. ಅವನು ತನ್ನ ತರಗತಿಯೆಡೆಗೆ ಹೆಜ್ಜೆ ಹಾಕುತ್ತ "ಇನ್ನೊಮ್ಮೆ ವಿಚಾರ ಮಾಡುವ. ನೀವು ಅಷ್ಟು ಸಹಕರಿಸಿದರೆ ಸಾಕು."

"ಆಗಲಿ, ಅದರಲ್ಲಿ ನಷ್ಟವಿಲ್ಲ."

ಅವನು ನಗುಮುಖದಿಂದ ಅಭಿವಂದಿಸಿದ,

"ನಿಮ್ಮ ಸೌಜನ್ಯಕ್ಕಾಗಿ ತುಂಬ ವಂದನೆಗಳು!"

ನಿರ್ಮಲ ಪ್ರತಿವಂದಿಸುವ ಉದ್ದೇಶ ಹೊಂದಿದ್ದರೂ ತುಟಿಗಳು ಯಾವ ಕಾರಣಕ್ಕೋ ಬಿರಿಯಲಿಲ್ಲ. ಕಣ್ಣುಗಳ ಭಾವ ಕೂಗಿ ಹೇಳಿತು "ನಿಮ್ಮಂತಹ ವರು ವಿರಳ....ನಿಮ್ಮ ಸ್ನೇಹ ಸಹಕಾರಗಳು ದೊರಕಿದಲ್ಲಿ ಪೂರ್ಣ ಸಂತೋಷ ದಿಂದ ಭರಿಸಬಲ್ಲೆ. ಮುಖ್ಯವಾಗಿ ಭಗವಂತ ಮುಕ್ತಹಸ್ತದಿಂದ ಆಶೀರ್ವದಿಸ ಬೇಕು!"

ಆ ಮುಹೂರ್ತದಲ್ಲಿ ಇಬ್ಬರೂ ತಮ್ಮ ತಮ್ಮ ತರಗಳಿಗಳಿಗೆ ಹೆಜ್ಜೆ ಇಟ್ಟಾಗಿತ್ತು.

೫

....ಎತ್ತರವಾದ ವೃಕ್ಷಗಳೆಡೆಯಲ್ಲಿ ಅನುತಪ್ತ ವಾಯುಮಂಡಲ ಸುಯ್ಯು ಲಿಡುತಿತ್ತು.

....ಮೋಹನೀಯ ದನಿಯಲ್ಲಿ ಟಿಟ್ಟಿಭ ದಂಪತಿಗಳು ಮೌನ ವ್ಯಾಕುಲ ವನ್ನು ನೀಗುತಿದ್ದುವು.

....ಹೂದೋಟದ ಆವರಣವೆಲ್ಲ ಉದುರಿದ ದರುಗೆಲೆಗಳಿಂದ ತುಂಬಿ ಹೋಗಿತ್ತು. ಮಾಲಿಗಳು ದಿನವೂ ಝಾಡಿಸುತ್ತಾರೆ. ಆದರೂ ಆ ವಿಶಾಲ ವಾದ ಪ್ರಾಂಗಣದಲ್ಲಿ ಎಲ್ಲಿಂದ ಎಲ್ಲಿಯವರೆಗೂ ಧೂಳೀಧೂಸರಿತ ಶೇಷಾ ವಶೇಷ....

ದಿನಚರಿಯಿಂದ ಮುಕ್ತಳಾದ ನಿರ್ಮಲ ಶಾಲೆಯ ಆವರಣದಿಂದ ಹೊರ ಹೆಜ್ಜೆಯಿಟ್ಟಾಗ ರಸ್ತೆ ಜನಭರಿತವಾಗಿತ್ತು. ಕಿವಿ ಕಿವುಡಾಗುವಂತಹ ಗದ್ದಲ ಮನಃಪ್ರಾಣಗಳನ್ನು ಆವರಿಸುತಿತ್ತು. ಕಾರ್ಖಾನೆಗಳ-ಸಮಸ್ತ ಮನೆಗಳ

ಕಟುಧೂಮಕಾಲಿಸೆ ದಿಗ್ ದಿಗಂತಗಳನ್ನು ಮುಚ್ಚುತಿತ್ತು. ಆರ್ದ್ರನಯನಗಳು ಒಮ್ಮೆ ಅತ್ತ ಹರಿದು ಹಾದಿಯಂಚಿನ ಹಸುರಿನ ಮೇಲೆ ಹರಿದುವು. ಗರಿಕೆಯ ಕುಡಿ ಸಮಸ್ತ ಪದಾಘಾತಕ್ಕೆ ಸಿಕ್ಕಿ ನಲುಗಿ ಜಜ್ಜರಿತವಾಗಿ ಮಣ್ಣಿನ ಹುಡಿಯನ್ನು ಅತುಕೊಂಡಿದ್ದುದು ಹಾದಿಯುದ್ದಕ್ಕೂ ಕಾಣಿಸುತಿತ್ತು. ದೃಗ್ವಲಯದಲ್ಲಿ ಸಾವಿರ ಚಿತ್ತಾರಗಳು ನಲಿಯುತಿದ್ದರೂ ಅವುಗಳ ಮೇಲೆ ಗಮನ ಅಷ್ಟಾಗಿ ಹರಿದಿರಲಿಲ್ಲ. ಚಿತ್ತಭಿತ್ತಿಯಲ್ಲಿ ಅಮರಸಾಧನ ಮೂರ್ತಿ ಚಿತ್ರಿತವಾಗಿ, ಆತನ ದೈನ್ಯಯುಕ್ತವಾಣಿ ಕರ್ಣಪಟಲಗಳ ಮೇಲೆ ಮೃದು ಮಂದಗತಿಯಲ್ಲಿ ಪ್ರತಿಧ್ವನಿಸಿತು. ದೇಹಾಂತರಿತ ನಾನಾ ವಿಚಾರಗಳ ವಾತ್ಯಾಚಕ್ರದಲ್ಲಿ ಸಿಲುಕಿ ಹೆಜ್ಜೆ ಹೆಜ್ಜೆಯೂ ತತ್ತರಿಸುತ್ತಿರುವಂತೆ ಭಾಸವಾಯಿತು. ಆದರೂ ಯಾವುದೋ ಅವ್ಯಕ್ತ ಶಕ್ತಿಯ ದಿವ್ಯಪ್ರಭಾವದಿಂದ ಅವು ಛಂದೋಬದ್ಧವಾಗಿ ಮುನ್ನಡೆಯುತ್ತಲಿವೆ. ಅದೇ ನೇರಕ್ಕೆ ಅದೃಷ್ಟದ ಪಾರಾವಾರವನ್ನು ಮುಟ್ಟಲು ಮನಸ್ಸು ಹುಯ್ಯಲಿಡುತಿತ್ತು. ಆದರೆ, ಹೃದ್ಗಡಲಿನ ಎಲ್ಲಿಯಲ್ಲಿ ಯಾವುದೋ ಕಂಡರಿಯದ ಕಳವಳ–ಶಂಕೆ.

ಆದರೂ ಆತನ ಭಾವೋನ್ಮತ್ತತೆ ಸುತ್ತುಮುತ್ತ ಭ್ರಮರದಂತೆ ಸುಳಿಸುತ್ತುತ್ತಿರುವಾಗ ಯಾವ ಕಡೆ ತಿರುಗಿದರೂ ತಪ್ಪಿಸಿಕೊಳ್ಳುವುದು ಕಷ್ಟ. ಆ ರಮಣೀತೃಷಿತ ಲೋಚನಗಳ ದೀಪ್ತಿ ಅಂತರ್ನಿಹಿತ ಆಶಾಲಹರಿಯನ್ನು ಕೊಕ್ಕೆಯಂತೆ ಹಿಡಿದೆಳೆಯುತಿತ್ತು. ಅರ್ಥಭರಿತವಾದ ಉಷ್ಣೋಧಿಕ ಜ್ವಾಲೆಯಲ್ಲಿ ತನು ಅವ್ಯಾಹತವಾಗಿ ಬೇಯುತ್ತಿರುವಾಗಲೂ ಕರ್ತವ್ಯ ಜ್ಞಾನಕ್ಕೆ ಎಟುಕದ ಅತ್ಯಂತ ವಿಭಿನ್ನವಾದ ಮತ್ತೊಂದು ಜೀವನ ಜ್ವಾಲೆ ಅಖಂಡವಾಗಿ ಬೆಳಗುತ್ತಿದೆ; ಅದರಲ್ಲಿ ಲೀನವಾಗಿ ಪಡೆಯಲಿರುವ ಮಹಾನುಭೂತಿ ಅಖಂಡ ಸ್ತ್ರೀತ್ವವನ್ನು ಸಾರಿದ್ದು ಎಂಬ ಅಭಿಜ್ಞಾನ ನೆತ್ತರಿನ ಕಣಕಣದಲ್ಲೂ ಪ್ರವಹಿಸುತ್ತದೆ. ಹೃದಯದಾಳದಲ್ಲಿ ನಡೆಯುವ ದ್ವೈದೀ ಭಾವ ವಿಭಾವಗಳ ತುಮುಲಯುದ್ಧ ಮನಃಪ್ರಾಣಗಳನ್ನು ಹಿಂಡುತಿತ್ತು. ಹಾಗೇ ತಲೆಬಾಗಿ ಹೆಜ್ಜೆ ಹಾಕಿದಳು. ಹೃದಯಾರವಿಂದ ದಳದಳವಾಗಿ ಅರಳಿ ವಿಚಿತ್ರ ಪರಿಮಳವನ್ನು ಬೀರುತಿತ್ತು. ಆ ಮುಂದಿನ ಹಾದಿ ಹೇಗೆ ಸಾಗಿತೋ ಅದರೆಡೆಗೆ ಗಮನವೇ ಇರಲಿಲ್ಲ. ಆಕಾಶತಲದಲ್ಲಿ ಯಾವಾಗ ಧ್ರುವ ನಕ್ಷತ್ರ ಮೂಡಿಬಂತೋ, ನಿಶಾಕಾಮಿನಿ ಯಾವಾಗ ಕೃಷ್ಣ ಕೌಶೇಯ ಉತ್ತರೀಯವನ್ನು

ಧರಿಸಿದಳೋ, ದಿನಾಂತ ಕಾಲೀನ ಶೀತ ಯಾವಾಗ ಆರಂಭವಾಯಿತೋ, ಮೂಡಣದಂಚಿನಲ್ಲಿ ಯಾವಾಗ ಚಂದ್ರಬಿಂಬ ಅನುಭೂತವಾಯಿತೋ ಒಂದೂ ಗಮನಕ್ಕೆ ಬಂದಿರಲಿಲ್ಲ.

ಮೊಟ್ಟಮೊದಲು ಚಿಂತಾಲಯದಿಂದ ಹೊರಬಿದ್ದಾಗ ಅವಳು ಮನೆಯ ಮೆಟ್ಟಿಲನ್ನು ಹತ್ತುತಿದ್ದಳು. ಗೃಹ ವಲಯದಲ್ಲಿ ನೆರೆ ಹೊರೆಯ ಸ್ತ್ರೀಯರು ಸಾಯಂಸಮಯದ ವಿಶ್ರಾಂತಿಯಲ್ಲಿ ಲೋಕಾಲೋಕ ವಿಚಾರಗಳ ಸಮೀಕ್ಷೆ ಯಲ್ಲಿ ಸ್ವಚ್ಛಂದವಾಗಿ ಮುಳುಗಿದ್ದರು. ಕಿರು ಅಂಗಳದಲ್ಲಿ-ರಸ್ತೆಯ ಬದಿ ಯಲ್ಲಿ ಮಕ್ಕಳು ಆಟವಾಡುವುದರಲ್ಲಿ ತೊಡಗಿದ್ದರು. ಎಳೆಯ ತುಟಿಗಳಲ್ಲಿ ಅಪಾಯಕ ನಗು ಮತ್ತೆಮತ್ತೆ ಚಿಮ್ಮುತಿತ್ತು. ಆ ಎಳೆಯರೊಂದಿಗೆ ಕೆಲವು ಮುದ್ದುಮುದ್ದಾದ ನಾಯಿ ಮರಿಗಳೂ ಬೆಕ್ಕಿನ ಮರಿಗಳೂ ಸಂಭ್ರಮ ದಿಂದ ಕೂಡಿಕೊಂಡಿದ್ದುವು.

ಸುತ್ತಮುತ್ತಿನ ಬಂಧುಜೀವ ವಲಯದಲ್ಲಿ ಅದೆಂತಹ ಜೀವನೀಶಕ್ತಿ ಅಡಗಿತ್ತೋ! ಆಗಲೇ ಗುಸುಗುಸು-ಕುಸುಕುಸು! ವಿಷಯ ಸ್ವಾಮಿನಿ ಯವರೆಗೂ ಹೋಗಿತ್ತು.

"ಅಲ್ರೀ! ನಿಮ್ಮ ಮಗಳು....ಅದಾರೋ ಬೇರೆ ಜಾತಿಯವನಂತೆ! ಅವನೊಂದಿಗೆ ಓಡಾಡಿಕೊಂಡಿದ್ದಾಳೆ. ಈಗಲೇ ಸ್ವಲ್ಪ ಹತೋಟಿಯಲ್ಲಿಟ್ಟು ಕೊಳ್ಳಿ ! ಕೈ ಮಿಂಚಿದಮೇಲೆ ಕಷ್ಟ !"

"ಅಯ್ಯೊ, ದೇವರೆ! ನನ್ನನ್ನು ಯಾಕಾದರೂ ಬದುಕಿಸಿದ್ದೀಯೋ.... ಏನೋ !"

ಈ ಪ್ರಕಾರ ಕಂಠಸರಣಿ ಹರಿಯುತ್ತಿದ್ದಾಗಲೆ ಒಳಹೆಜ್ಜೆಯಿಟ್ಟ ನಿರ್ಮಲ ಅವರವರ ಮುಖಭಾವವನ್ನು ಗಮನಿಸಿದರೂ ಆ ನಾಲಿಗೆಗಳು ಆ ಕ್ಷಣವೇ ಸ್ತಬ್ಧವಾದುದರಿಂದ ವಿಷಯವನ್ನು ಸ್ಪಷ್ಟವಾಗಿ ತಿಳಿಯಲಾಗಲಿಲ್ಲ. ಅಂತೂ ತನ್ನ ಹಿಂದೆ ಯಾವುದೋ ಮುಸಲಧಾರೆ ಹರಿಯುತ್ತಿದೆ ಎಂಬುದು ಮಾತ್ರ ಅರ್ಥವಾಯಿತು. ಅವಸರವಸರವಾಗಿ ದಿನಚರಿಯನ್ನು ಮುಗಿಸಿ ಯಾವ ತರ್ಕಕ್ಕೂ ಅವಕಾಶ ಕೊಡದಂತೆ ಮರುದಿನದ ಪಾಠಗಳ ತಯಾರಿಕೆ ಯಲ್ಲಿ ಗಮನವನ್ನು ನೆಟ್ಟಳು. ಆ ಕಿಷ್ಕಿಂಧಾಪುರಿಯಲ್ಲಿ ಚಾಪೆಯನ್ನು ಹಾಸಿ ಅದರ ಮೇಲೆ ಹಲವಾರು ಪುಸ್ತಕಗಳನ್ನು ಹರಡಿಕೊಂಡು ಕುಳಿತ ಮಗಳ

ಗಮನವನ್ನು ಇತ್ತ ಸೆಳೆದುಕೊಳ್ಳಲು ಪ್ರಯತ್ನಿಸಿ ಸುಮ್ಮನಾದಳು—ಜಾನಕಿ. ಮನಃಪ್ರಾಣಗಳಲ್ಲಿ ಅದಮನೀಯ ಕಿಚ್ಚಿನ ಕಿಡಿ ಉರಿಯುತಿತ್ತು. ತನ್ನ ಆಶಾದೀಪ್ತಿಯನ್ನು ಕುಡಿಕಟ್ಟದಂತೆ ಉರಿಸುವ ಆಶಯ ಒಳಗಿಂದೊಳಗೇ ನಲುಗುತಿತ್ತು. ರೂಕ್ಷ ಅಧರಗಳ ಮೇಲೆ ನೂರು ಪ್ರಶ್ನೆಗಳು ಮೌನಶೋಕ ದಿಂದ ಮೂಡಿ ನಿಂತಿದ್ದುವು. ತನ್ನನ್ನೇ ತಾನು ನಂಬಲಾಗದಂತಹ ವಿಕಟ ಸನ್ನಿವೇಶ....

ಆದರೆ ಆ ಒಂದಕ್ಕೂ ನಿರ್ಮಲಳ ರೀತಿಯಲ್ಲಿ ಅವಕಾಶ ದೊರೆಯಲಿಲ್ಲ. ಹೊತ್ತು ಲೀಲಾಜಾಲವಾಗಿ ಕರಗಿತು. ನಿರ್ಮಲ ನಿಮಿಷವೂ ಬಿಡುವಿಲ್ಲದಂತೆ ತನ್ನ ದಿನಚರಿಯಲ್ಲಿ ತೀವ್ರ ತನ್ಮಯಳಾಗಿದ್ದು ಮರುದಿನ ಯಥಾಕ್ರಮ ಮನೆಯನ್ನು ಬಿಟ್ಟು ಶಾಲೆಗೆ ಹೊರಟಳು. ದಯಾರ್ದ್ರ ಹೃದಯದಲ್ಲಿ ಅಮರನಾಥನ ಮೂರ್ತಿ ನೆಲೆನಿಂತಿತ್ತು. ಇಂದು ಅಂತಿಮವಾಗಿ ಆತನಿಗೆ ತನ್ನ ಅಭಿಪ್ರಾಯವನ್ನು ತಿಳಿಸುವುದಾಗಿ ಹೇಳಿಯೂ ಆಗಿತ್ತು. ಆದರೆ ಈಗಾಗಲೇ ಬಂಧುಜೀವ ವಲಯದಲ್ಲಿ ಎದ್ದ ಬಿರುಗಾಳಿ ಹೆಜ್ಜೆಹೆಜ್ಜೆಯನ್ನೂ ಹಿಂದೆಳೆಯುತ್ತದೆ. ಅಜ್ಞಾತ ಹಸ್ತಗಳು ಹೃದಯವನ್ನು ಹಿಂಡುತ್ತವೆ. ಹೆಜ್ಜೆ ಮುಂದಿಡುವುದೋ ಹಿಂದಿಡುವುದೋ ಅರ್ಥವಾಗುತ್ತಿಲ್ಲ. ಯೋಚನಾ ತರಂಗಗಳ ನಿರಂತರ ಧಾಳಿಯಲ್ಲಿ ಚಿತ್ತವೆಲ್ಲ ಕದಡಿ ಬಗ್ಗಡವಾಗಿತ್ತು. ನೂರು ಬಗೆಯಲ್ಲಿ ಭಗವಂತನಲ್ಲಿ ಬೇಡಿಕೊಂಡಾಗಿತ್ತು....ಅವನು ಯಾರಿಗೂ ಉತ್ತರಿಸದಿರುವಂತೆ ಅವಳಿಗೂ ನಿರುತ್ತರನಾಗಿಯೇ ಇದ್ದ. ಮನೆಯಲ್ಲಿ ಒಮ್ಮೆ ಎರಡು ಕಾಗದದ ಚೂರುಗಳನ್ನು ತೆಗೆದುಕೊಂಡು ಒಂದರಲ್ಲಿ 'ಬೇಕು' ಎಂತಲೂ ಇನ್ನೊಂದರಲ್ಲಿ 'ಬೇಡ' ಎಂತಲೂ ಬರೆದು ಸುರುಳಿ ಸುತ್ತಿ ಕಲಬೆರಸಿ 'ಲಾಟರಿ' ಎತ್ತಿದ್ದಳು. ಅದರಲ್ಲಿ ಬೇಕು ಎಂಬ ಚೀಟಿಯೇ ದೊರಕಿ ಮನಸ್ಸಿಗೆ ಎಷ್ಟೋ ಸಮಾಧಾನ. ಆದರೂ ಏನೋ ಒಂದು ಬಗೆಯ ಕಳವಳ....ಅನಿರ್ವಚನೀಯ ತಳಮಳ. ಯೋಚನಾಭಾರದಿಂದ ಆ ದೂರದ ಹಾದಿಯನ್ನು ಕಳೆದು ಕಾನ್ವೆಂಟಿನ ಆವರಣಕ್ಕೆ ಕಾಲಿಡುವಾಗಲೇ ಲೀಲಾ ಕೂಡಿಕೊಂಡಳು.

"ನಿನ್ನೆ ನೀನೇಕೆ ಮೀಟಿಂಗಿಗೆ ಬರಲಿಲ್ಲ ನಿರ್ಮಲ?"

"ತುಂಬ ತಲೆ ನೋಯುತಿತ್ತು; ಮುಖ್ಯೋಪಾಧ್ಯಾಯಿನಿಗೆ ಹೇಳಿ

ಮನೆಗೆ ಹೋದೆ. ಆದರೇನು ವಿಶ್ರಾಂತಿ ದೊರೆಯಲಿಲ್ಲ, ಇಂದಿನ ಪಾಠಗಳ ತಯಾರಿ ಇತ್ತು. ಅದನ್ನೆಲ್ಲ ನೋಡಿಕೊಳ್ಳುವುದರಲ್ಲೇ ಹೊತ್ತು ಕಳೆಯಿತು."

"ಓಹೋ....! ಅದು ಒಳ್ಳೆಯದೇ ಆಯ್ತು. ನಾ ಸೀಗ ನೋಡಿಕೊಳ್ಳ ಬೇಕಾಗಿದೆ." ಎಂದ ಲೀಲಾ ಒಂದು ನಿಮಿಷ ತಡೆದು ಮುಂದುವರಿದಳು "ನಿನ್ನೆ ಅಮರನಾಥ್ ಬಹಳ ಚೆನ್ನಾಗಿ ಮಾತಾಡಿದರು. ಅಕ್ಷರ ಅಕ್ಷರವೂ ಮುತ್ತು ಪೋಣಿಸಿದಂತಿತ್ತು !"

ಆ ಮಾತನ್ನು ಮುಂದುವರಿಸದಿರುವುದು ಸೂಕ್ತವಾಗಿ ತೋರಿತು ನಿರ್ಮಲಳಿಗೆ. ಚಿತ್ತ ಪ್ರವೃತ್ತಿ ಒಮ್ಮೆಲೇ ನೀರಿನಿಂದ ಹೊರತೆಗೆದ ಮೀನಿ ನಂತಾಯಿತು. ಒಂದೆರಡು ಕ್ಷಣ ಚಡಪಡಿಸಿ "ಪ್ರಿನ್ಸಿಪಾಲರು ಮಾತಾಡಿ ದರೇ ?....ಅವರದು ಹೇಗಿತ್ತು ?" ಎಂದಳು. ವಾಕ್ಯಸರಣಿ ಮತ್ಸ್ಯಗತಿಯಲ್ಲಿ ಸರಕ್ಕನೆ ಬೇರೆಡೆಗೆ ಚಲಿಸಿತು.

"ಅವರದೂ ಪರವಾಯಿಲ್ಲ. ಆದರೆ ಇವರದೇ ಬಹಳ ಚೆನ್ನಾಗಿತ್ತು !"

"ಓ....! ನೀನೇ ಅವರಿಗೆ ಪುರಸ್ಕಾರ ಕೊಡುವಂತಿದೆ.... ?"

ವಿನೋದವಾಗಿಯಾದರೂ ಅದನ್ನು ತಳ್ಳಿ ಹಾಕುವ ವಿಚಾರ ಮೂಡಿ ಹಾಸ್ಯ ಪ್ರಧಾನವಾಗಿ ಬಿತ್ತರಿಸಿದಳು—ನಿರ್ಮಲ. ಎದೆಯ ನೆಲೆಯಲ್ಲಿ ಅಜ್ಞಾತ ಸಂತಸಧಾರೆ ಎಣೆಯಿಲ್ಲದೆ ಹರಿದಾಡುತಿತ್ತು.

ಲೀಲಾ ಮುಗುಳ್ನಗೆ ಬೀರಿದಳು.

ಇಬ್ಬರೂ ಆತ್ಮೀಯತೆಯಿಂದ ಕೈ ಕೈ ಹಿಡಿದು ಹತ್ತು ಹೆಜ್ಜೆ ಸಾಗಿರ ಬಹುದು. ಎದುರುಗಡೆಯಿಂದ ಪ್ರಿನ್ಸಿಪಲ್ ಎದುರಾದಳು.

ಇಬ್ಬರೂ ಏಕ ಕಂಠದಿಂದ ಬಿತ್ತರಿಸಿದರು.

"ನಮಸ್ಕಾರ ಡಾಕ್ಟರ್ !"

"ನಮಸ್ಕಾರ" ಎಂದ ಪ್ರಿನ್ಸಿಪಲ್ ನಿರ್ಮಲೆಯನ್ನು ಕುರಿತು ಕೇಳಿದಳು, "ನಿನ್ನೆ ಏಕೆ ತಪ್ಪಿಸಿಕೊಂಡೆ ?"

"ತುಂಬ ತಲೆ ನೋಯುತಿತ್ತು. ಮುಖೋಪಾಧ್ಯಾಯಿನಿಗೆ ಹೇಳಿ ಹೋಗಿದ್ದೆ."

"ಓಹೋ....? ಈಗ ಹೇಗಿದ್ದಿ ?"

"ಪರವಾಯಿಲ್ಲ; ಕಡಿಮೆಯಿದೆ"

ಒಬ್ಬಳೇ ಯೋಚಿಸಲು ಮಾಡಿಕೊಂಡಿದ್ದ ಬಿಡುವಿಗೆ ತಲೆ ನೋವಿನ ಬಣ್ಣ ಕೊಟ್ಟುದುದು ಮನಸ್ಸಿಗೆ ಹಿತವಿಲ್ಲದಿದ್ದರೂ ವಿಧಿ ಇರಲಿಲ್ಲ. ಅಷ್ಟಲ್ಲದೆ ಈಗಲೂ ಸಹ ಸುಳ್ಳು ಹೇಳಬೇಕಾಗಿ ಬಂದ ಬಗೆ ವಿಷಣ್ಣ ಭಾವವನ್ನು ಮೂಡಿಸಿತು. ನಿಶ್ಶಬ್ದ ಪ್ರಕೃತಿಯ ಅಂತರಾಳದಲ್ಲಿ ನಡೆವ ಕೋಲಾಹಲ ಪೂರ್ಣ ಯುದ್ಧವನ್ನವಲೋಕಿಸುತ್ತಿರುವಾಗಲೇ ಪ್ರಿನ್ಸಿಪಲ್ ನುಡಿದಳು, "ಮಧ್ಯಾಹ್ನದ ತರಗತಿ ಮುಗಿದ ಮೇಲೆ ಆಫೀಸಿಗೆ ಬಂದು ಬಿಡು; ಸ್ವಲ್ಪ ಕೆಲಸ ಇದೆ."

"ಆಗಲಿ."

ಪ್ರಿನ್ಸಿಪಲ್ ತನ್ನ ಆಫೀಸಿಗಭಿಮುಖವಾಗಿ ಹೊರಟಳು. ಧವಳಾಂಬರ ಧಾರಿಣಿ, ಮಲ್ಲಿಗೆಯನ್ನಣಕಿಸುವ ಅಂಗಕಾಂತಿ, ರಜತ ಸಲಾಕೆಯಂತಹ ಶರೀರ ಸಂಪತ್ತು, ಸುಂದರವಾದ ಮುಖ ಬಿಂಬ, ಶ್ರಮಬಿಂದು ಸುಸಜ್ಜಿತ ಪ್ರಶಸ್ತ ಲಲಾಟ, ತಾಳಲಯ ಬದ್ಧವಾದ ಅಭಿಶಸ್ತ ಹೆಜ್ಜೆಗಳಗತಿ ಒಂದೊಂದೂ ದರ್ಶನೀಯವಾಗಿತ್ತು. ಒಂದೆರಡು ಕ್ಷಣ ಅವಳನ್ನೇ ಹಿಂಬಾಲಿಸಿದ ನೋಟ ಹಿಮ್ಮರಳಿದಾಗ ಭಾರವಾಗಿದ್ದ ಎದೆಯಿಂದ ಸಿಡಿದಾದ ಬಿಸಿಯುಸಿರೊಂದು ಹೊರಬಿತ್ತು. ಲೀಲಾ ನಾಲ್ಕನೆಯ ತರಗತಿಯ ಹಾದಿ ಹಿಡಿದಳು. ನಿರ್ಮಲ ಹೂದೋಟದ ಕಿರುಹಾದಿಯನ್ನು ಹಿಡಿದು ಎಂಟನೆಯ ತರಗತಿಯ ಕಡೆ ಹೊರಟಳು. ಅದಿರುವುದು ಉದ್ಯಾನದ ಆಚೆಯ ಹೊಸ ಕಟ್ಟಡದಲ್ಲಿ. ಉದ್ಯಾನದ ಉದ್ದಗಲಕ್ಕೂ ನೆರಳು ಬೆಳಕುಗಳ ಹಾಸಿನ ಚಿತ್ತಾರ ಸುರಮ್ಯ ವಾಗಿತ್ತು.

ತಲೆ ಬಾಗಿ ಹೆಜ್ಜೆ ಹಾಕಿದಳು.

ಭವಿಷ್ಯದ ಚಿಂತೆ ಮನವನ್ನು ಕೀಟದಂತೆ ಕೊರೆಯುತಿತ್ತು. ಒಂದು ನಾಣ್ಯವನ್ನು ತೆಗೆದು ಏಕನಿಷ್ಠೆಯಿಂದ ಮೇಲೆಸೆದು ಮುಖಮಡಿಯಾಗಿ ಬಿದ್ದರೆ ಅಪಶಕುನ ಎಂದುಕೊಂಡು ಮೈ ಬಾಗಿ ನೋಡಿದರೆ ಅದು ಮೇಲ್ಮುಖ ವಾಗಿಯೇ ಬಿದ್ದಿತ್ತು! ಎಂತಹ ಆಶ್ಚರ್ಯ? ಬಹುಶಃ ಆ ಭಗವಂತನ ಆಶೀರ್ವಾದವೇ ಇರಬೇಕು! ಎನಿಸಿದಾಗ ರಕ್ತದ ಪ್ರತಿ ಕಣವೂ ತುಳುಕಿತು. ನಾಣ್ಯವನ್ನು ಭಕ್ತಿಯಿಂದ ಕಣ್ಣಿಗೊತ್ತಿಕೊಂಡು ಚೀಲಕ್ಕೆ ಸೇರಿಸಿದಳು. ಹೃದಯ ವೇಗುಲದ ಹೆಬ್ಬಾಗಿಲು ಸಾನಂದದಿಂದ ತೆರೆಯಿತು. ಇನ್ನು

ಆರಾಧಿತ ಮೂರ್ತಿಯನ್ನು ಬರಮಾಡಿಕೊಳ್ಳುವುದೊಂದು ಬಾಕಿ.

ನಿಯಮಿತ ತರಗತಿಗಳು ಆರಂಭವಾಗುವ ಮುನ್ನ ನೂತನ ವಿದ್ಯಾರ್ಥಿಗಳಲ್ಲಿ ಅನೇಕರಿಗೆ 'ಟ್ಯೂಶನ್' ಹೇಳುವ ಅಗತ್ಯವಿತ್ತು. ಆಗಲೇ ಹಲವಾರು ವಿದ್ಯಾರ್ಥಿಗಳು ಅಲ್ಲಿ ಕೂಡಿದ್ದಾರೆ....ನಿರ್ಮಲ ಪಾಠ ಕೈಕೊಂಡಾಗಲೇ ಪಕ್ಕದ ಕೊಠಡಿಯಲ್ಲಿ ಅಮರನಾಥನ ದೀಪ್ತಕಂಠ ಘಂಟೆ ಬಾರಿಸಿದಂತೆ ಕೇಳಿಬರುತಿತ್ತು; ಒಂದೊಂದು ಅಕ್ಷರವೂ ಹೃದಯ ಫಲಕದ ಮೇಲೆ ಸಾಮರಸದ ಮುದ್ರೆಯನ್ನು ಒತ್ತುವಂತೆ ಹೊಮ್ಮುತಿತ್ತು. ಅತ್ಯಂತ ಸರಳವಾದ ಭಾಷೆಯಲ್ಲಿ–ಮಕ್ಕಳಿಗೆ ಸುಲಭವಾಗಿ ಅರ್ಥವಾಗುವಂತೆ ನಯವಿನಯಗಳ ಒಕ್ಕೂಟವಾಗಿ ಅವನು ವಿವರಿಸುತಿದ್ದ. ಅಲ್ಲಿ ಒಂದು ತಾಸು ಪಾಠ ಪ್ರವಚನವನ್ನು ನಡೆಸಿ ಅಮರನಾಥ ವರಾಂಡಕ್ಕೆ ಹೆಜ್ಜೆ ಇಟ್ಟಾಗಲೇ ನಿರ್ಮಲ ತರಗತಿಯಿಂದ ಹೊರಬಂದಳು. ಬೋನಿನಿಂದ ಹೊರಬಿದ್ದ ಹಕ್ಕಿಗಳಂತೆ ಮಕ್ಕಳೆಲ್ಲ ಅಂಗಳಕ್ಕೆ ಓಡಿದರು. ಇಬ್ಬರ ಮುಖದಲ್ಲೂ ಊಹಿಸಲೂ ಆಗದಂತಹ ಎಳೆನಗು ಮೂಡಿ ಮಾಯವಾಯಿತು. ಸಾಲುಗಂಬಕ್ಕೆ ಮೈಯಾಂತು ನಿಂತ ನಿರ್ಮಲ ಒಂದು ಕ್ಷಣ ಹುಬ್ಬೆತ್ತಿ ನೋಡಿ ನೋಟವನ್ನು ಬೇರೆಡೆಗೆ ಹರಿಸಿದಳು. ನರನಾಡಿಗಳಲ್ಲಿ ಲಜ್ಜೆ–ಸಂಕೋಚಗಳ ಝುರಿ ಹರಿದಾಡಿ ಆಪಾದಮಸ್ತಕವೂ ಮೆಲ್ಲನೆ ನವಿರೆದ್ದಿತು. ಹೃದಯರಂಗವನ್ನು ಭಾವನೆಗಳ ಹಿಂಡು ಹೊಕ್ಕು ಗಲಿಬಿಲಿ ಮೂಡಿಸಿದುವು. ಒಂದೆರಡು ಘಳಿಗೆ ತನ್ನನ್ನು ತಾನು ಹತೋಟಿಯಲ್ಲಿಟ್ಟುಕೊಳ್ಳಲು ಪ್ರಯತ್ನಿಸಿ ಸುಮ್ಮನಾದಳು.

ಅಮರನಾಥ ಮೆಟ್ಟಲಮೇಲೆ ನಿಂತು ನೇರದೃಷ್ಟಿಯನ್ನು ಅವಳೆಡೆಗೆ ಹರಿಸಿದ ; ಅವಳ ಮುಂಗುರುಳು ತಂಗಾಳಿಯೊಡನೆ ಸ್ವತಂತ್ರವಾಗಿ ಹರಿದಾಡುತಿತ್ತು. ಕೆನ್ನೆಗಳಲ್ಲಿ ಕೆಂಪು ಗುಲಾಬಿಯರಳಿದ್ದುವು. ಆ ಮಾಧುರ್ಯವಿಹ್ವಲತೆಯಿಂದ ಮನಃಪ್ರಾಣಗಳು ಪುಳಕಿತವಾದುವು. ಒಂದೆರಡು ಘಳಿಗೆಯೊಳಗಾಗಿ ಎಚ್ಚೆತ್ತುಕೊಂಡು ತನ್ನನ್ನು ತಾನು ನಿಗ್ರಹಿಸಿಕೊಳ್ಳುತ್ತ ಅಭಿಮಾನ ಪೂರ್ವಕವಾಗಿ; ಅತ್ಯಂತ ಮಾರ್ಮಿಕವಾಗಿ ನುಡಿದ,

"ಏನು ಬಹಳ ಗಂಭೀರವಾಗಿದ್ದೀರಿ ? ತುಂಬ ಕೆಲಸವೇ ಅಥವಾ—?"

"ಇಲ್ಲವಲ್ಲಾ...." ಮುಗುಳು ನಕ್ಕಳು ನಿರ್ಮಲ "ಎಲ್ಲೋ ಗಮನ ಹರಿದಿತ್ತು ಅಷ್ಟೆ."

"ಅಷ್ಟೊಂದು ಚಿಂತಾಭಾರವಿರುವುದೂ ಸಹ ಒಳ್ಳೆಯದೆ. ನಾವು ಮೋಹಮುದ್ರೆಯಿಂದ ಎಚ್ಚತ್ತುಕೊಳ್ಳಬೇಕಾದರೆ ಕಷ್ಟನಷ್ಟಗಳ ಪಾಲಾಗಲೇ ಬೇಕು."

ನಿರ್ಮಲ ಮಾತಾಡಲಿಲ್ಲ. ಮುಖಭಾವ 'ಹೌದು' ಎಂದು ಕೂಗಿ ಹೇಳಿತು.

"ನಾನು ಎಲ್ಲಾ ಕಷ್ಟನಷ್ಟಗಳನ್ನೂ ಅತ್ಯಂತ ಆತ್ಮೀಯತೆಯಿಂದ ಸ್ವಾಗತಿಸುವೆ."

"ನನಗೆ ಆ ಎದೆಗಾರಿಕೆ ಇಲ್ಲ. ಅಂತಲೇ ತುಂಬ ಎಚ್ಚರ ವಹಿಸುವೆ."

"ವ್ಯರ್ಥ!" ಅಮರನಾಥ ನಕ್ಕುಬಿಟ್ಟ.

ನಿರ್ಮಲೆಯ ತುಟಿಗಳಲ್ಲೂ ಮೃದು ಮಂದ ನಗು ಮೂಡಿ ಮಾಯ ವಾಯಿತು.

"ನಾನು ನಿನ್ನೆ ಫೀಜು ಕಟ್ಟಿದೆ."

"ಹಣ ಹೇಗೆ ಒದಗಿತು?"

"ಊಹಿಸಿರಿ; ನೋಡೋಣ."

"ತಿಳಿಯಲಿಲ್ಲ."

"ನೀವು ಎಷ್ಟಾದರೂ ಸಮಯ ತೆಗೆದುಕೊಳ್ಳಿ!"

"ನಿಮ್ಮ 'ಉಳಿತಾಯ' ಸಹಾಯ ಮಾಡಿರಬಹುದು."

"ಇದುವರೆಗೆ ನೀವು ನನ್ನ ವಿಚಾರ ಅಷ್ಟೇ ತಾನೆ ತಿಳಿದುಕೊಂಡಿರು ವುದು?"

"ಈಗಾಗಲೇ ಇನ್ನೆಷ್ಟು ತಿಳಿಯಲಾಗುತ್ತೆ....?"

"ಬಹುಶಃ ಉದಾಸೀನ....?"

"ಇಲ್ಲಪ್ಪಾ."

"ರಕ್ತದ ಬ್ಯಾಂಕಿಗೆ ನನ್ನ ರಕ್ತ ಕೊಟ್ಟೆ! ಒಂದೇ ಏಟಿಗೆ ಎರಡು ಹಕ್ಕಿ! ಯೋಧರಿಗೆ ರಕ್ತ ಕೊಟ್ಟಂತೆಯೂ ಆಯಿತು. ಫೀಜಿಗೆ ಹಣ ಪಡೆದುಕೊಂಡಂತೆಯೂ ಆಯಿತು!"

ವಿಷಯ ಗಂಭೀರವಾಗಿ ಹೊರಬಿತ್ತು. ಅಂತಃಪಟಲದ ಮೇಲೆ ಗುಂಡಿ ನಂತೆ ತಾಗಿ ನರನರಗಳಲ್ಲೂ ಮರುಪ್ರಸಾರ ಹೊಂದಿತು. ಕರಳು ಕೊರೈಸು

ವಂತೆ ಹರಿದಾಡಿದ ಆ ಸ್ವರ ಸಂಯೋಜನೆ ಆಕೆಯ ಅಸ್ತಿತ್ವವನ್ನೇ ಸಮೂಲ ವಾಗಿ ಅಲ್ಲಾಡಿಸತೊಡಗಿತು. ಯಾವ ರೀತಿ ತನ್ನನ್ನು ತಾನು ಹತೋಟಿ ಯಲ್ಲಿಟ್ಟುಕೊಳ್ಳಬೇಕೋ ತಿಳಿಯಲಿಲ್ಲ. ದೇಹದಾದ್ಯಂತ ಊಹಿಸಲೂ ಆಗ ದಂತಹ ನಸು ಕಂಪನದ ಅಲೆ ಹರಿದಾಡಿ ಹೋಯಿತು. ಮರುಮಾತಾಡದೆ ನೇರ ದೃಷ್ಟಿಯನ್ನು ಅತ್ತ ಹರಿಸಿದಳು. ಆತನ ರೂಕ್ಷ ತುಟಿಗಳಲ್ಲಿ ಎಳೆನಗು ಸಲಿಯುತಿತ್ತು. ಭಾವಪೂರ್ಣ ಲೋಚನಗಳಲ್ಲಿ ಎಂಥ ಘೋರ ಪರಿಸ್ಥಿತಿ ಯನ್ನೂ ಸುಲಭದರಲ್ಲಿ ಎದುರಿಸುವ ಸಾಹಸ ದ್ಯುತಿ ಥಳಥಳಿಸುತಿತ್ತು. ದಪ್ಪ ದಪ್ಪ ಹುಬ್ಬುಗಳ ರೋಮರಾಜಿ, ಕರ್‍ರಗೆ ಸಾಲುಸಾಲಾಗಿ ಹಣೆಯ ಮೇಲೆ ಹರಿದ ಮುಂಗುರುಳು, ಧ್ಯೇಯೋದಾತ್ತ ಮುಖಭಾವ ಒಂದೊಂದೂ ಆಕರ್ಷ ಣೀಯವಾಗಿ ತೋರಿದುವು. ವಿನೂತನ ಅನುಭಾವ ತರಂಗಗಳು ತಲೆಯ ಸುತ್ತ ಮುತ್ತ ಪ್ರಭಾಳೆಯಂತೆ ಬೆಳಗುತಿದ್ದುದು ಅನುಭವಕ್ಕೆ ಬಂದಿತು. ನಿರ್ಮಲ ಒಂದೆರಡು ಕ್ಷಣ ವಿಚಿತ್ರ ಅನುಭಾವದ ಅದ್ಭುತ ಯಂತ್ರಸಾಧನೆಗೆ ಸಿಕ್ಕಿ ತತ್ತರಿಸಿ ಹೋದಳು. ಹೃದಯ ಮೃದಂಗ ವ್ಯಾಪ್ತಿಗೆ ಮೀರಿ ಮಿಡಿಯ ಹತ್ತಿತು, ಪ್ರೇಮಪೂರ್ವಕವಾಗಿ ಶಲ್ಯವನ್ನು ಹೃದಯಕ್ಕೆ ನೆಟ್ಟಂತೆ. ಆದರೂ ಯಾವ ಪ್ರತಿಕ್ರಿಯೆಯನ್ನೂ ಹೊರಪಡಿಸಲು ಮನಸ್ಸು ಉತ್ಸುಕವಾಗಲಿಲ್ಲ. ಸಂತಾಪದಿಂದ ಹೃದಯಕುಂಡಲಿನಿ ಆಲೋಡಿತವಾದರೂ ಒಂದು ದೃಷ್ಟಿ ಯಿಂದ ಅದು ಒಳ್ಳೆಯದೇ ಎಂಬ ಯೋಚನೆಯ ಆವಿರ್ಭಾವದಲ್ಲಿ ಮುಖ ಭಾವ ಗಂಭೀರವಾಯಿತು..

ಶಾಲೆಯ ಗಂಟೆ ನಿಯಮಾನುಸಾರ ಬಾರಿಸಿತು.

ಠಣ್, ಠಣ್, ಠಣ್, ಠಣ್, ಠಣ್, ಠಣ್.

ಸಮವಸ್ತ್ರ ಧರಿಸಿದ ಮಕ್ಕಳು ಶಾಲೆಯ ಆವರಣದಿಂದ ತಮ್ಮ ತರಗತಿ ಗಳಿಗೆ ಧಾವಿಸತೊಡಗಿದರು. ಚಕ ಚಕ ನಡೆದುಬರುವ ಮನಮೋಹಕ ಯ ದೃಶ್ಯ ಹೊಸದಲ್ಲವಾದರೂ ಮನವನ್ನು ಸೆಳೆಯಿತು. ತಲೆಯನ್ನು ಆಕ್ರಮಿಸಿದ್ದ ಕ್ರಮವಿಹೀನವಾದ ಆಲೋಚನೆಗಳು ಅಲ್ಲಿಂದಲ್ಲೆ ಸ್ತಬ್ಧವಾದುವು. ಒಂದು ಘಳಿಗೆ ವೈಮರೆತ ನಿರ್ಮಲ ಭಾವನಾಲೋಕದಲ್ಲಿ ಸಂಪೂರ್ಣ ಮುಳುಗಿ ಹೋದಳು.

ಅಮರನಾಥ ಆಗಲೇ ತನ್ನ ತರಗತಿಗೆ ನಿರ್ಗಮಿಸಿದ್ದ.

೬

ಪ್ರಸನ್ನ ಕಾಲೇಜಿನ ಹಂತವನ್ನು ಮುಗಿಸಿ ಸಮಯಕ್ಕೊದಗಿದ ಗುಮಾಸ್ತಿಕೆಯೊಂದನ್ನು ಕೈಕೊಂಡ. ಅವನು ದುಡಿದರೂ ಸಂಸಾರಕ್ಕೆ ನೀಡುತ್ತಿದ್ದ ಹಣ ಅತ್ಯಲ್ಪ. ಒಮ್ಮೆ ಸ್ವಾಮಿನಿ ಮನಃಕ್ಷೋಭೆಯಿಂದ ನುಡಿದಳು "ನೀನಿಷ್ಟು ಕೊಟ್ಟರೆ ಯಾವ ಮೂಲೆಗಪ್ಪಾ? ಕೈಲಿಲ್ಲದಿದ್ದಲ್ಲಿ ಏನೋ ಒಂದು ರೀತಿ. ಇದ್ದೂ ಏಕೆ ಇಷ್ಟು ಸಂಕೋಚ?"

"ಬಂದದ್ದೆಲ್ಲಾ ಉಂಡೇಬಿಟ್ಟರೆ ಹೇಗೆ? ಮುಂದೆ ಮನೆಮಾರು ಮಾಡಿ ಕೊಳ್ಳಬೇಕಲ್ಲ? ಈ ನರಕದಲ್ಲಿ ಇನ್ನೂ ಎಷ್ಟು ದಿನ?"

"ಆದರೂ, ನಾಲ್ಕರ ತುತ್ತಿಗಾದರೂ ಬೇಕಲ್ಲಪ್ಪಾ! ಹೆಣ್ಣುಮಗಳೇ ಎಲ್ಲಾ ಖರ್ಚೂ ನಿಭಾಯಿಸುತ್ತಿದ್ದಾಳೆ...." ಧ್ವನಿ ಅತಂಕಪೂರ್ಣವಾಗಿ ಎದೆಯಾಳದಿಂದ ಹರಿದುಬಂತು,

ಪ್ರಸನ್ನ ಮಾತಾಡದೆ ಗಂಭೀರ ಗತಿಯಲ್ಲಿ ಹೊರಬಿದ್ದ.

ಜಾನಕಿಯ ಚಿತ್ತ ಚಿಂತಾಲೋಕದಲ್ಲಿ ಮುಳುಗಿ ಪ್ರಕ್ಷುಬ್ಧವಾಯಿತು.

ಆ ವ್ಯವಹಾರ ಅಷ್ಟಕ್ಕೇ ಮುಗಿಯಲಿಲ್ಲ. ದಿನವೂ ಮನೆಯಲ್ಲಿ ನಾಲ್ಕರು ಕೂಡಿದಾಗಲೆಲ್ಲ ಏನೋ ಒಂದು ಬಗೆಯ ಕಿರಿಕಿರಿ–ಅಸಮಾಧಾನ ಎಲ್ಲ ರೊಂದಿಗೆ ಘನವಾಗಿ ಒಕ್ಕಲಾಗುತಿತ್ತು. ಕಾರಣವಿಲ್ಲದೆ ಮೂಡಿಬರುವ ಕಿರಿಕಿರಿ ನೋಡಿದರೆ ನಿರ್ಮಲೆಗೂ ಅಸಮಾಧಾನ....ಯಾವರೀತಿ ಸಮಸ್ಯೆ ಯನ್ನು ಬಗೆಹರಿಸಿಕೊಳ್ಳಬೇಕೋ ಅರ್ಥವಾಗದೆ ಸುಮ್ಮನಿದ್ದುಬಿಡುತ್ತಿದ್ದಳು. ಆದರೂ, ನಾನಾ ಸಮಸ್ಯೆಗಳು ಸುತ್ತಮುತ್ತ ಬಲೆಯನ್ನು ಹೆಣೆದು ಜಟಿಲತೆ ಯನ್ನು ಬೆಳೆಸುತಿದ್ದುವು.

ಪ್ರಸನ್ನ ವಾಯುಸೇವನೆ ಮುಗಿಸಿ ಮನೆಗೆ ಬಂದಾಗ ಹೊತ್ತು ಮೀರಿತ್ತು. ಆದರೂ, ಎಲ್ಲರೂ ಅವನಿಗಾಗಿ ಕಾದಿದ್ದರು. ನಿರ್ಮಲ ಮರುದಿನದ ಪಾಠಗಳ ತಯಾರಿಯಲ್ಲಿ ಮನಸನ್ನು ಹರಿಸಿದ್ದಳು. ನೆಲಕ್ಕೆ ಹಾಸಿದ್ದ ಚಾಪೆ ಎಲ್ಲರಿಗೂ ಸ್ಥಳಾವಕಾಶ ಕಲ್ಪಿಸಿತ್ತು. ತಾಯಿ ಬದಿಯಲ್ಲಿ ಮೈಮುದುಡಿ ಅಡ್ಡಾಗಿದ್ದಳು. ಪ್ರಸನ್ನ ಒಳ ಹೆಜ್ಜೆ ಇಟ್ಟವನೇ ಅಂದ "ಈ ಮನೆಯಲ್ಲಿ ಉಸಿರಾಡುವುದಕ್ಕೂ ಜಾಗವಿಲ್ಲ. ನಾನು ಒಂದ್ನು "ಹುದುಗಿಟ್ಟ

ಅರಸುತ್ತಿದ್ದೇನೆ. ಸಿಕ್ಕಿದರೆ ಇಲ್ಲಿ ಒಂದು ನಿಮಿಷವೂ ಇರುವುದಿಲ್ಲ!"

ಪ್ರಸ್ರುಲ ಅತ್ಯಂತ ಖೇದದಿಂದ ತಲೆಯೆತ್ತಿ ನೋಡಿ ಅಂದ,

"ಪರವಾಯಿಲ್ಲಪ್ಪ ನೀನು!" ಕಂಠಸ್ವರ ಜಾಗಟೆ ಸ್ವರದಂತೆ ಮೊಳಗಿತು.

"ಈ ನರಕದಲ್ಲಿ ಇನ್ನೂ ಎಷ್ಟು ದಿನ....? ನನಗಂತೂ ಸಾಧ್ಯವಿಲ್ಲ."

"ಸರಿ; ನಿನ್ನ ಇರು ಅಂತ ಯಾರೂ ಅನ್ನುವುದಿಲ್ಲ. ಸ್ವಲ್ಪ ಅಚ್ಚುಕಟ್ಟಿನ ಮನೆ ಮಾಡಿದರೆ ಎಲ್ಲರೂ ಹೋಗಬಹುದು! ನೀನೊಬ್ಬನೇ ಕೊಠಡಿ ಹುಡುಕಿಕೊಂಡರೆ....?"

"ಮನೆ....? ಸರಿ, ಸರಿ; ಎಲ್ಲಿಗೆ ಹೋಗೋಣ ಅಷ್ಟು ಹಣಕ್ಕೆ? ಈ ಕಾಲದಲ್ಲಿ ಬಾಡಿಗೆ ಸಾಮಾನ್ಯವೇ?"

"ನೀನು ಬಹಳ ಸ್ವಾರ್ಥಿ ಕಣಯ್ಯಾ!"

"ನಾನು ಹೊರಹೋಗುವುದರಿಂದ ಇಲ್ಲಿ ಸ್ಥಳ ಉಳಿತಾಯವಾಗುತ್ತದೆ. ನಿಮಗದರಿಂದ ಅನುಕೂಲ ಅಲ್ಲವೆ? ನಿಧಾನವಾಗಿ ಎಲ್ಲರೂ ಅವರವರ ಆರ್ಥಿಕ ಸ್ಥಿತಿಗನುಗುಣವಾಗಿ ಹೊರಹೋದರೆ ಆಯಿತು."

"ಅಂದರೆ ನಾವೆಲ್ಲ ಹೊರಹೋಗಿ ಅಮ್ಮ ಮಾತ್ರ ಇಲ್ಲುಳಿಯಬೇಕು ಅಷ್ಟೆ!" ವಿಮಲ ನಡುವೆ ಬಾಯಿ ಹಾಕಿದಳು. ಕಣ್ಣುಗಳಲ್ಲಿ ಸಖೇದಾಶ್ಚರ್ಯ ತುಂಬಿತ್ತು.

"ಇದೀಗ ಕಲಿಯುಗ!" ಎಂದಳು ಸ್ವಾಮಿನಿ, ಅತ್ಯಾಶ್ಚರ್ಯದ ಅಲೆ ಹಾವಭಾವಗಳಲ್ಲಿ ಹರಿದಾಡಿಹೋಯಿತು. ಎಲ್ಲರ ಮುಖದಲ್ಲೂ ನಗುವಿನ ಲಹರಿ ತುಂಬಿ ಹರಿಯಿತು.

"ಹೌದಮ್ಮಾ, ನಿಮಗೆ ವಯಸ್ಸಾಯಿತು. ಇಡೀ ಜೀವಮಾನವನ್ನೇ ಇಲ್ಲಿ ಕಳೆದಾಗಿದೆ. ಇನ್ಯಾತಕ್ಕೆ ಒಳ್ಳೆಯ ಮನೆ?" ಎಂದ ಪ್ರಸನ್ನ; ತಮಾಷೆಗೆಂಬಂತೆ ನುಡಿದರೂ ದನಿಯಲ್ಲಿ ಸಹಜತೆ ತುಂಬಿತ್ತು.

"ನನಗೆ ಒಳ್ಳೆಯ ಮನೆ ಬೇಕು ಎಂಬುದೇನೂ ಇಲ್ಲ. ಎಲ್ಲರ ಮನಸ್ಸು ಚೆನ್ನಾಗಿದ್ದರೆ ಸಾಕು." ಎಂದಳು ಜಾನಕಿ, ಮಾತೃಸಹಜವಾದ ಪ್ರೇಮ ವಾತ್ಸಲ್ಯದಿಂದ. ಆದರೇನು? ಮನೋಮಂದಿರವನ್ನು ಆಗಲೇ ಸಣ್ಣ

ಕೀಟವೊಂದು ಆಕ್ರಮಿಸಿತ್ತು. ದುಃಖದುಗುಡಗಳ ಮೊಳಕೆ ತನಗರಿವಿಲ್ಲ ದಂತೆಯೇ ಮೂಡಿತು.

ಮುಂದೆರಡು ತಿಂಗಳು ಯಾವ ರೀತಿ ಕಳೆದುವೋ ಹೇಳುವಂತಿಲ್ಲ. ಬಹುಶಃ ನಿತಾಂತ ಉತ್ಸಾಹಹೀನತೆ ಪ್ರಧಾನವಾಗಿತ್ತು ಎನ್ನಿಸುತ್ತದೆ. ಏಕೆಂದರೆ ವಸಂತಋತುವಿನ ಅತೀವ ಸುಡುಬಿಸಿಲು, ಆಯಾಸ, ಉದಾಸೀನತೆ ಗಳು ಅತ್ಯಧಿಕವಾಗಿದ್ದುವು.

ಒಂದು ಭಾನುವಾರ ಪ್ರಸನ್ನ ತನ್ನ ಸಹೋದ್ಯೋಗಿನಿಯನ್ನು ಮನೆಗೆ ಕರೆತಂದು ಎಲ್ಲರಿಗೂ ಪರಿಚಯಿಸುತ್ತ ಯಥೋಚಿತವಾಗಿ ಬಿತ್ತರಿಸಿದ,

"ಮುಂದಿನ ಸೋಮವಾರ ನಾವಿಬ್ಬರೂ ರಿಜಿಸ್ಟರ್ ಪದ್ಧತಿಯ ಮೂಲಕ ಮದುವೆಯಾಗಲು ನಿಶ್ಚಯಿಸಿದ್ದೇವೆ. ದಯವಿಟ್ಟು ನೀವ್ಯಾರೂ ಅಡ್ಡಿ ಮಾಡಬಾರದು."

ಅನಿರೀಕ್ಷಿತ ವಿಚಾರ ಎಲ್ಲರಿಗೂ ದಿಗ್ಭ್ರಮೆ ಹಿಡಿಸಿತು. ಈ ಮೊದಲು ಅವನು ಕಿಂಚಿತ್ತೂ ಅದರ ಸುಳಿವು ಕೊಟ್ಟಿರಲಿಲ್ಲ. ಈಗ ಹುಡುಗಿಯ ಮುಂದೆ ಬೇಕು ಬೇಡಗಳ ಪ್ರಶ್ನೆ ಏಳುವುದು ಕಷ್ಟವೇ. ಯಾರಿಗೂ ಪ್ರತಿವಾದನೆ ಹೂಡಲು ಮನಸ್ಸಾಗಲಿಲ್ಲ. ಅವನು ಆನಂದಪರವಶನಾಗಿ ಮುಂದುವರಿದ,

"ನಾನೂ ಮೋಹಿನಿಯೂ ಎರಡು ವರ್ಷಗಳಿಂದ ಒಂದೇ ಕಡೆ ಕೆಲಸ ಮಾಡಿ ಪರಸ್ಪರ ಚೆನ್ನಾಗಿ ಅರಿತುಕೊಂಡು ಈ ನಿರ್ಧಾರಕ್ಕೆ ಬಂದಿದ್ದೇವೆ. ನೀವೆಲ್ಲರೂ ದಯವಿಟ್ಟು ಸಹಕರಿಸಬೇಕು. ಶಾಸ್ತ್ರೋಕ್ತವಾಗಿ ಮದುವೆ ಯಾಗುವುದೆಂದರೆ ವೃಥಾ ಹಣ ಖರ್ಚು. ಅಷ್ಟು ಹಣ ನಮ್ಮಲ್ಲಿ ಇಲ್ಲವೂ ಇಲ್ಲ. ನಮ್ಮ ಆಫೀಸಿನ ಬಳಿಯಲ್ಲೇ ಒಂದು ಕೊಠಡಿಯನ್ನು ಹಿಡಿದಿರುವೆ ಅದು ಚಿಕ್ಕದಾದರೂ ಚೊಕ್ಕಟವಾಗಿದೆ. ವಿವಾಹಾನಂತರ ನಾವು ಅಲ್ಲಿ ಸಂಸಾರ ಹೂಡುತ್ತೇವೆ!"

ವಿಚಾರ ಸರಣಿ ಸಿದ್ಧವಸ್ತುವಿನ ನಿರೂಪಣೆ ...ಇನ್ನು ವಿರೋಧಿಸುವು ದೆಂದರೆ ವೃಥಾ ಮನಃಕ್ಲೇಶ....ಒಮ್ಮೆಗೇ ಒಪ್ಪಿಕೊಳ್ಳುವುದು ಕಷ್ಟ. ಸಿಡಿಲು ಬಡಿದವಳಂತೆ ಜಡೀಭೂತಳಾಗಿ ನಿಂತಲ್ಲೇ ನಿಂತುಬಿಟ್ಟ ತಾಯಿಯ ಕಡೆ ಸೂಕ್ಷ್ಮವಾಗಿ ಕಣ್ಣುಮಿಸುಕಿ ತನ್ನ ಚಿತ್ತಕ್ಷೋಭೆಯನ್ನು ಹುದುಗಿಟ್ಟ

ಪರಿಸ್ಥಿತಿಗೆ ಹೊಂದಿಕೊಳ್ಳುತ್ತ ಸಮಯೋಚಿತವಾಗಿ ಉತ್ತರಿಸಿದಳು ನಿರ್ಮಲ: ಮುಖಭಾವ ಗಂಭೀರಮುದ್ರೆಯಿಂದ ಅಂಕಿತವಾಗಿತ್ತು,

"ನೀನು ಮೊದಲೇ ಈ ವಿಚಾರವನ್ನು ತಿಳಿಸಿದ್ದಲ್ಲಿ ಬೇಕು–ಬೇಡಗಳ ಪ್ರಶ್ನೆ ಏಳುತಿತ್ತೇನೋ....ಈಗ ನಿಮ್ಮಿಬ್ಬರ ಬಯಕೆಯನ್ನು ಒಡೆಯುವ ಉದ್ದೇಶ ಯಾರಿಗೂ ಇಲ್ಲ. ಮುಂದೆ ನೀವು ಚೆನ್ನಾಗಿದ್ದು ನಮ್ಮ ಕಷ್ಟಸುಖ ಗಳಲ್ಲಿ ಒಂದಾಗಿ ನಿಲ್ಲುವಷ್ಟು ಸಹಕಾರ ನೀಡಿದರೆ ಸಾಕು. ತಾಯಿ, ತಂಗಿ, ತಮ್ಮಂದಿರನ್ನು ಕೈಬಿಡಬಾರದು."

ನಿರ್ಮಲಳ ಕಂಠಸ್ವನ ಸಾವಧಾನದಿಂದ ಹರಿಯಿತು. ಅಕ್ಷಿಪಟಲದ ಮೇಲೆ ಅನೇಕಬಾರಿ ಅಮರನಾಥ ಸುಳಿದಳಿದ. ತನ್ನ ರೀತಿ ನೀತಿಯೂ ಅದೇ ಆದುದರಿಂದ ವಿರೋಧಿಸುವ ಪ್ರಶ್ನೆಯೇ ಏಳಲಿಲ್ಲ. ಮೋಹಿನಿ ಯಾರೊ ಡನೆಯೂ ಬೆರೆಯುವ ಉತ್ಸುಕತೆಯನ್ನು ತೋರದೆ ಸ್ತಂಭೀಭೂತಳಾಗಿ ನಿಂತಿದ್ದುದನ್ನು ನೋಡಿ ನಿರ್ಮಲೆಯೇ ಸಂಯತ ಸ್ವರದಲ್ಲಿ ಕೇಳಿದಳು,

"ನೀನು ಮದುವೆಗೆ ಒಪ್ಪಿ ಮನೆಗೆ ಬರುವಷ್ಟು ಸಹಕಾರ ತೋರಿದ್ದಿ. ಮುಂದೆಯೂ ಹೊಂದಿಕೊಳ್ಳುವಷ್ಟು ಉದಾರತೆ ತೋರಿದರೆ ಸಾಕು. ಚಿಕ್ಕಂದಿನಲ್ಲೇ ನಾವು ತಂದೆಯನ್ನು ಕಳೆದುಕೊಂಡುದರಿಂದ ಬಹಳ ಕಷ್ಟ ಕಾರ್ಪಣ್ಯಗಳಲ್ಲಿ ಸಿಕ್ಕಿ ಬದುಕಿದ್ದೇವೆ. ಇದನ್ನೆಲ್ಲಾ ಇಷ್ಟರೊಳಗಾಗಿ ನಿನಗೆ ಪ್ರಸನ್ನ ಹೇಳಿರಬಹುದು. ನೀನು ಅರಿತು ನುರಿತವಳಾದುದರಿಂದ ನಿನಗೆ ನಾನು ಹೆಚ್ಚಿನದೇನನ್ನೂ ಹೇಳಲಾರೆ."

ಪ್ರಫುಲ್ಲ ಸುಮ್ಮನೆ ಹೊರಹೋಗಿ ಬಾಗಿಲಲ್ಲಿ ನಿಂತುಕೊಂಡ.

ವಿಮಲ ಓದುತಿದ್ದ ಪುಸ್ತಕವನ್ನು ಮುಚ್ಚಿ ಹೊಸ ಅತ್ತಿಗೆಯನ್ನು ಅತ್ಯಂತ ಕುತೂಹಲಭರಿತ ದೃಷ್ಟಿಯಿಂದ ನೋಡುತಿದ್ದಳು. ಮನಸ್ಸು ಸಿಡಿದೆದ್ದಿ ದ್ದರೂ ತುಟಿಗಳು ಬಿರಿಯಲಿಲ್ಲ.

ನಿರ್ಮಲೆ ಅಷ್ಟೆಂದರೂ ಮೋಹಿನಿ ಉತ್ತರಿಸಲಿಲ್ಲ. ನಿರ್ಮಲ ಎದೆಯಾಳ ದಲ್ಲಿ ತುಂಬಿಕೊಂಡಿದ್ದ ಕಳಕಳಿಯನ್ನು ಅದುಮಿಟ್ಟು, ಪುನಃ ಪ್ರಸನ್ನನೆಡೆಗೆ ತಿರುಗಿ ನಗುಮುಖದಿಂದ ನುಡಿದಳು,

"ಹೊಸಸುದ್ದಿ ತಿಳಿದುಬಂದುದಕ್ಕಾಗಿ ಒಂದಿಷ್ಟು ಸಿಹಿ ತಯಾರಿಸುವೆ. ಕುಳಿತುಕೊ ಪ್ರಸನ್ನ."

ಪ್ರಸನ್ನ ಆನಂದ–ಉತ್ಸಾಹಗಳ ವಶೀಭೂತನಾಗಿ ತನ್ನ ಕೈಚೀಲವನ್ನು ತೆರೆದು ಅದರಲ್ಲಿದ್ದ ಹಣ್ಣುಹಂಪಲು, ಹೂವು. ಸಿಹಿ ಖಾರಗಳನ್ನು ತೆಗೆದು ಮೋಹಿನಿಯ ಕೈಗಿಟ್ಟು,

"ಇಗೋ ಎಲ್ಲರಿಗೂ ಕೊಟ್ಟು. ಅಮ್ಮನಿಗೆ ನಮಸ್ಕಾರ ಮಾಡು ಎಂದ."

ಅಷ್ಟು 'ದಯೆ' ಇದ್ದರೆ ಸಾಕು ಎಂದುಕೊಂಡಳು ಜಾನಕಿ ಮನಸ್ಸು ಅತೀವ ನೋವಿನ ಆಗರವಾಗಿತ್ತು.

ಅನಂತರ,

ಅವನು ಅವಳನ್ನು ಬಿಟ್ಟುಬರಲು ಹೊರಬಿದ್ದಮೇಲೆ ಭುಗಿಲೆದ್ದ ವಾದಸರಣಿಗೆ ಉತ್ತರವಾಗಿ ಹೊರಬಿದ್ದ ಆತ್ಮಚಿಂತನ:

"ಈಗ ಕಾಲ ತೀವ್ರಗತಿಯಲ್ಲಿ ಬದಲಾಗುತ್ತಿದೆ ಎನ್ನುವುದಕ್ಕಿಂತ ಜನರು ಮೌಢ್ಯಪಂಜರದಿಂದ ಬಿಡುಗಡೆ ಹೊಂದುತಿದ್ದಾರೆ ಎನ್ನಬಹುದು. ಇನ್ನೂ ಎಷ್ಟು ದಿನ ಹಳೆಯ ಕಂದಾಚಾರಗಳಿಗೆ ಅಟಂಕೊಂಡಿದ್ದಾರು ? ಮನೋವಿಕಾಸ ಹೊಂದಿದಂತೆಲ್ಲಾ ಕಂದಾಚಾರಗಳು ತೊಲಗಲೇಬೇಕು !"

ನಿರ್ಮಲ ಬಹಳ ಹೊತ್ತು ಕೇಳಿದನಂತರ ತನ್ನ ದೃಢವಾದ ಅಭಿಪ್ರಾಯವನ್ನು ಹೊರಹಾಕಿದಳು.

"ನೀನೂ ಸರಿಯಾಗಿದ್ದಿ....ಮುಂದೆ ನೀನೂ ಹೀಗೆಯೇ ಅನಿಸುತ್ತೆ." ಜಾನಕಿ ಸಿಟ್ಟನಿಂದ ಹೇಳಿದಳು. ಅಕ್ಷರ ಅಕ್ಷರವೂ ಅಸಮಾಧಾನದಿಂದ ಹರಿದುಬಂದುವು. ಮುಖದ ಛಾಯೆ ನಸುಗಪ್ಪು ತಳೆದಿತ್ತು. ದುಃಖಿತ ಹೃದಯ ವ್ಯಾಪ್ತಿಗೆ ಮೀರಿ ಮಿಡಿಯುತಿದ್ದುದನ್ನು ಎದೆಯ ಏರಿಳಿತದಿಂದಲೇ ಗಮನಿಸಬಹುದಾಗಿತ್ತು.

ನಿರ್ಮಲ ಅತ್ಯಂತ ಸಮಾಧಾನದಿಂದ ಉತ್ತರಿಸಿದಳು,

"ಜಾತಿ ನೀತಿ ಕಟ್ಟುನಿಟ್ಟುಗಳಿಗಾಗಿ ಏಕೆ ಮನಸ್ಸು ಕೆಡಿಸಿಕೊಳ್ಳಬೇಕು ಹೇಳಿ ? ಈ ಅಶಾಶ್ವತ ಶರೀರಗಳಿಗೆ ಅಷ್ಟೊಂದು ಪ್ರಾಶಸ್ತ್ಯ ಕೊಟ್ಟು ನರಳುವುದೇಕೆ? ಯಃಕಶ್ಚಿತ ವಸ್ತುಗಳ ಚಿಂತನೆಯಿಂದ ನಾವು ತಲೆಕೆಡಿಸಿಕೊಳ್ಳುವಷ್ಟು, ನಿಜವಾಗಿಯೂ ಶ್ರಮಿಸಬೇಕಾದಂತಹ ವಿಚಾರಗಳಿಗೆ ತಲೆ ಕೆಡಿಸಿಕೊಳ್ಳುವುದೇ ಇಲ್ಲ. ಅದೇ ವಿಷಾದಕರ" ಅತ್ಯಂತ ಕ್ಲೇಶಪೂರ್ವಕವಾಗಿ ನುಡಿದಳು ನಿರ್ಮಲ. ಮುಖಮಂಡಲ ಮ್ಲಾನವಾಗಿತ್ತು.

"ಆನಂದಪುರದಲ್ಲಿ ಆನಂದವೇ ಇಲ್ಲದಿರುವಂತೆ ಓದಿದವರಲ್ಲಿ ವಿದ್ಯೆಯೇ ಇರುವುದಿಲ್ಲವೋ ಏನೋ." ಜಾನಕಿ ಬಿಸಿಯುಸಿರು ಬಿಡುತ್ತಾ ಹೇಳಿದಳು. ಸಂತಾಪದಿಂದ ಮನಸ್ಸು ನೊಂದು ಬೆಂಡಾಗಿತ್ತು.

ಅದೇ ವೇಳೆಗೆ ಪ್ರಫುಲ್ಲ ಅಲ್ಲಿ ಪ್ರತ್ಯಕ್ಷನಾದ. ಅವನಿಗೆ ತನ್ನ ಡಿಪ್ಲೋಮ ಮುಗಿಸಿಕೊಂಡ ಸಂತಸದಿಂದ ಮೈ ಹಗುರವಾಗಿತ್ತು. ಮನಃಪ್ರಾಣಗಳು ಪುಟಿಪುಟಿಯುವ ಚೆಂಡಿನಂತಾಗಿದ್ದುವು. ಒಳ ಬಂದವನೇ ಇಬ್ಬರ ಮುಖ ವನ್ನೂ ಮಿಕಿಮಿಕಿ ನೋಡಿದ. ಕುತೂಹಲಭರಿತ ದೃಷ್ಟಿಗಳು ಮೌನಭಾಷೆ ಯಲ್ಲಿ ಮಾತಾಡಿಕೊಂಡುವು. ಅವನು ಕಾತರಭಾವದಿಂದ ಒಳಹೆಜ್ಜೆಯಿಟ್ಟ.

ನಿರ್ಮಲ ತನ್ನನ್ನು ತಾನು ಸುಧಾರಿಸಿಕೊಳ್ಳುತ್ತ ನಗುಮುಖದಿಂದ ನುಡಿದಳು,

"ಪ್ರಸಕ್ತ ಜೀವನ-ಪ್ರಸಕ್ತ ವಿಚಾರದೋಹನ ಕುರಿತು ಹೇಳಿದೆ ಅಷ್ಟೆ. ತೀವ್ರ ಹಳೆಯ ಕಂದಾಚಾರದಲ್ಲೇ ಮುಳುಗಿರುವ ಅಮ್ಮನಿಗೆ ಇದೆಲ್ಲ ಅರ್ಥ ವಾಗುವುದಿಲ್ಲ. ಅವರಿಗೆ ಅವರದ್ದೇ ವಾದ."

ಆಶಂಕೆ ವ್ಯಾಕುಲಭಾವಗಳಿಂದ ಜಾನಕಿ ಹೇಳಿದಳು,

"ಈ ಕಾಲದಲ್ಲಿ ಧರ್ಮ-ಕರ್ಮ ಇದ್ದರೆ ತಾನೆ ನಿನ್ನ ವಾದಕ್ಕೆ ಪುಷ್ಟೀ ಕರಣ ಕೊಡುವುದು ? ನಾನು ಇಷ್ಟು ಶ್ರಮವಹಿಸಿದ್ದು ಈ ಜೀವನೋ ದ್ಧಾರಕ್ಕಾಗಿ ಎಂಬುದು ನಿಮ್ಮಗಳ ಗಮನದಲ್ಲಿದ್ದರೆ ಸಾಕು."

ನಿರ್ಮಲ ಮುಗುಳು ನಕ್ಕಳು. ಆ ಭಗ್ನಪ್ರಾಯ ಹೃದಯ ಎಷ್ಟು ಕಷ್ಟನಷ್ಟಗಳನ್ನು ಅನುಭವಿಸಿದೆ ಎಂಬುದು ಗೊತ್ತು. ಮತ್ತೇಕೆ ವಿಷಯ ವನ್ನು ಕೆದಕುವುದು ಎಂದುಕೊಂಡು ಸುಮ್ಮನಾದಳು.

ಪ್ರಫುಲ್ಲ ದೈನಿಕವೊಂದನ್ನು ತಿರಿವಿಹಾಕುತ್ತ ಅಂದ "ಸೋಮವಾರ ಎಲ್ಲರೂ ರಿಜಿಸ್ಟ್ರಾರ್‌ರವರ ಆಫೀಸಿಗೆ ಹೋಗಿ ಮದುವೆಗೆ ಹಾಜರಿ ಹಾಕೋಣ. ನಮಗೆ ಇದರಿಂದ ಅಸಮಾಧಾನ ಎಂದು ಯಾರೂ ಭಾವಿಸಬಾರದು."

"ಎಷ್ಟು ದಿನದಿಂದ ಈ ಸ್ನೇಹ ಬೆಳೆಸಿಕೊಂಡಿದ್ದನೋ ಒಂದಿನವೂ ಹೇಳಲಿಲ್ಲ ಕೇಳಲಿಲ್ಲ, ಏಕಾಏಕಿ ಕರೆದುಕೊಂಡು ಬಂದುಬಿಟ್ಟ. ನಾನು ಇಷ್ಟು ದಿನ ಸಾಕಿ ಸಲಹಿದ್ದಕ್ಕೆ ಏನು ಗೌರವ ಕೊಟ್ಟಂತಾಯಿತು ? ಕಲಿತ ಮಕ್ಕಳಿಂದ ಈ ಧೂರ್ತತೆಯನ್ನು ನಾನು ನಿರೀಕ್ಷಿಸಿರಲಿಲ್ಲ."

"ಇದು ಆಗಿಹೋದ ಪ್ರಕರಣ. ಮತ್ತೇಕೆ ಅದರ ಪ್ರಸ್ತಾಪ....? ಮುಂಬರುವ ದಿನಗಳ ಪರಿತಾಪವನ್ನು ಕಳೆದುಕೊಳ್ಳುವಂತಹ ಧೈರ್ಯವನ್ನು ಮೂಡಿಸಿಕೊಳ್ಳಿರಿ" ಅಮರನಾಥನ ಪ್ರತಿರೂಪವನ್ನು ಅಕ್ಷಿಪಟಲದ ಮೇಲೆ ಚಿತ್ರಿಸಿಕೊಳ್ಳುತ್ತ ಲೋಕಾಭಿರಾಮವಾಗಿ ನುಡಿದಳು ನಿರ್ಮಲ. ತಾಯಿಯ ದುಃಖ-ಪರಿತಾಪ ನರತಂತುಗಳನ್ನು ಎಳೆಎಳೆಯಾಗಿ ಸುಡುತ್ತಿರುವಂತೆ ಭಾಸವಾಯಿತು. ಹೃದಯ ಮಸ್ತಿಷ್ಕಗಳೆರಡೂ ನಿಷ್ಕ್ರಿಯವಾದಂತೆ ಮಂಕು ಮಂಕಾದುವು.

ಜಾನಕಿ ಶೋಕವ್ಯಾಕುಲ ದನಿಯಲ್ಲಿ ಮುಂದುವರಿದಳು,

"ಮೊದಲನೆಯ ಮಗ ಮನೆಗೆ ಮಾದರಿಯಾಗಬೇಕಿತ್ತು. ತಂದೆ ಇಲ್ಲದ ಮಕ್ಕಳಿಗೆ ಆದರ್ಶವಾಗಿರಬೇಕಿತ್ತು. ಅರಹೊಟ್ಟೆ ಉಂಡು ಸಾಕಿ, ಕಣ್ಣೀರಿನಲ್ಲಿ ಈಜಿ ನನಗೆ ಬಂದ ಭಾಗ್ಯವೇನು ?"

ನಿರ್ಮಲಳಿಗೆ ಒಮ್ಮಿಂದೊಮ್ಮೆಲೇ ಕಾಲಕೆಳಗಿನ ನೆಲ ಗಿರಗಿರನೆ ಸುತ್ತುತ್ತಿರುವಂತೆ ತೋರಿತು. ಒಂದು ಘಳಿಗೆ ಏನೆನ್ನಬೇಕೋ ಹೊಳೆಯಲಿಲ್ಲ. ಸಂಕೋಚ ಮನವನ್ನು ಆವರಿಸಿತು. ಬಾಳುದ್ದಕ್ಕೂ ಕಷ್ಟ-ಕಾರ್ಪಣ್ಯಗಳಿಂದ ನಲುಗಿದ ಜನನಿಯ ಮನಕ್ಕೆ ಕಹಿಯನ್ನೂಡಿಸಲು ಮನಸ್ಸಾಗಲಿಲ್ಲ. ಅಂತಲೇ ಅತೀತ ಯುಗಧರ್ಮವನ್ನು ಮುಂದಿಟ್ಟು ಸಾಂತ್ವನಗೋಸಲೆಂದು ನುಡಿದಳು,

"ಆಗಿನ ರೀತಿಯೇ ಬೇರೆ; ಈಗಿನರೀತಿಯೇ ಬೇರೆ ಈ ಯುಗಧರ್ಮ ಜಾತಿನೀತಿಗಳ ಪರಿಪಾಡನ್ನು ಕಿತ್ತೊಗೆಯಲು ಬೋಧಿಸುತ್ತದೆ. ಪರಿಸ್ಥಿತಿಗನುಗುಣವಾಗಿ ನಾವು ಹೊಂದಿಕೊಳ್ಳಬೇಕು. ಸುಮ್ಮನೆ ಅದು ಸರಿಯಲ್ಲ, ಇದು ಸರಿಯಲ್ಲ ಎನ್ನುತ್ತ ಹೋದರೆ ಜಿಹಾಸೆ ಬೆಳೆದು ಮನಸ್ಸು ಕೆಡುತ್ತದೆ. ಸಣ್ಣ ಸಣ್ಣ ವಿಚಾರಕ್ಕಾಗಿ ಮನಃಕ್ಲೇಶ ಸರಿಯಲ್ಲ. ಈ ದೇಹ ಶಾಶ್ವತವಲ್ಲ, ಆದ್ದರಿಂದ ಇರುವಷ್ಟು ದಿನ ಎಲ್ಲಾ ವಿಚಾರವನ್ನೂ ಬದಿಗಿಟ್ಟು ಮನಸ್ಸಿಗೆ ನೆಮ್ಮದಿಯನ್ನು ಪಡೆದುಕೊಳ್ಳುವುದು ಲೇಸು."

"ನಿಮ್ಮಂತಹ ಮಕ್ಕಳಿದ್ದರೆ ಧರ್ಮಕರ್ಮ ಮರೆಯಲೇಬೇಕು ತಾನೆ ?"

"ನಮ್ಮಂತಹ ಮಕ್ಕಳೇ ಎಲ್ಲರಿಗೂ ಇರೋದು ಅಮ್ಮಾ!"

ಪ್ರಫುಲ್ಲ ನಡುವೆ ಬಾಯಿ ಹಾಕಿದ–ಎಲ್ಲರ ಮುಖದಲ್ಲೂ ನಗೆಯಲೆ ಚಿಮ್ಮಿ ಹರಿಯಿತು.

"ಅವನ ರೀತಿ ನೀತಿ ಹೇಗಾದರೂ ಇರಲಿ, ನಿಮ್ಮ ಕಣ್ಣುಮುಂದೆ ಅವನು ಸುಖವಾಗಿದ್ದರೆ ಸಾಕಲ್ಲ."

ನಿರ್ಮಲ ಅಷ್ಟೆಂದು ತನ್ನ ದಿನಚರಿಗೆ ಗಮನ ಕೊಟ್ಟಳು.

೭

....ಗಡಿಯಾರ ಹನ್ನೆರಡರ ಅಂಚನ್ನು ಸಾವಧಾನದಿಂದ ಮುಟ್ಟಿದಾಗ ಜ್ವಲಿತ ದೀಪದ ಕುಡಿ ನಂದಿತು.

....ಒಮ್ಮಿಂದೊಮ್ಮೆಲೇ ನಿಶಾಕಾಳಿಮಾ ಕೃಷ್ಣ ಕೌಶೇಯ ಉತ್ತರೀಯವನ್ನು ಹರಡಿದಳು.

ಪರೀಕ್ಷೆ...ಪರೀಕ್ಷೆ ಪರೀಕ್ಷೆ!

ತಲೆಯ ತುಂಬೆಲ್ಲ ಪರೀಕ್ಷೆಯ ವಿಚಾರವೇ ತುಂಬಿಹೋಗಿತ್ತು. ಹಗಲಿರುಳು ಬಿಡುವಿಲ್ಲದೆ ಓದುತಿದ್ದ ವಿಮಲಳಿಗೆ ತನ್ನಿಂದಾದಷ್ಟು ಸಹಾಯ ಮಾಡಿ ನಿರ್ಮಲ ಶಯ್ಯಾಪ್ರಾಂತದಲ್ಲಿ ಮೈ ಚೆಲ್ಲಿದಳು. ಹಾಸಿಗೆಗೆದುರಾಗಿ ಕಿಟಕಿ. ಕೃಷ್ಣಪಕ್ಷದ ಲಕ್ಷ ಲಕ್ಷ ಲಕ್ಷ ಲಕ್ಷ ನಕ್ಷತ್ರೇಕ್ಷು! ಮೋಡರಹಿತ ಸ್ವಚ್ಛ ನೀಲಿಮಾರಂಗ. ಬೇಡಬೇಡವೆಂದರೂ ನೋಟ ಅತ್ತಲೇ ಹರಿದು ಅಭೂತಪೂರ್ವ ಶ್ರದ್ಧೆ ಉದ್ಭೂತವಾಯಿತು. ಆಗಲೇ ಹೊತ್ತು ಮೀರಿತ್ತು. ಬೆಳಗ್ಗೆ ಮುಂಚಿತವಾಗಿ ಏಳಬೇಕು. ಆದರೆ, ನೆಟ್ಟನೋಟ ಹಿಮ್ಮರಳದು. ನಿರ್ಮಲ ನೀಲಾಕಾಶವನ್ನು ಸಂತೃಪ್ತ ನಯನಗಳಿಂದ ನೋಡತೊಡಗಿದಳು. ಸ್ತಬ್ಧಚಿತ್ತ ಹಲವಾರು ಚಿಂತನೆಗಳಿಗೆ ಎಡೆಕೊಟ್ಟಿತು. ಬಾಗಿಲ ಬಳಿ ಮಲಗಿದ್ದ ಪ್ರಫುಲ್ಲ ಸಣ್ಣಗೆ ಗೊರಕೆ ಹೊಡೆಯುತಿದ್ದ. ಕಿಟಕಿಯ ಬಳಿ ಸಾಲಾಗಿ ಹಾಸಿದ್ದ ಹಾಸಿಗೆಗಳಲ್ಲಿ ನಿರ್ಮಲೆಯೇ ಕೊನೆಯವಳು. ಮನೆಗೆ ಅದೊಂದೇ ಕೋಣೆ. ಅದಕ್ಕೆ ಹೊಂದಿಕೊಂಡಂತೆ ಒಂದು ಚಿಕ್ಕ ಅಡಿಗೆಮನೆ; ಅಷ್ಟರಲ್ಲೇ ಅವರ ಸಂಸಾರ ಅಡಕವಾಗಿತ್ತು. ಆ ಕಿಟಕಿಯೇ ಎಲ್ಲರ ಜೀವ

ಸಕ್ಕೊ ಆಧಾರ. ಅದೊಂದಿಲ್ಲವಾಗಿದ್ದಿದ್ದರೆ ಆ ಜೀವಜಂತುಗಳು ಉಸಿರಾಡು ತ್ತಿದ್ದುವೋ ಇಲ್ಲವೋ....

ಕೆಲವೇ ಕೆಲವು ನಿಮಿಷಗಳೊಳಗಾಗಿ ವಿಮಲೆಯೂ ಸಹ ನಿದ್ದೆಯ ಮಡಿಲಲ್ಲಿ ಸುಖವಾಗಿ ಮೈಮರೆತಳು. ನಿರ್ಮಲ ತನ್ನ ಗಮನವನ್ನು ಕೊಠಡಿಯ ಸುತ್ತ ಒಮ್ಮೆ ಹರಿಸಿ, ಎಲ್ಲರೂ ಸುಖನಿದ್ದೆಯಲ್ಲಿದ್ದುದನ್ನು ಗಮನಿಸಿದ ನಂತರ ನೋಟವನ್ನು ಪುನಃ ಕಿಟಕಿಯಲ್ಲಿ ಹರಿಯಬಿಟ್ಟಳು. ಚಿತ್ತ ಗತಕಾಲದಲ್ಲಿ ಸಂಚರಿಸಹತ್ತಿತು.

ಅಂದು,

ಅಮರನಾಥ ಬಿಡುವಿನ ವೇಳೆಯಲ್ಲಿ ಹೊರಬಂದು ಅತ್ಯಂತ ನಮ್ರತೆಯಿಂದ ಅಂದಿದ್ದ,

ಇಂದು ಸಾಯಂಕಾಲ ಎಲ್ಲಾದರೂ ಸ್ವಲ್ಪ ಹೊತ್ತು ಕೂಡೋಣ. ನಿಮ್ಮ ಹತ್ತಿರ ಚರ್ಚಿಸಬೇಕಾದ ವಿಷಯವಿದೆ. ಏನು ಹೇಳುವಿರಿ ? ದಯವಿಟ್ಟು ಅಷ್ಟಕ್ಕೆ ಅವಕಾಶ ಕೊಡಬಲ್ಲಿರಾ ?"

"ಸದ್ಯಕ್ಕೆ ಏನೂ ಬೇಡ ಅನಿಸುತ್ತೆ."

"ನಿಮ್ಮ ಬಳಿ ಬಲಾತ್ಕಾರವಿಲ್ಲ. ಕೋರಿಕೆ ಅಷ್ಟೆ."

"ಅದು... ಗೊತ್ತು."

"ಸರಿ ಮತ್ತೆ....?"

"ಏನು ಹೇಳಬೇಕೋ ಅದೇ ಹೊಳೆಯುತ್ತಿಲ್ಲ."

"ವಿಷಯವನ್ನು ಚರ್ಚಿಸುವುದರಲ್ಲಿ ಅನರ್ಥವೇನೂ ಇಲ್ಲವಷ್ಟೆ ?"

"ಅಂತಾದ್ದೇನಿಲ್ಲ,"

"ಅಂದಮೇಲೆ ದಯವಿಟ್ಟು ಮನಸ್ಸು ಮಾಡಿರಿ."

'ಕೋರಿಕೆ' ಎದೆಯಾಳಕ್ಕೆ ಮಂತ್ರಿತ ಬೀಜಾಕ್ಷರಗಳಂತೆ ಇಳಿಯಿತು. ಮರುಮಾತಾಡದೆ ಒಪ್ಪಿಗೆ ಕೊಟ್ಟಳು ನಿರ್ಮಲ. ಅದರ ಪ್ರಕಾರ ನೆಹರೂ ಪಾರ್ಕಿನ ಪುಷ್ಪೋದ್ಯಾನಕ್ಕೆ ಇಬ್ಬರೂ ಪದಾರ್ಪಣೆ ಮಾಡಿದರು. ಆಗ ಸಂಧ್ಯಾಸೂರ್ಯ ಅರುಣಕಿರಣಗಳನ್ನು ರಾಗಮಹಿಮೆಯಿಂದ ಜಗತ್ತಿನ ಮೇಲೆ ಎಣೆ ಇಲ್ಲದಂತೆ ಹರಿಯಬಿಟ್ಟಿದ್ದ. ಹೊಂಗಿರಣಗಳ ಜಾಲ ಮೈಮನಗಳಿಗೆ ಶಾಂತಿಪ್ರದ ಕಾಂತಿಯನ್ನು ನಲ್ಮೆಯಿಂದ ಪೂಸುತಿತ್ತು. ಲತಾಮಂಟಪದ

ಬೆಂಚೊಂದರ ಮೇಲೆ ಇಬ್ಬರೂ ಮಂಡಿಸಿದರು. ಅಮರನಾಥ ವಿಚಲಿತನಾದರೂ ಸಭ್ಯತೆಯನ್ನು ಕಾಪಾಡಿಕೊಂಡು ಮಾತು ಆರಂಭಿಸಿದ,

"ನಾನು ಕೆಲವು ಕಾಲದ ಹಿಂದೆ ನನ್ನ ಜೀವನವನ್ನೆಲ್ಲಾ ಮಾನವ ಸೇವೆಗೆ ಮೀಸಲಿಡಬೇಕೆಂದು ಭಾವಿಸಿದ್ದೆ. ಆ ಉದ್ದೇಶದಿಂದಲೇ ಉಪಾಧ್ಯಾಯ ವೃತ್ತಿಯನ್ನು ಕೈಕೊಂಡೆ. ಇದುವರೆವಿಗೂ ನಾನು ನನ್ನ ಕುಟುಂಬ ನಿರ್ವಹಣೆ ('ನಿರ್ವಹಣೆ' ಎನ್ನುವುದಕ್ಕಿಂತ 'ಉದ್ಧಾರ' ಎನ್ನುವುದು ಸೂಕ್ತ) ಗೆ ದುಡಿದ ಚಿಕ್ಕಾಸನ್ನೂ ಬಿಡದೆ ಖರ್ಚು ಮಾಡಿರುವೆ. ಈಗ ಎಲ್ಲರೂ ಅವರವರ ಕಾಲಿನ ಮೇಲೆ ನಿಂತಿರುವುದರಿಂದ ನನಗೆ ಯಾವ ಭಾರವೂ ಇಲ್ಲ. ಇನ್ನು ನಿಶ್ಚಿಂತೆಯಿಂದ ಜನಸೇವೆ ಮಾಡಬಹುದು. ಆದ್ದರಿಂದ ನಿಮ್ಮ .. ಪೂರ್ಣ ಸಹಕಾರವನ್ನು ಪಡೆದುಕೊಳ್ಳಬೇಕೆಂದು ಅಭಿಲಾಷೆ ಇದೆ.... ದಯವಿಟ್ಟು ನೀವು ನನ್ನೊಂದಿಗೆ ಸಹಕರಿಸಿದರೆ ತುಂಬ ಉಪಕಾರ ಮಾಡಿದಂತಾಗುತ್ತದೆ."

ನಿರ್ಮಲ ಬಾಗಿದ ತಲೆಯೆತ್ತದೆ ಗಂಭೀರವಾಗಿ ಯೋಚಿಸಿದಳು, ಹೃದಯಾರವಿಂದ ದಲದಲ ಅರಳಿತು. ಒಂದೇ ಬಾರಿಗೆ ಒಪ್ಪಿಕೊಳ್ಳುವುದು ಅಸಮಂಜಸವೆಂದು ಅನಿಸಿದರೂ ಹಿಂದೆಗೆಯಲು ಮನಸ್ಸು ಒಪ್ಪುತ್ತಿಲ್ಲ. ಮೈಯಲ್ಲಿ ತುಂತುರು ತುಂತುರಾಗಿ ಶ್ರಮಬಿಂದುಗಳು ಮೂಡಿದುವು. ಸಿದ್ಧ ಉತ್ತರವಿಲ್ಲವಾದುದರಿಂದ ಚಿತ್ತಾಲೋಕ ತಳಮಳಿಸಿತು. ಒಂದೆರಡು ಘಳಿಗೆ ಮರವಟ್ಟಂತೆ ಸುಮ್ಮನೆ ಕುಳಿತುಕೊಂಡಳು.

ಅವಳ ಮುಖದ ಮೇಲೆ ಹರಿದಾಡುತಿದ್ದ ಭಾವಧಾರೆಯನ್ನು ಸ್ವಲ್ಪ ಹೊತ್ತು ಅವಲೋಕಿಸಿದನಂತರ ಅಜ್ಞಾತ ಆಶಾಭಾವನೆಯಿಂದ ಅಮರನಾಥ ಮೌನ ಮುರಿದ,

"ನೀವು ಬಹಳ ಸಂಕೋಚ ಪ್ರಕೃತಿಯುಳ್ಳವರು. ಇಷ್ಟು ಓದಿ, ಆಧುನಿಕ ವ್ಯವಹಾರದಲ್ಲಿ ತೊಡಗಿಯೂ ಸಹ ಹೀಗಿರುವುದು ವಿರಳ. ನಿಮ್ಮ ಭವಿಷ್ಯವನ್ನು-ನಿಮ್ಮ ಬಾಳನ್ನು ನೀವು ಈಗಿನಿಂದಲೇ ನಿರ್ಧರಿಸಬೇಕು.... ಇನ್ನೂ ಎಷ್ಟು ಕಾಲ ಹೀಗೆ?"

"ಬಾಳನ್ನು ರೂಪಿಸಿಕೊಳ್ಳುವುದು ಹೆಚ್ಚಿನದಲ್ಲ. ನನಗಿನ್ನೂ ಹೊಣೆಗಾರಿಕೆ ಇದೆ."

"ಓ, ಅದೇನು ಹೆಚ್ಚಿನದಲ್ಲ. ಪ್ರಫುಲ್ಲ ಹೇಗೂ ಹುಡುಗ. ತಾಯಿ, ತಂಗಿ ಮಾತ್ರ ತಾನೇ ?"

"ಯಾವುದನ್ನೂ ಅಷ್ಟು ಲಘುವಾಗಿ ತೆಗೆದುಕೊಂಡರೆ ತಪ್ಪಾಗುತ್ತದೆ."

"ಆಗಲಿ, ನಿಮ್ಮ ಹೊಣೆಗಾರಿಕೆಯನ್ನು ಬಿಟ್ಟುಕೊಡಿ ಎಂದು ನಾನೇನು ಕೇಳುತ್ತಿಲ್ಲ. ನೀವು ನಿಮ್ಮ ಪ್ರಜ್ಞೆ ಮತ್ತು ನಿಮ್ಮ ಉದ್ಯೋಗ ಇವುಗಳಲ್ಲಿ ಪೂರ್ಣ ಸ್ವತಂತ್ರರು. ಅದರಲ್ಲಿ ಯಾವ ಅಭ್ಯಂತರವೂ ಇರುವುದಿಲ್ಲ."

ಆ ವಾಕ್ಯಸರಣಿ ಎದೆಯಾಳಕ್ಕಿಳಿದಾಗ ಮನಃಪ್ರಾಣಗಳು ಆನಂದ ಪುಳಕಿತವಾದುವು. ಇನ್ನು ಮೇಲೆ ಮನಸ್ಸಿನ ಮೇಲಿನ ಹತೋಟಿಗಾಗಿ ವೃಥಾ ಶ್ರಮಿಸುವುದು ಪ್ರಯೋಜನವಿಲ್ಲ ಎನಿಸಿದುದಲ್ಲದೆ ಅವನನ್ನು ಇದು ವರೆಗೂ ಕಾಯಿಸಿದುದೂ ಸಹ ತಪ್ಪಾಯಿತು, ಎಂದುಕೊಂಡಳು. ಆದರೆ ಹೇಗೆ ಮಾತು ಆರಂಭಿಸಬೇಕೋ....ಯಾವರೀತಿ ಒಪ್ಪಿಗೆಯನ್ನು ಸೂಚಿಸ ಬೇಕೋ ಹೊಳೆಯುತ್ತಿಲ್ಲ. ಮುಖಮಂಡಲ ಚಂದನವೂರೆದಂತೆ ರಂಗು ತಳೆಯಿತು. ಹವಳದ ಕುಡಿಯಂತಹ ತುಟಿಗಳಲ್ಲಿ ಎಳೆನಗು ಮೂಡಿತು. ನಸುಬಾಗಿದ ತಲೆ ಎತ್ತಲಿಲ್ಲ.

ಅಮರನಾಥ ಎರಡೂ ಮೃದು ಹಸ್ತಗಳನ್ನು ಅದುಮಿ ಹಿಡಿದುಕೊಂಡು ನಿತಾಂತ ಪ್ರೇಮಭಾವದಿಂದ ಕೇಳಿದ,

"ಏನು ಹೇಳುತ್ತೀರಿ ? ನಿಮಗೆ ಈಗ ಸಮಾಧಾನವಾಗಿದೆಯಷ್ಟೆ ?"

ನಿರ್ಮಲ ತನ್ನನ್ನು ತಾನು ಸಾವರಿಸಿಕೊಳ್ಳುತ್ತ ನುಡಿದಳು,

"ನಿಮ್ಮ ಸ್ನೇಹ-ಸಹನೆ-ಸೌಜನ್ಯಗಳಿಗೆ ಧನ್ಯವಾದಗಳು. ಮುಂದೆಯೂ ನೀವು ಇದೇ ರೀತಿ ಸಹಕರಿಸುವಿರಾದರೆ ನಾನು ಧನ್ಯೆ!"

ಆ ರಸನಿಮಿಷದಲ್ಲಿ ಮೂಡಿ ಬಂದ ಆನಂದಕ್ಕೆ ಎಣೆಯೇ ಇರಲಿಲ್ಲ. ಮುಖಮಂಡಲ ಅರಳಿ ಹೂವಿನಂತೆ ಪ್ರಫುಲ್ಲವಾಯಿತು. ಕಣ್ಣುಗಳಲ್ಲಿ ಆಸೆಯ ಬೆಳಕು ಮಿಂಚಿನಂತೆ ಮಿಂಚಿತು.

ಮಂದ ಮಂದ ಸಂಚಾರೀ ಶೀತಲ ಸಮೀರ ಸಾನಂದದಿಂದ ಎಲ್ಲೆ ಡೆಯೂ ಸಂಚರಿಸುತ್ತ ಪಲ್ಲವಿತ ಲತಾಸಮೂಹಗಳನ್ನು ಮುದ್ದಿಟ್ಟು ಕಿಟಕಿ ಯಲ್ಲಿ ಭರ್ರನೆ ತೂರಿಬಂದ.

ಮಾರ್ಕೆಟ್ ಟವರ್ ಗಡಿಯಾರ ಗಂಟೆ ಬಾರಿಸಿತು.

ಢಣ್. ಢಣ್. ಢಣ್. ಢಣ್. ಢಣ್. ಢಣ್....

ಆ ಮಧುರ ಮನೋಹರ ಢಂಕಾರ ಹನ್ನೆರಡು ಬಾರಿ ಸುಖಾನಂದದಿಂದ ಮೊಳಗಿ ವಿಶ್ರಮಿಸಿತು. ಅನಂತರ ಕೆಲವೇ ಕೆಲವು ಕ್ಷಣಗಳು ಶಾಂತ ಸಾಮ್ರಾಜ್ಯದಲ್ಲಿ ಉರುಳಿದುವೇನೋ. ನೆರೆಮನೆಯಲ್ಲಿ ಇದ್ದಕ್ಕಿದ್ದಂತೆಯೇ ಗದ್ದಲ ಕೇಳಿ ಬರಹತ್ತಿತು. ಅಂತಃಪಟಲದ ಮೇಲೆ ಗುಂಡು ಬಡಿದಂತೆ ತಾಗುವ ಆ ಗದ್ದಲ ಕುಡುಕನೊಬ್ಬ ಸತಿಯ ಮೇಲೆ ಎಸಗುತಿದ್ದ ಅಮಾನುಷ ಧಾಳಿ! ಒಂದಿಗೇನೇ ಕರುಳು ಹರಿಯುವಂತೆ ಮೊಳಗುವ ಹೊಡೆತ-ಬಡಿತ ಚೀತ್ಕಾರ

ಆ ನತದೃಷ್ಟ ಗೃಹ ವಿನಾ ಮತ್ತೆಲ್ಲ ಜೀವಾಜೀವಿಗಳು ಸುಖ ನಿದ್ದೆ ಯಲ್ಲಿ ಮೈಮರತಿವೆ. ಕೇವಲ ಒಂದೆರಡು ಘಳಿಗೆಯ ಹಿಂದೆ ರಸನಿಮಿಷದ ನೆನವರಿಕೆಯಲ್ಲಿ ರಸಾನ್ನವನ್ನುಂಡಿದ್ದ ಮನಃಪ್ರಾಣಗಳು ಒಮ್ಮೆಲೇ ಸಂಕಟದ ಘೋರ ವಿಷವನ್ನುಂಡುವು. ನಯನದ್ವಯಗಳು ನಿದ್ದೆಯ ಬದಲು ಅಶ್ರು ಬಿಂದುವಿನಿಂದ ತುಂಬಿ ಬಂದವು.

ಮರುದಿನ,

ನಿರ್ಮಲ ಪಾಠ ಮುಗಿಸಿ ಹೊರ ಹೆಜ್ಜೆ ಇಟ್ಟಾಗಲೇ ಅಮರನಾಥ ವರಾಂಡದಲ್ಲಿ ಹೆಗ್ಗಂಬದ ಬಳಿ ಅವಳ ನಿರೀಕ್ಷೆಯಲ್ಲಿದ್ದ. ಶುಭ್ರವಾದ ವಸನ, ನೀಳವಾದ ವ್ಯಕ್ತಿತ್ವ, ಸರಳ ಸ್ವಭಾವ ಆ ಹೆಗ್ಗಂಬದಷ್ಟೇ ಉನ್ನತವಾಗಿ ತೋರಿದುವು–ಪ್ರೇಮಪ್ರೀತ ಸಮುಜ್ವಲ ದೃಷ್ಟಿಗೆ. ಅವಳು ಪ್ರಯತ್ನ ಪೂರ್ವಕವಾಗಿ ತನ್ನನ್ನು ತಾನು ಹತೋಟಿಯಲ್ಲಿಟ್ಟುಕೊಂಡರೂ ಕಣ್ಣುಗಳು ನಲಿದಾಡಿದುವು. ಆಗ ಅವನು ಪರಮಾನಂದದಿಂದ ನುಡಿದ,

"ನನಗಿಲ್ಲಿ ಸ್ಟಡಿ ಲೀವ್ ದೊರಕಿದೆ. ನಾನು ನಾಳೆಯೇ ಮೈಸೂರಿಗೆ ಹೊರಡ ಬೇಕು."

"ಓಹೋ...."

"ಆ ಬಗ್ಗೆಯೂ ನಿಮ್ಮೊಂದಿಗೆ ಸ್ವಲ್ಪ ಮಾತಾಡುವುದಿದೆ."

"ಏನು ಹೇಳಿ?"

"ನೀವು ಎಂ.ಎ., ಗೆ ಸೇರುವ ವಿಚಾರ ಏನಾಯ್ತು?"

"ಮುಂದಿನ ಸಾಲಿನಲ್ಲಿ ಸೇರುವ ಯೋಜನೆ ಮಾಡಿರುವೆ."

"ನಿಮ್ಮಲ್ಲಿ ನನ್ನದೊಂದು ಯಾಚನೆ ಇದೆ. ದಯವಿಟ್ಟು ಬೇಸರಿಸ ಬಾರದು."

"ಅಷ್ಟು ದೊಡ್ಡ ಮಾತಾದರೂ ಏಕೆ ?"

"ನಡೆಯಿರಿ, ಇಲ್ಲೇಕೆ ? ಕ್ಯಾಂಟೀನ್ ಕಡೆ ಹೋಗಿ ಬರೋಣ.

ಅದು ಹಿತವೆನಿಸಿತು ನಿರ್ಮಲಳಿಗೆ. ಆಗಲೇ ಶಾಲಾವಲಯದಲ್ಲಿ ತಮ್ಮ ಬಗ್ಗೆ ಗುಸುಗುಸು ಆರಂಭವಾಗಿ ವಿಷಯ ಬಣ್ಣ ಬಣ್ಣವಾಗಿ ಹರಿದಿತ್ತು. ಅಂದಮೇಲೆ ಮುಂದಾದರೂ ಮದುವೆಯಾಗುವವರೆಗೆ ವಿಷಯವನ್ನು ಗುಪ್ತ ವಾಗಿಡದಿದ್ದರೆ ಅಸಹ್ಯವಾಗಿ ಹಬ್ಬಿ ಮನಃಪ್ರಾಣಗಳಿಗೆ ಕಸಿವಿಸಿಯೂಡಿಸುತ್ತದೆ; ಅಷ್ಟಕ್ಕೆ ಅವಕಾಶ ನೀಡಬಾರದು ಎಂಬಷ್ಟು ವಿವೇಚನೆಯನ್ನು ಬಿಟ್ಟುಕೊಡು ವಂತಿಲ್ಲ. ಈ ವಿಕಟ–ವಿಪ್ಲವ ಜನಾಲಯದ ಪುಟಪುಟದಲ್ಲಿ ಬರೆಯಬಹುದಾದ ಕುಸಾಹಿತ್ಯವನ್ನು ಗಮನದಲ್ಲಿಟ್ಟುಕೊಂಡೇ ಹೆಜ್ಜೆ ಹೆಜ್ಜೆಯನ್ನೂ ಮುಂದಿಟ್ಟಾಗಿದೆ. ವಿವಾಹಿತ ಜೀವನಕ್ಕೆ ಕಾಲಿಡುವ ತನಕ ಹೇಗಾದರೂ ಮಾನದಿಂದ ಉಳಿದರೆ ಸಾಕು....

ಅಂತಃಪ್ರಜ್ಞೆ ಉಲಿಯುತ್ತಲೇ ಇತ್ತು.

ಅವನಿಗೂ ತನಗೂ ನಾಲ್ಕು ಹೆಜ್ಜೆ ಅಂತರದಲ್ಲೇ ಹೆಜ್ಜೆ ಹಾಕಿದಳು ನಿರ್ಮಲ. ಅಂತರಂಗದಲ್ಲಿ ನೆತ್ತರಿನ ಪ್ರತಿ ಕಣವೂ ತುಳುಕುತ್ತಿರುವಂತೆ ಭಾಸವಾಯಿತು. ಉತ್ತೇಜಿತ ಚೇತನ ನರನಾಡಿಗಳಲ್ಲಿ ವಿದ್ಯುಲ್ಲಹರಿಯಂತೆ ಹರಿದಾಡಿತು. ನಸು ತಲೆಬಾಗಿ ಹೆಜ್ಜೆ ಹಾಕುತ್ತ ಕೇಳಿದಳು,

"ಬಹುಶಃ ನೀವಿನ್ನು ದಸರೆ ರಜೆಗೆ ಹಿಂದಿರುಗುತ್ತೀರೇನೋ....?"

"ಅದೇಕೆ ಅಷ್ಟುಕಾಲ? ಬೆಂಗಳೂರು ಯಾವ ಮಹಾದೂರ? ನಿಮ್ಮನ್ನು ನೋಡದೆ ಇರಲಾಗುತ್ತದೆಯೆ ? ಅನುಕೂಲವಾದಾಗಲೆಲ್ಲ ವಾರದಕೊನೆಯಲ್ಲಿ ಬಂದು ಹೋಗುವೆ."

ಒಮ್ಮೆಲೇ ಮುಖಕ್ಕೆ ಓಕುಳಿ ಎರಚಿದಂತಾಯಿತು. ನಿರ್ಮಲ ಕರ ವಸ್ತ್ರದಿಂದ ಮುಖವನ್ನು ತೀಡಿಕೊಳ್ಳುವ ನೆವದಲ್ಲಿ ಮರೆಮಾಚಿಕೊಳ್ಳಲು ಪ್ರಯತ್ನಿಸಿದಳು. ಅವರನಾಥ ದೃಶ್ಯಮಾನ ಸಾಹಿತ್ಯದಿಂದ ಪುಳಕಿತನಾದ.

"ನನಗೆ ದೊರೆತಿರುವುದು ಸಂಬಳರಹಿತ ರಜೆ. ಈ ಎರಡು ವರ್ಷ ನನ್ನ ಓದಿಗೆ ದಯವಿಟ್ಟು ಸಹಾಯ ಮಾಡಿರಿ. ನನ್ನದಾದನಂತರ ನಿಮ್ಮ

ಓದಿನ ಸಂಪೂರ್ಣಭಾರ ನನ್ನದು."

"......"

ಅದು ಸಮಂಜಸವೇ ಆದರೂ ಅಮಿತ ಹೊರೆಯಿಂದ ಒಂದೆರಡು ಕ್ಷಣ ಮನಸ್ಸು ಡೋಲಾಯಮಾನವಾಯಿತು.

"ನಿಮಗೆ ಭಯವೇನೋ ... ?" ಅಮರನಾಥ ಮುಗುಳುನಕ್ಕ.

"ಅಂತಾದ್ದೇನಿಲ್ಲ." ತಲೆಯಾಡಿಸಿದಳು ನಿರ್ಮಲ.

"ನನ್ನ ಎಂ.ಎ., ಆದ ತಕ್ಷಣ ಮದವೆಯಾಗಿ ಸಂಸಾರ ಹೂಡೋಣ...."

ಮಾತು ಅಷ್ಟಕ್ಕೆ ತುಂಡುಗಡಿಯಿತು. ಅವರನಾಥ ನೋಟವನ್ನು ಅವಳೆಡೆಗೆ ಹರಿಯಬಿಟ್ಟು ಸೂಕ್ಷ್ಮವಾಗಿ ಭಾವಧಾರೆಯನ್ನು ಅವಲೋಕಿಸಿದ.

"ಕೊಡುವುದರಲ್ಲಿ ಅಭ್ಯಂತರವಿಲ್ಲ. ಆತ್ಮವನ್ನೇ ಅರ್ಪಿಸಿಕೊಂಡ ಮೇಲೆ ಆರ್ಥಿಕ ಮೌಲ್ಯ ತೀರ ಅಲ್ಪ. ಆದರೆ ವಿಪರೀತ ಹೊರೆಯಾಗುತ್ತದೆ. ನಾನು ಭರಿಸಬಲ್ಲೆನೇ ಎಂಬುದೇ ಯೋಚನೆ."

"ನನಗೆ ಕೇವಲ ಇನ್ನೂರು ಕೊಟ್ಟರೆ ಸಾಕು. ಉಳಿದುದರಲ್ಲಿ ನಿಮ್ಮ ಜೀವನ ಸಾಗಿಸುವುದು ಕಷ್ಟವೇನಲ್ಲ. ಯೋಚಿಸಿ ನೋಡಿ."

"ಅಷ್ಟು ಮಾತ್ರವೇನು ? ತುರ್ತು ಕ್ರಮಗಳಿಗಾಗಿ ಹಣ ಮೀಸಲಿಡ ಬೇಕು. ಏತನ್ಮಧ್ಯೆ, ವಿಮಲೆಯ ಲಗ್ನ ಫಲ ಕೂಡಿಬಂದರೆ ಮಾಡಲೇಬೇಕು. ಇದಕ್ಕೆಲ್ಲಾ ಏನು ಮಾಡಲಿ ?"

"ದೇವರಿದ್ದಾನೆ."

"ಹಾಗೆನ್ನುವುದು ಸುಲಭ."

"ತಮ್ಮಂದಿರು ಸಹಾಯ ಮಾಡುತ್ತಿಲ್ಲವೇ?"

"ಪ್ರಸನ್ನನಿಂದ ಏನೂ ಇಲ್ಲ. ಪ್ರಫುಲ್ಲ ಅಷ್ಟಿಷ್ಟು ಕೊಡುತ್ತಾನೆ. ಅದು ಯಾವ ಮೂಲೆಗೆ....?"

"ಒಂದು ವೇಳೆ ತುರ್ತು ಪರಿಸ್ಥಿತಿಯುಂಟಾದಲ್ಲಿ ಹೇಗಾದರೂ ಅದರ ಭಾರ ನಾನು ಹೊತ್ತುಕೊಳ್ಳುವೆ. ನಿಮಗೆ ಯೋಚನೆ ಬೇಡವೇ ಬೇಡ" ಎಂದ. ದೀಪ್ತ ಲಲಾಟದ ಮೇಲೆ ಸ್ಥಿರ ಗಾಂಭೀರ್ಯತೆ ಕಾಣಿಸಿತು.

ನಿರ್ಮಲ ವಿಚಾರಮಗ್ನಳಾಗಿದ್ದರೂ ಒಂದೆರಡು ಕ್ಷಣ ಹುಬ್ಬೆತ್ತಿ ನೋಡಿ ಅದನ್ನು ಗಮನಿಸಿದಳು.

ಅವಳಿಂದ ಉತ್ತರ ಹೊಮ್ಮುವ ಮುನ್ನ ಅಮರನಾಥ ಕೇಳಿದ,

"ನಿಮಗೇನಾದರೂ ಅನುಮಾನವೇ ?"

ಗಾಢವಾದ ನಿದ್ದೆಯಲ್ಲಿರುವವರ ಮೇಲೆ ತಟ್ಟನೆ ತಣ್ಣೀರೆರಚಿದಂತಾಯಿತು—ನಿರ್ಮಲೆಗೆ. ಒಂದೆರಡು ಕ್ಷಣ ತಬ್ಬಿಬ್ಬಾದಳು.

"ಹಾಗೇನಿಲ್ಲ....ಸಂಸಾರಿಕ ಸ್ಥಿತಿಗತಿಯನ್ನು ಕುರಿತು ಚಿಂತಿಸುತ್ತಿದ್ದೆ."

"ನಿಮ್ಮ ಮುಂದೆ 'ಯಾಚನೆ' ಸರಿಯಲ್ಲದಿದ್ದರೂ ನನ್ನ ಹೃದಯ ಸಂಪುಟವನ್ನು ತೆರೆದಿಡುವುದು ಯುಕ್ತ. ಇದರಿಂದ ನೀವು 'ಲಜ್ಜಾಹೀನ' ಎಂದುಕೊಂಡರೂ ಚಿಂತೆಯಿಲ್ಲ" ಎಂದ, ಮುಖಭಾವದಲ್ಲಿ ಅತ್ಯಂತಿಕ ನೈಜತೆ ಇತ್ತು. ರೋಮ ರೋಮವೂ ಆತ್ಮವಿಶ್ವಾಸವನ್ನು ಪ್ರಕಟಿಸುವಂತೆ ನಿಮಿರಿ ನಿಂತಿದ್ದುವು. ಒಮ್ಮೆ ನೋಟವನ್ನು ಇತ್ತ ಹರಿಸಿ ಅನಂತರ ದೂರ ವೃಕ್ಷದ ಮೇಲೆ ಹರಿಯಬಿಟ್ಟ.

"ಆಗಲಿ, ನಾನು ನಿಮಗಾಗಿ ಪ್ರಯತ್ನಿಸುವೆ."

"ಓ....! ಪ್ರಯತ್ನಿಸುವಿರಾ ?" ಪ್ರಶ್ನೆ ಹಾಸ್ಯಪ್ರಧಾನವಾಗಿ ಹರಿದು ಬಂದಾಗ ಕಣ್ಣುಗಳಲ್ಲಿ ಮಿನುಗಿದ ತುಂಟತನ ಎಳೆಯರನ್ನು ಪ್ರತಿನಿಧಿಸಿತು. ತಾಮ್ರವರ್ಣರಂಜಿತ ತುಟಿಗಳಲ್ಲಿ ಮಂದಹಾಸ ನಲಿದಾಡಿತು.

ನಿರ್ಮಲೆಯೂ ತಿಳಿನಗೆಯಲ್ಲಿ ಪಾಲ್ಗೊಂಡು ಉತ್ತರಿಸಿದಳು "ನೀವು ದಯವಿಟ್ಟು ಏನೂ ತಿಳಿದುಕೊಳ್ಳಬಾರದು. 'ಕೊಡುವೆ' ಎಂದರೆ ಪ್ರಮಾಣವಾಯಿತು. 'ಪ್ರಯತ್ನಿಸುವೆ' ಎಂದರೆ ನನ್ನ ಖರ್ಚುವೆಚ್ಚಗಳನ್ನು ಇನ್ನೊಮ್ಮೆ ಪರಿಶೀಲಿಸಿ ಹೇಳಬಹುದು."

"ಅದು ಯಥಾರ್ಥ ! ಸಂಶಯವಿಲ್ಲ, ನಾವು ಇಂಗ್ಲೀಷರ ಸಂಪರ್ಕದಿಂದ ಎಷ್ಟೋ ಕಲಿತುಕೊಂಡೆವು !"

ಒಡನೆ ಇಬ್ಬರ ಮುಖಬಿಂಬಗಳಲ್ಲೂ ನಗುವಿನ ಲಹರಿ ಉಕ್ಕಿ ಹರಿಯಿತು.

"ನೀವು ದಯವಿಟ್ಟು ಅಪಾರ್ಥ ಮಾಡಿಕೊಳ್ಳಬಾರದು." ಕೆಂಪು ಕೆಂಪಾಗಿ ನುಡಿದಳು ನಿರ್ಮಲೆ.

"ಸರಿ....ಬಾಹ್ಯಾಡಂಬರವೇಕೆ ? ನಾನಂತೂ ಈ ಶಾಸ್ತ್ರೀಯ ಶಬ್ದಗಳ ಸರಣಿಗೆ ಇನಿತೂ ಬೆಲೆ ಕೊಡುವುದಿಲ್ಲ. ಪ್ರತಿಯೊಂದು ಅಕ್ಷರದಲ್ಲೂ ನೈಜತೆ ಇರಬೇಕು ನೋಡಿ!"

ವಿಷಯ ನಿರೂಪಣೆ ಸಹಜವೇ ಆಗಿದ್ದರೂ, ವಾಕ್ಸರಣಿ ಅತ್ಯಂತ ಸರಳವೇ ಆಗಿದ್ದರೂ ಅಂತರಾಳದ ಬಗ್ಗಡದಲ್ಲಿ ಮೆಲ್ಲನೆ ಕೈಯಾಡಿಸಿದಂತಾಗಿ ದೇಹದಾದ್ಯಂತ ನಸು ಕಂಪನದ ಅಲೆ ಹರಿದಾಡಿಹೋಯಿತು. ಅಂತಲೇ ಅತ್ಯಂತ ಅವಸರವಾಗಿ ನುಡಿದಳು,

"ನಿಮ್ಮ ಮನಸ್ಸು ಬಲು ಸೂಕ್ಷ್ಮ, ಏನು ಮಾತಾಡಿದರೂ ಅದರಲ್ಲಿ ದೋಷವನ್ನು ಬಗೆಯುತ್ತೀರಿ. ನನಗೆ ಅದೇ ಭಯ."

"ಹಾಗಲ್ಲ, ಇದ್ದುದ್ದು ಹೇಳಿದೆ" ತುಟಿಗಳಲ್ಲಿ ಮುಗುಳುನಗೆ ಚೆಲ್ಲಿ ನುಡಿದ ಅಮರನಾಥ.

ಈ ಪ್ರಕಾರ ಸಾಗಿದ ಮಾತುಕತೆ ಭವಿಷ್ಯದೆಡೆಗೆ ಹೊರಳಿದಾಗ ಕ್ಯಾಂಟೀನಿನ ಮೆಟ್ಟಿಲು ಹತ್ತುತ್ತಿದ್ದರು ಅವರು. ಅನಂತರ ಯಾವ ಯಾವ ವಿಚಾರಗಳು ಬಂದುಹೋದುವೋ....ಅಂತಿಮವಾಗಿ ಒಂದು ನಿರ್ಧಾರಕ್ಕೆ ಬಂದಾಗ ಪರಿಗೃಹೀತ ಭಾವರೂಪ ಆತ್ಮಸುಖವನ್ನು ನೀಡಿತ್ತು.

೮

......ಜಗತ್ಪ್ರಲಯದಾದ್ಯಂತ ದುಃಖ–ದುಗುಡಗಳೇನೇ ಇರಲಿ, ಅವಿಶ್ರಾಂತ ಕಾಲಮಾನ ಸೌರಮಾನ ಶೋಭೆಯಿಂದ ಯಥಾರೀತಿ ವಿಜೃಂಭಿಸುತ್ತಿತ್ತು.

......ಸಂಕಷ್ಟದ ವಾತ್ಯಾಚಕ್ರಗಳು ಅನಿರೀಕ್ಷಿತವಾಗಿ ಮೇಲಾಯ್ದು ಬಂದು ಗಂಭೀರ ಸ್ವರೂಪದಲ್ಲಿ ಹಾಸಿಗೊಳಿಸುವಾಗ ಸಮಸ್ತ ಪ್ರಾಣವಾಯು ಆಲೋಡಿತವಾಗುತಿತ್ತು.

ಆದರೂ,

ಶಾಂತಿ, ಶಾಂತಿ, ಶಾಂತಿ!

ಶಾಂತಿಗೆಂದೇ ಹಗಲಿರುಳೂ ಘೀಳಿಡುವ ಪ್ರಾಣಿಕೋಟಿಯಿಂದ ದೂರದೂರವಾಗಿ ಮರಳುಗಾಡಿನ ಮಹಾಮರೀಚಿಕೆಯಂತೆ ಪರಿಶೋಭಿಸುವ 'ಶಾಂತಿ' ಈ ಯುಗಧರ್ಮದಲ್ಲಿ ಕೈಗೆಟುಕುವುದಾದರೂ ಉಂಟೇ....? ಮರಣೋತ್ತರ ಶಾಂತಿ ಲಭಿಸುವುದೂ ಸಹ ಅನುಮಾನವೇ.

ಅಂತಲೇ ಜೀವನರಂಗದಲ್ಲಿ ಹಾವೂ ಸಾಯದು; ಕೋಲೂ ಮುರಿಯದು.

ಪ್ರಸನ್ನ ಮದುವೆಯಾದಾಗಿನಿಂದ ಬೇರೆ ಸಂಸಾರ ಹೂಡಿದ್ದ. ಅಂದಿಂದಿಗೂ ಅವನು ನೀಡುತ್ತಿದ್ದ ಆರ್ಥಿಕ ಸಹಾಯ ಸಾಂಸಾರಿಕ ನಿರ್ವಹಣೆಯಿಂದ ಸಂಪೂರ್ಣವಾಗಿ ಕಡಿದುಬಿದ್ದಿತ್ತು. ಆದಕ್ಕೆ ಬದಲಾಗಿ ಪ್ರತಿ ಭಾನುವಾರ ಬೆಳಗ್ಗೆ ಅಷ್ಟು ಹೊತ್ತಿಗೇನೇ ಪ್ರಾತರ್ವಿಧಿಗಳನ್ನು ಮುಗಿಸಿ, ಸಾನಂದದಿಂದ ತಂಗಾಳಿಗೆ ಮೈಗೊಟ್ಟು ಸತೀಸಮೇತನಾಗಿ ಸಾರ್ವಭೌಮಿಕ ತುಲನೆಯಲ್ಲಿ ಆಗಮಿಸಿ, ಬಾಲ್ಯದ ಗೆಳೆಯರೊಂದಿಗೆ ಕಲೆತು ಸಂತಸದಿಂದ ಹೊತ್ತು ಕಳೆದು ರಾತ್ರಿಯೂಟವನ್ನು ಮುಗಿಸಿದನಂತರ ಗಾಳಿಸಂಚಾರಾರ್ಥವಾಗಿ ಹೊರಟು ಹಾಗೇ ತನ್ನ ಗೂಡನ್ನು ಸೇರಿಕೊಳ್ಳುತಿದ್ದ. ಅದರಿಂದ ದಂಪತಿಗಳಿಗೆ ತಿಂಗಳಿಗೆ ನಾಲ್ಕು ದಿನಗಳ ಊಟತಾಯ ಲಭಿಸುವುದು ಮಾತ್ರವಲ್ಲ, ವಿಶ್ರಾಂತಿ–ವಿನೋದ–ಕೌಟುಂಬಿಕ ಭದ್ರತೆ ಕರತಲಾಮಲಕವಾಗುವುವು.

ಮೋಹಿನಿ ಬರುವಾಗಲೆಲ್ಲ ವಾರದ ಮೋಜಿಗಾಗಿ ಯಾವುದಾದರೊಂದು ಪುಸ್ತಕ ತರುವುದು ವಾಡಿಕೆ.

"ಆಫೀಸಿನ ಕೆಲಸ ಮಾಡುವುದರಿಂದ ಪುಸ್ತಕ ಓದಲು ಬಿಡುವೇ ಆಗುವುದಿಲ್ಲ. ಮನೆಗೆ ಬಂದರೆ ಬಿಡುವಿಲ್ಲದ ಕೆಲಸ ಕಾದಿರುತ್ತೆ." ಎಂದು ತನ್ನ ಪುಸ್ತಪ್ರೋತ್ಸಾಹಕ್ಕೆ ಸರಾಗವಾಗಿ ವಿವರಣೆ ನೀಡುವಳು.

ಆಗ ಅದಕ್ಕೇನುತ್ತರಿಸಬೇಕೋ ತಿಳಿಯದೆ ಸುಮ್ಮನಾಗುವಳು ಸ್ವಾಮಿನಿ.

"ಪ್ರತಿ ಶನಿವಾರ ಒಂದು ಸಿನೆಮಾ ನೋಡದಿದ್ದರೆ ಹುಚ್ಚು ಹಿಡಿಯುವುದೇ ಸೈ. ಈಗ ಅದರಲ್ಲಿ ಆಫೀಸಿನ ಕಿರಿಕಿರಿಯೆಲ್ಲಾ ಕಳೆಯುತ್ತೆ. ಭಾನುವಾರ ಒಂದು ಕಾದಂಬರಿ ಓದಿದರೆ ಮನಸ್ಸಿಗೆ ನೆಮ್ಮದಿ ಬರುತ್ತದೆ. ಈ ಅವಿಶ್ರಾಂತ ಜೀವನಕ್ಕೆ ಇದಲ್ಲದೆ ಬೇರೆ ಉಪಾಯವೇ ಇಲ್ಲ."

—ಮೋಹಿನಿ ತನ್ನ ಬಗ್ಗೆ ತಾನೇ ಸಮಾಧಾನ ನೀಡುತ್ತಾಳೆ.

ನಿರ್ಮಲೆ–ವಿಮಲೆಯರ ಹೃದಯಗಳು ಪರಸ್ಪರ ಮೌನ ಸಂಭಾಷಣೆ ನಡೆಸುತ್ತವೆ. ಮೂಕಶೋಕದಿಂದ ಚಿತ್ತಾಲೋಕ ಕದಡಿ ಬಗ್ಗಡವಾಗುವುದು. ವಾರಕ್ಕೊಂದು ದಿನ ಎಲ್ಲರೂ ಕೂಡಿ ಸಾನಂದದಿಂದ ಪಡೆದುಕೊಳ್ಳುತಿದ್ದ ಆನಂದ ಸಾಕ್ಷಾತ್ಕಾರ ಅಂದಿಗೇ ಮುಗಿಯಿತು. ಅಕ್ಕತಂಗಿಯರು ತಾಯಿಯೊಂದಿಗೆ ಅಡುಗೆ ಮನೆಯಲ್ಲಿ ಕೂಡಿಕೊಂಡು ತನುಮನಗಳಿಗೆ ಕಾಯಕ

ಕಲ್ಪಿಸುವರು. ಭಿನ್ನಭಿನ್ನ ಬುದ್ಧಿಭಾವಗಳ ರಸ ಸಂಯೋಜನೆಯಿಂದ ಮಾನಸಿಕ ಶಾಂತಿ ದೈಹಿಕ ವಿಶ್ರಾಂತಿ ಎರಡೂ ಜೀವನ ಸಂಗ್ರಾಮದಿಂದ ಕಣ್ಮರೆಯಾಗತೊಡಗಿದುವು. ಮೋಹಿನಿ ಅದಾವುದನ್ನೂ ಗಮನಿಸದೆ ಪ್ರಸ್ತ್ರ ಕಾವಲೋಕನದಲ್ಲಿ ತನ್ನನ್ನೇ ಉತ್ಸರ್ಗಗೊಳಿಸಿ ಶಾಂತಿ–ವಿಶ್ರಾಂತಿಗಳೆರಡನ್ನೂ ಏಕಕಾಲದಲ್ಲಿ ಹೊಂದುವ ಅಭ್ಯಾಸ ಮಾಡಿಕೊಂಡಳು. ಅಂದಿನಿಂದ ಜೀವನಕಾಂಡದಲ್ಲಿ ಅನುಭೂತ ಆ ಹೊಸ ಪ್ರಕರಣ ತೆರೆದ ಅಧ್ಯಾಯವೇ ಆಯಿತು. ಈಗೀಗ ಆ 'ಭಾನುವಾರ' ಬರುವುದೂ ಬೇಡ ಅನ್ನಿಸುತ್ತದೆ. ಆದರೆ, ಅದೆಂದಾದರೂ ನಿಲ್ಲುವುದುಂಟೇ ? ಆ ಗೃಹವಲಯದಲ್ಲಿ ಸುಖ–ದುಃಖಗಳಿಂದ ಅನುತಪ್ತವಾಯು ಉಷ್ಣೋಷ್ಣಕಾಲೀನ ಉಷ್ಣವಾಯುವಿನಂತೆ ಉಷ್ಣಭರಿತವಾಗಿ ತೀಡುವಾಗ ಮೈಯಲ್ಲಿ ಸ್ವೇದ ಬಿಂದುಗಳು ಹನಿಹನಿಯಾಗಿ ಬಸಿಯುತ್ತಿದ್ದುವು. ಉಸಿರು ಬಿಸಿಬಿಸಿಯಾಗಿ ಹರಿದಾಡುತಿತ್ತು.

ಮಧ್ಯಾಹ್ನದ ಬಿಡುವಿನಲ್ಲಿ ಪ್ರಸನ್ನಮುಖಿಯಾದ ಪ್ರಸನ್ನ ದೈನಿಕವೊಂದನ್ನು ತಿರುವಿಹಾಕುತ್ತ ಭಾವನಾಲೋಕನದಲ್ಲಿ ಮುಳುಗಿ ಅಂದ,

"ನಾನೊಂದು ಪತ್ರಿಕೆ ಸಹ ಕೊಳ್ಳುತ್ತಿಲ್ಲ. ಏನಿದ್ದರೂ ಲೈಬ್ರರಿಯಲ್ಲಿ ಕುಳಿತು ಓದುವುದೇ !"

"ಇಬ್ಬರ ಸಂಪಾದನೆ ಏನು ಮಾಡುತ್ತೀರಿ ?"

"ಆದಷ್ಟೂ ಉಳಿಸಿ ಮನೆ ಕಟ್ಟಿಕೊಳ್ಳಬೇಕು. ಬಾಡಿಗೆ ಕೊಡುವುದು ವ್ಯರ್ಥ !"

"ಅದು ಒಳ್ಳೆಯದೇ" ಎಂದಳು ಜಾನಕಿ. ಧ್ವನಿ ಎದೆಯಾಳದಿಂದ ಹರಿದುಬಂತು. ಒಂದಾನೊಂದು ಕಾಲದಲ್ಲಿ ಪತಿ ರಾಮರಾಯನೂ ಆ ಮಾತು ಹೇಳುತ್ತಿದ್ದ. ದುರ್ವಿಧಿ ಅಕಾಲದಲ್ಲಿ ಕತ್ತು ಹಿಸುಕದಿದ್ದಲ್ಲಿ ಅದು ಕೈಕೂಡುತಿತ್ತು....ಎಂದೆನಿಸಿದಾಗ ಆತನ ಆಶೋತ್ತರಗಳು ಹೀಗೊಂದು ರೀತಿಯಲ್ಲಿ ಈಡೇರುವುದು ಒಳ್ಳೆಯದೇ ಎಂದುಕೊಂಡಳು. ಚಿತ್ತ ಗತಕಾಲದಲ್ಲಿ ಸಂಚರಿಸಿ ಹಿಮ್ಮರಳಿದಾಗ ಒಂದೆರಡು ಘಳಿಗೆ ನಯನದ್ವಯಗಳಲ್ಲಿ ಮಿಂಚಿದ ಸಮುಜ್ವಲ ಛಾಯೆ ಗಮನೀಯವಾಗಿತ್ತು. ಆ ಸಂಧರ್ಭದಲ್ಲಿ ತಾಯಿಯ ಕಡೆ ನೋಡುತ್ತಿದ್ದ ನಿರ್ಮಲ ಅವಳ ಮುಖದ ಮೇಲೆ ಹರಿದಾಡುತಿದ್ದ ಭಾವಾನುಲೋಕನದಿಂದ ಅರುಣಾಧರಗಳ ಮೇಲೆ ತೆಳುನಗೆಯನ್ನು ಸ್ಫುರ

ವಾಗಿ ತೇಲಿಸಿ ಸ್ವಲ್ಪಹೊತ್ತು ಅಧೋವದನೆಯಾಗಿ ಯೋಚಿಸಿದಳು. ಹೃದಯ ಕಾಂತಾರದಲ್ಲಿ ಈ ಅಲಕ್ಷಿತ ಸಂಸಾರವನ್ನು ಯಾವರೀತಿ ಉದ್ಧರಿಸಬೇಕೋ ಅರ್ಥವಾಗುತ್ತಿಲ್ಲ. ಈ ಕುಲಪುತ್ರರಂತೂ ಹೆಗಲು ಕೊಡುವವರಲ್ಲ, ಎಂದುಕೊಂಡಳು.

ಪ್ರಫುಲ್ಲ ಹೊಳೆ ಹೊಳೆಯುವ ಕಣ್ಣುಗಳಲ್ಲಿ ತುಂಟತನವನ್ನು ಹರಿಹಾಯಿಸಿ ಸಮಯೋಚಿತ ಪ್ರಶ್ನೆಯನ್ನು ಉಲ್ಲಾಸಭರಿತವಾಣಿಯಲ್ಲಿ ಮುಂದಿಟ್ಟ,

“ಮನೆ ಕಟ್ಟಿದನಂತರವಾದರೂ ಅಮ್ಮನನ್ನು ಕರೆದುಕೊಂಡು ಹೋಗುತ್ತೀಯಷ್ಟೆ ?”

“ಮನೆ ಕಟ್ಟುವುದು ಯಾವ ಕಾಲಕ್ಕೋ .. ಇಷ್ಟಕ್ಕೂ ಅಮ್ಮ ಹೊರಡಬೇಕಾದರೆ ನೀವೆಲ್ಲ ಸಂಸಾರಬದ್ಧರಾಗಬೇಕಲ್ಲ ?”

“ಕೊನೆಗೂ ನಿನ್ನ ಬಾಯಲ್ಲಿ ‘ಅವರನ್ನು ಕರೆದುಕೊಂಡು ಹೋಗಿ ಸುಖಶಾಂತಿ ನೀಡುವೆ’ ಎಂಬ ಮಾತು ಬರಲಿಲ್ಲವಲ್ಲ ?”

ಒಡನೆ ನಗುವಿನ ಲಹರಿ ಉಕ್ಕಿ ಹರಿಯಿತು. ಪ್ರಸನ್ನ ತನ್ನ ದನಿಯನ್ನೂ ಅವರೊಂದಿಗೆ ಹರಿಯಬಿಟ್ಟ.

ಪುಸ್ತಕ ಪ್ರಪಂಚದಲ್ಲಿ ನಿಮಗ್ನಳಾಗಿದ್ದ ಮೋಹಿನಿ ಮಾತಾಡಲಿಲ್ಲ.

ನವಜೀವನದ ಹುರುಪು, ಆರ್ಥಿಕ ಸುಧಾರಣೆ ಉಡಿಗೆ ತೊಡಿಗೆಗಳಲ್ಲಿ ಸಂಭ್ರಮ ವಿಶೇಷವನ್ನು ಹೊಮ್ಮಿಸಿತ್ತು. ನರನಾಡಿಗಳಲ್ಲಿ ಉತ್ಸಾಹ-ಉಲ್ಲಾಸಗಳು ನಲಿದಾಡುತ್ತಿದ್ದುವು. ದಂಪತಿಗಳು ಒಮ್ಮನದಿಂದ ಅದೃಷ್ಟ ಪ್ರದರ್ಶನ ಮಾಡುವುದರಲ್ಲಿ ಹಿಂತೆಗೆಯುತ್ತಿರಲಿಲ್ಲ. ಆ ಹೃದಯಹೀನತೆಯನ್ನು ಗಮನಿಸಿಯೇ ಪ್ರಫುಲ್ಲ ಪ್ರಶ್ನೆ ಹಾಕಿದ್ದ. ವಿಮಲೆಯ ಕಮನೀಯ ಕುತೂಹಲ ಲೋಚನಗಳು ಅತ್ತ ಹೊರಳಿ ಬೇರೆಡೆಗೆ ಸಿಡಿದುವು. ಇದುವರೆಗೆ ಅವಳು ಯಾವ ಮಾತನ್ನೂ ಆಡಿರಲಿಲ್ಲ. ತನ್ನ ಹೆತ್ತವರ ಮಹತ್ತನ್ನು ಅರ್ಥಮಾಡಿಕೊಳ್ಳುತ್ತಿಲ್ಲ ಎಂದು ಮನದಲ್ಲಿಯೇ ಬಾಧೆ ಪಟ್ಟುಕೊಳ್ಳುವಾಗ ಅಣ್ಣನ ಮೇಲೆ ಕುಪಿತಳಾದರೂ ತಾಯಿಯ ಬಗ್ಗೆ ಭಕ್ತಿಭಾವದಿಂದ ತುಂಬಿಕೊಂಡ ಹೃದಯ ಬಿಸಿಲಟ್ಟಿದ ಮಂಜಿನಂತೆ ದ್ರವಿಸಿತು. ಆ ಪ್ರೇಮಾವೇಗದಲ್ಲಿ ತಾನು ಏನು ಹೇಳುತ್ತಿರುವೆನೆಂಬುದನ್ನು ಸಹ ಯೋಚಿಸದೆ ಜಾಗಟೆ ಬಾರಿಸಿದಂತೆ ತನ್ನ ಕಂಠಸ್ವನವನ್ನು ಹರಿಹಾಯಿಸಿದಳು.

"ನಿನ್ನ ವಿಚಾರ ನಿಂದನೀಯವಾದುದಲ್ಲ. ನಾವು ನಿಂದಿಸುವುದು ಕಾಲಧರ್ಮವನ್ನು !"

ಅನಿರೀಕ್ಷಿತವಾಗಿ ವೃದ್ಧ ಜನನಿಯ ಕಣ್ಣಾಲಿಗಳು ತುಂಬಿಬಂದುವು. ಯಾರಿಗೂ ತೋರಗೊಡದಂತೆ ಅವಳು ಎಚ್ಚರ ವಹಿಸಿ ಉತ್ತರೀಯದಿಂದ ಒರಿಸಿ ನಿವಾರಿಸಿಕೊಂಡು ಮಗಳ ಕಡೆ ನೋಡುತ್ತ ಈ ತುಂಟಹುಡುಗಿ ಇನ್ನೂ ಏನಾದರೂ ಹೇಳಿಬಿಟ್ಟಾಳೇನೋ ಎಂದುಕೊಂಡು "ನನಗೆ ಮನೆ ಮಠಗಳ ವ್ಯಾಮೋಹವಿಲ್ಲ. ಎಲ್ಲರೂ ಹೀಗೇ ಸುಧಾರಿಸಿಕೊಳ್ಳುತ್ತಿದ್ದರೆ ಸಾಕು" ಎಂದಳು ಧ್ವನಿ ವಿಜಾತೀಯವಾಗಿತ್ತು.

ಒಮ್ಮೆಲೇ ಚೇತರಿಸಿಕೊಂಡಂತೆ ಪ್ರಸನ್ನ ಉತ್ತರಿಸಿದ,

"ಕಾಲಧರ್ಮಕ್ಕೆ ನೀನೂ ಬಲಿಯಾಗುವವಳೇ !"

"ನೋಡುತ್ತಿರು !" ಸವಾಲು ಹಾಕುವಂತೆ ನುಡಿದಳು ವಿಮಲ.

ನಿರ್ಮಲ ಅವಳ ಮಾತನ್ನು ಮುಂದುವರಿಸಗೊಡದಿರಲು ನಡುವೆ ಬಾಯಿ ಹಾಕಿದಳು,

"ಯಾವ ನಾಗರಿಕ ಸಮಾಜವನ್ನು ನಾವು ಉನ್ನತವಾದುದೆಂದು ಭಾವಿಸಿರುವೆವೋ ಆ ನಾಗರಿಕ ಸಮಾಜದಲ್ಲಿ ಕಾಣದಂತಹ ಪ್ರೀತಿ–ವಿಶ್ವಾಸ ಪರಸ್ಪರ ಪಡೆದುಕೊಂಡಿದ್ದೇವೆ. ಈ ವಿಷಯ ನೆನೆಸಿಕೊಂಡರೆ ಮನಸ್ಸಿಗೆ ತುಂಬ ಆನಂದವುಂಟಾಗುತ್ತದೆ."

ಜಾನಕಿ ನಿರ್ಮಲೆಯ ಕಡೆ ನೋಟ ಹರಿಸಿದಳು. ಮಗಳ ಸಮಯೋಚಿತ ಪರಿಜ್ಞಾನ ತಪ್ತ ಮನಕ್ಕೆ ಸಾಂತ್ವನ ನೀಡಿತು. ಭಾವವಿಭಾವಗಳ ತೊಡಕಿನಿಂದ ಬಿಡಿಸಿಕೊಳ್ಳುವುದರೊಳಗಾಗಿ ನಿರ್ಮಲ ಪುನಃ ನುಡಿದಳು,

"ಪ್ರಾಚೀನ ಹಿಂದೂಸ್ಥಾನದಲ್ಲಿ ನಡೆದ ಘಟನಾವಳಿ ಅನುಕ್ರಮವಾಗಿ, ಐತಿಹಾಸಿಕವಾಗಿ ಉಳಿದಿವೆ. ಯಾವುದನ್ನೂ ಕಾಲಧರ್ಮವೆಂದು ಉಲ್ಲೇಖಿಸುವ ಕಾರಣ ಸರಿಯಲ್ಲ. ಎಲ್ಲೆಲ್ಲೂ ಭಿನ್ನಾಭಿಪ್ರಾಯಗಳು ಏಳುತ್ತಿರುತ್ತವೆ. ಅದೇನೂ ವಿಶೇಷವಲ್ಲ ಈ ದೇಶದಲ್ಲಿ ಅಭಿಪ್ರಾಯಭೇದವಿರಬಹುದು; ಧನ ಸಂಸ್ಕಾರವಿಲ್ಲದಿರಬಹುದು. ಆದರೆ ಅತಿಥಿ ಸತ್ಕಾರಕ್ಕೆ ಕೊರತೆ ಬರುವ ಕಾರಣವಿಲ್ಲ....ನಿಜಕ್ಕೂ ಯೋಚಿಸಿ ಹೇಳುವುದಾದರೆ"....ಎಂದು ತಾಯಿಯ ಕಡೆ ತಿರುಗಿವಿನಯ ವಿನಮ್ರತೆಯಿಂದ ತುಟಿಗಳಲ್ಲಿ ಎಳೆನಗುವನ್ನು ಸೂಸಿ ಮಾಗ್ಧಾರೆ

ಯನ್ನು ಮುಂದುವರಿಸಿದಳು "ಈ ಅನುಬಂಧ-ಪ್ರೀತಿ-ಅಕ್ಕರೆಯನ್ನು ಅಷ್ಟು ಶಿರಿಕೊಂಡ ತರುಣದಲ್ಲಿ ಬಂಧುವರ್ಗದಿಂದ ಪಡೆದುಕೊಳ್ಳದಿದ್ದುದೇ ನಮ್ಮನ್ನು ನಾವು ಅರಿತುಕೊಳ್ಳಲು ಸಹಾಯ ಮಾಡಿತು. ಯಾವುದು ನಮ್ಮ ಅನುಬಂಧಕ್ಕೆ ನಿಲುಕುವುದಿಲ್ಲವೋ ಅವೇ ನಮಗೆ ದೂರದಲ್ಲಿದ್ದುಕೊಂಡು ಸಹಾಯ ಮಾಡುತ್ತವೆ.... ಅಲ್ಲವೇ ?"

ಒಂದೆರಡು ಘಳಿಗೆ ಸುಮ್ಮನಿದ್ದು ಅನಂತರ ಮೋಹಿನಿಯ ಕಡೆ ತಿರುಗಿ,

"ನಮಗೆ ದೇವರು ಕೊಟ್ಟಿರುವುದೇ ಇದು. ಮುಖ್ಯವಾಗಿ ಇದೂ ಇಲ್ಲದಿದ್ದರೆ ಇನ್ನೇನಿದೆ ಹೇಳು ?"

ಮೋಹಿನಿ ಒಂದು ಘಳಿಗೆ ಆಶ್ಚರ್ಯಭರಿತ ನೋಟದಿಂದ ದಿಟ್ಟಿಸಿದಳು. ವಿಷಯ ಯಾವ ರೀತಿ ಪ್ರಾರಂಭವಾಯಿತು, ಇನ್ನಾವ ರೀತಿ ಮುಕ್ತಾಯವಾಯಿತು ಎಂಬುದು ಪುಸ್ತಕಾವಲೋಕನದಲ್ಲಿದ್ದ ಅವಳಿಗೆ ಬಗೆ ಹರಿಯಲಿಲ್ಲ ಮಾತ್ಸದಿದ ನಾಲಿಗೆ ಹೊರಳಲಿಲ್ಲ. ಒಂದೆರಡು ಘಳಿಗೆ ನಿಶ್ಶಬ್ದವಾಗಿ ಉರುಳಿದುವೇನೋ. ಪ್ರಸನ್ನ ತಾಯಿಯ ವಾಕ್ಯ ಸಂಪತ್ತಿಯನ್ನು ಆಲೈಸಿದರೂ ಮುಖ ಮಂಡಲವನ್ನು ನೆಟ್ಟದೃಷ್ಟಿಯಿಂದ ನೋಡದಾದ. ಚಿತ್ತ ಆವುದೋ ವಿಚಾರಗೊಂದಲದಲ್ಲಿ ಸಿಲುಕಿಕೊಂಡಿತ್ತು.

ಹಗಲೆಲ್ಲ ಬಿಸಿ ಬಿಸಿಯಾಗಿ ಬೀಸುತ್ತಿದ್ದ ಉಷ್ಣಪುಷ್ಟವಾಯು ಸಂಧ್ಯಾ ಸಂಸ್ಕಾರದಿಂದಾಗಿ ತಂಪು ತಳೆಯುತ್ತಿತ್ತು. ಅಸ್ತಮಿತ ಸೂರ್ಯನ ಹೊಂಬೆಳಕು ಧರಾತಲವನ್ನು ಶ್ರದ್ಧೆಯಿಂದ ಮಾಯಿಸಿತ್ತು. ರಸ್ತೆಯುದ್ದಕ್ಕೂ ಸ್ತಂಭಗಳ ಮೇಲೆ ಉರಿಯುತ್ತಿದ್ದ ವಿದ್ಯುದ್ದೀಪಗಳು ನಾಚಿದುವೋ ಎಂಬಂತೆ ಮಂದ ಮಂದ ಕಾಂತಿಯನ್ನು ತಳೆದಿದ್ದುವು.

ಪ್ರಸನ್ನ ಓದುತ್ತಿದ್ದ ಹೊತ್ತಗೆಯನ್ನು ಮುಚ್ಚಿ,

"ನಮ್ಮ ರಾಷ್ಟ್ರದ ಇತರ ಪ್ರಾಂತಗಳ ವಿಚಾರವೇನೇ ಇರಲಿ, ಮೈಸೂರು ರಾಜ್ಯದ ಶ್ರೀಮಂತ ಸಮಾಜಕ್ಕೂ ನಮಗೂ ಇರುವ ಸಂಬಂಧವೇ ಬೇರೆ...." ಎಂದ. ಕುತೂಹಲಭರಿತ ನೋಟ ಅಣ್ಣನ ಕಡೆ ಹರಿಯಿತು.

"ಅರ್ಧ ಶತಮಾನದ ಹಿಂದೆ ಹಾಗಿದ್ದಿರಬಹುದು. ಆಗ ವಿದ್ಯೆ ಬುದ್ಧಿಗಳಿಲ್ಲದ ಕೆಲ ಇಂಗ್ಲಿಷರ ಗುಲಾಮರಾಗಿ ನರಳಿದ ಜನ. ಅನಾಗರಿಕರೆನಿಸಿಕೊಂಡವರು ಅರ್ಥಾತ್ ಅನಾಗರಿಕರೇ ಆಗಿದ್ದರು. ಈಗಿನದು ಹಾಗಲ್ಲ: ಧನ

ಸಂಸ್ಕಾರವಿಲ್ಲದಿದ್ದರೂ ವಿದ್ಯಾಸಂಸ್ಕಾರವಿದೆ. ಅಂದಿಗೂ ಇಂದಿಗೂ ಹೋಲಿಸಿದರೆ ಪರಿಸ್ಥಿತಿಯ ಅಂತರ ತಿಳಿಯುತ್ತದೆ. ಬರೀ ನಮ್ಮ ಪರಿಸರವನ್ನು ನೋಡಿಕೊಂಡರೆ ಏನಾದೀತು?" ನಿರ್ಮಲ ಪ್ರತಿವಾದನೆ ಹೂಡಿದಳು.

"ಅಂದಿಂದಿಗೂ ಬದಲಾವಣೆ ಹೊಂದಿರುವುದನ್ನು ಕುರಿತು ನಾನು ಹೇಳುತ್ತಿಲ್ಲ. ಒಟ್ಟಿನಲ್ಲಿ ಪ್ರಸ್ತುತ ಪರಿಸ್ಥಿತಿ ಅಷ್ಟು ಆಶಾದಾಯಕವಾಗಿಲ್ಲ"

ಪ್ರಸನ್ನ ವಿಚಲಿತನಾಗಲಿಲ್ಲ. ವಿಷಯಗಳೆಲ್ಲಾ ತನ್ನನ್ನೇ ಕುರಿತು ಹೇಳಿದಂತೆ ಭಾಸವಾಗಿ ಮನವನ್ನು ಮುಳ್ಳಿನಂತೆ ಕುಟುಕಿದುವು. ಒಂದೆರಡು ಘಳಿಗೆ ಯೋಚಿಸಿ ನೋಡಿ ಯಾವ ಬಗೆಯ ಉತ್ಸಾಹವನ್ನೂ ತೋರದೆ ಗಂಭೀರನಾಗಿ–ಹೊಳಪುಗಣ್ಣುಗಳಿಂದ ನಿಟ್ಟಿಸುತ್ತ ಹೇಳಿದ,

"ಅವರ ಬಗ್ಗೆ ನೀವೇನು ತಿಳಿದುಕೊಂಡಿದ್ದೀರೋ ಅದನ್ನೇ ಅವರೂ ತಿಳಿದುಕೊಂಡಿರುತ್ತಾರೆ. ಅಂತಲೇ ಜನ ಜೀವನದಲ್ಲಿ ಸಾಮರಸ್ಯವಿರುವುದಿಲ್ಲ."

ನೋಟ ಮಡದಿಯ ಕಡೆ ಹರಿಯಿತು. ಅವಳ ಅಭಿಪ್ರಾಯಕ್ಕಾಗಿ ಕಿವಿಗಳು ನಿಮಿರಿದುವು.

ಅವಳು ಆಗಿನಿಂದ ಮಾತುಕತೆಯಲ್ಲಿ ಪಾಲ್ಗೊಂಡಿರಲಿಲ್ಲ. ಬಹಳ ಮಟ್ಟಿಗೆ ಮೊದಲು ಮನಸ್ಸೆಲ್ಲಾ ಕಾದಂಬರಿಯ ಮೇಲಿತ್ತೇನೋ. ಕೊನೆಯಲ್ಲಿ ಕಿವಿಗೊಟ್ಟಳಾದರೂ ವಿಷಯ ನಿಚ್ಚಳವಾಗಿ ಹೊಳೆದಿರಲಿಲ್ಲ, ಆದರೂ ಸಮಯೋಚಿತವಾಗಿ ಪತಿಯನ್ನು ಸಮರ್ಥಿಸುವಂತೆ ಮಾತನಾಡಿದಳು.

"ಯಾವುದೇ ವಿಚಾರವನ್ನು ಹೀಗೇ ಎಂದು ನಿರ್ಧರಿಸಿ ಹೇಳುವುದು ಹೇಗೆ? ಅವರವರ ವಿಚಾರ ಅವರವರ ನಿರ್ಧಾರಕ್ಕೆ ಬಿಡುವುದು ಒಳ್ಳೆಯದು. ನಮ್ಮ ನಮ್ಮ ಬಿಡುವಿನ ವೇಳೆಯನ್ನು ಪುಸ್ತಕ ಪ್ರಪಂಚಕ್ಕೆ ವಿನಿಯೋಗಿಸುವುದು ಮತ್ತೂ ಲೇಸು!"

ವಿಷಯ ನಿರೂಪಣೆ ಸತ್ಯವೇ ಆಗಿದ್ದರೂ ಮನೋರಂಗವನ್ನು ಸೂಜಿಗೆಯಂತೆ ಹೊಕ್ಕಿತು. ನಿರ್ಮಲ ಒಮ್ಮೆ ತತ್ತರಿಸಿ ಹೋದಳು. ಮುಖಭಾವ ಬಹಳ ಗಂಭೀರವಾಯಿತು. ಪ್ರಸನ್ನ ಅಕ್ಕನ ಮನೋಭಿಪ್ರಾಯವನ್ನು ತಿಳಿಯಲು ಅವಳೆಡೆಗೆ ನೋಟವನ್ನು ಹರಿಸಿದ. ಆದರೆ ಅವಳ ನೋಟ ಬೇರೆಡೆಗೆ ಹರಿದಿತ್ತು. ಸ್ವಲ್ಪಹೊತ್ತು ಸುಮ್ಮನಿದ್ದು ಅನಂತರ ಮೌನಿಯ

ಕಡೆ ತಿರುಗಿ ತಲೆಯಲ್ಲಾಡಿಸುತ್ತ "ನೀನು ಹೇಳಿದ್ದು ಸರಿ....ಆದರೆ...."

"ಆದರೆ....ಏನು ?"

"ಹಾಗೆ ಎಲ್ಲವನ್ನೂ ಅವರವರಿಗೇ ಬಿಟ್ಟು ಬಿಡುವುದಕ್ಕೂ ಆಗುವುದಿಲ್ಲ ಮೋಹಿನೀ, ನಾನಾ ವಿಚಾರಗಳನ್ನು ಬೆದಕಿದರೇನೇ ನಮ್ಮ ಮನೋ ವಿಕಾಸ ವಾಗಬೇಕಾದರೆ...."

ನಿರ್ಮಲೆಯ ಧ್ವನಿ ಎದೆಯಾಳದಿಂದ ಹರಿದು ಬಂತು. ಕಣ್ಣುಗಳಲ್ಲಿ ಮಿಂಚುತಿದ್ದ ಸಮಯಸ್ಫೂರ್ತಿಯುತ ಮಿಂಚು ದರ್ಶನೀಯವಾಗಿತ್ತು.

ಮೋಹಿನಿ ಮಾತಾಡಲಿಲ್ಲ. ನೋಟ ಹೊರ ಜಗತ್ತಿನಲ್ಲಿ ನೆಟ್ಟಿತ್ತು.

೯

....ಭಕ್ತಿ ಸಮುಜ್ವಲ ವಾತಾವರಣ ಆನಂದಾಶ್ರುವಿನಿಂದ ಸಿಕ್ತವಾದಂತೆ ತಂಪು ತಳೆದಿತ್ತು.

....ಜಾನಕಿ ದಿನಚರಿಯನ್ನು ಮುಗಿಸಿದಾಗ ಹೊತ್ತು ಇನ್ನೂ ಹತ್ತರ ಅಂಚನ್ನು ದಾಟಿರಲಿಲ್ಲ.

ಇಂದು ರಜೆಯಿದ್ದುದರಿಂದ ವಿಮಲ ಮನೆಯಲ್ಲೇ ಉಳಿದಿದ್ದಾಳೆ. ಶಾಂತ ಸಮೃದ್ಧ ವಾತಾವರಣದಲ್ಲಿ ಕುಟೀರ ತಣ್ಣಗಿತ್ತು. ವಿಮಲ ಬೀರುವಿನಲ್ಲಿ ಪುಸ್ತಕಗಳನ್ನು ಜೋಡಿಸುತ್ತ ನುಡಿದಳು,

"ಬೆಳಗಿನ ಹೊತ್ತು ಇಬ್ಬರು ಉಪಾಧ್ಯಾಯಿನಿಯರು ರಜೆ ತೆಗೆದುಕೊಂಡುದುದರಿಂದ ನಮಗೆ ಈಗ ರಜೆ. ಮಧ್ಯಾಹ್ನ ಕಾಲೇಜಿಗೆ ಹೋಗುವೆ."

"ಓ....ಹಾಗೇನೂ ? ನಾನು ಪೂರ್ತಿದಿನ ರಜೆ ಎಂದುಕೊಂಡಿದ್ದೆ." ಎಂದ ಜಾನಕಿ ಒಂದು ಘಳಿಗೆ ತಡೆದು ಮುಂದುವರಿದಳು "ಹಗಲೆಲ್ಲ ಒಬ್ಬಳೇ ಇದ್ದೂ ಇದ್ದೂ ಬೇಸರವಾಗಿದೆ. ಹೀಗೆ ಎಲ್ಲರಿಗೂ ಒಮ್ಮೊಮ್ಮೆ ರಜೆ ದೊರೆತಿದ್ದರೆ ಅನುಕೂಲವಾಗುತಿತ್ತು."

ವಿಮಲ ಮುಗುಳು ನಕ್ಕಳು.

ತಾನು ಹೊರಡುವ ಮುಂಚೆ ಬೀರುವನ್ನು ಕೊಡಹಿ ಬೇಕು-ಬೇಡದ ಪುಸ್ತಕಗಳನ್ನು ಬೇರ್ಪಡಿಸಿ ಹೊಂದಿಸಿಡುವುದರಲ್ಲಿ ನಿಮಗ್ನಳಾದ ಅವಳಿಗೆ

ನಿರಾಮವಾಗಿ ಮಾತಾಡುವಷ್ಟು ಸಮಯವಿರಲಿಲ್ಲ. ಅತೀವ ದುಃಖ ಜೀವನದಿಂದ ಅಕಾಲವೃದ್ಧಳಾದ ತಾಯಿಯ ಆಶಾಭಾವನೆಯನ್ನು ನಿರ್ಲಕ್ಷಿಸುವುದು ಸಾಧ್ಯವಾಗಲಿಲ್ಲ. ಪುಸ್ತಕಗಳನ್ನು ಹೊಂದಿಸುತ್ತ,

"ಮನೆಯಲ್ಲಿ ಒಬ್ಬರೇ ಇರುವುದು ನಿಜವಾಗಿಯೂ ಬೇಸರ ಅಲ್ಲವೇ?"

"ಕೆಲವು ದಿನ ಇದ್ದು ನೋಡು!"

"ನೀವು ಈಗಲೇ ಏನಾದರೊಂದು ಕೆಲಸ ಹಿಡಿಯಬಹುದಾಗಿತ್ತು."

ತಾಯಿ ನಕ್ಕು ನುಡಿದಳು "ಸರಿ; ಅಷ್ಟಾದರೂ ಯೋಚಿಸಿದೆಯಲ್ಲ."

"ನೀವು ಎಲ್ಲೂ ಹೊರ ಹೋಗುವುದೇ ಇಲ್ಲ. ಸಾಯಂಕಾಲದ ಹೊತ್ತು ಆಶ್ರಮದ ಕಡೆಯಾದರೂ ಹೋಗಿ ಬಂದರೆ ಒಳ್ಳೆಯದು."

ಆ ಮಾತಿಗೆ ಸ್ವಾಮಿನಿ ಉತ್ತರಿಸದೆ ಮನವನ್ನು ದೃಢಪಡಿಸಿಕೊಳ್ಳುತ್ತ ಸ್ವಲ್ಪ ಹೊತ್ತು ನಿಂತು ನೋಡಿದಳು. ಅವಳ ಕಾರ್ಯಚಟುವಟಿಕೆ ಗಮನ ಶಕ್ತಿಯನ್ನು ಗತಕಾಲದೆಡೆಗೆ ಹರಿಯಬಿಟ್ಟಿತು....ಅಂದಿಂದಿಗೂ ತನ್ನ ಜೀವ ನಾಲ್ಕು ಗೋಡೆಗಳ ಮಧ್ಯೆ ಬಂದಿಯಾಗಿಯೇ ಉಳಿದಿತ್ತು. ನವಜೀವನದ ರೂಪುರೇಷೆಗಳನ್ನು ಬದುಕಿಗೆ ಅಳವಡಿಸಿಕೊಳ್ಳುವ ಸಾಧ್ಯತೆ ದೂರವಾಗಿದ್ದ ಆ ಪ್ರಸಂಗದಲ್ಲಿ ಪಕ್ಷಿನೋಟವನ್ನು ಹೊರಳಿಸಿ ಭಾರವಾದ ಧ್ವನಿಯಲ್ಲಿ ಚಿತ್ರಿಸಿದಳು "ನನ್ನ ಜೀವಮಾನವೆಲ್ಲ ಇದೇ ರೀತಿ ಕಳೆದಿದೆ. ಇನ್ನೇಕೆ ಹೊಸ ರೀತಿಯ ಗೀಳು? ನನ್ನ ಪಾಲಿಗೆ ಬಂದಿದ್ದರಲ್ಲಿ ಸಂತೃಪ್ತಿ ಹೊಂದಿದ ದಾಯಿತು."

ಆ ಮಾತುಗಳಿಂದ ವಿಮಲೆಯ ಶರೀರ ಮತ್ತು ಅಂತರಂಗಗಳು ಭಕ್ತಿಯಿಂದ ತುಳುಕಿದರೂ ತಟ್ಟ ಜೋಗುಳ ಹಾಡಿದಂತೆ ಸ್ತಬ್ಧವಾದುವು. ಸಮಸ್ತ ಪ್ರಕೃತಿ ಜಾಗೃತಾವಸ್ಥೆಯಲ್ಲಿರುವಾಗ ಮುಗ್ಧಭಾವದ ಮಾತೃಕೆಯರ ಅಂತರಾಳದ ಅತುಲ ಮಾರ್ದವತೆ ಒಮ್ಮೆಗೇ ಘುತ್ತೆಂದು ಎದುರು ನಿಂತಂತಾಯಿತು. ವಿಮಲ ಸಾಂತ್ವನಗೈಯ್ಯುವ ರೀತಿಯಲ್ಲಿ ಕೇಳಿದಳು "ಸರಿ ಬಿಡಿ; ಈಗಲೇ ಅಷ್ಟೊಂದು ನಿರಾಸಕ್ತಿ?"

"ಅಲ್ಲದೆ ಇನ್ನೇನಿದೆ ಈ ಜೀವನದಲ್ಲಿ?"

"ಹಾಗೆಂದರೆ ಹೇಗೆ? ಅಣುತೃಣಗಳೂ ಅದ್ಭುತವಾದ ಮಹತ್ತನ್ನು ಪಡೆಯುತ್ತವೆ. ಅಂದಮೇಲೆ ಮಾನವತೆಗಿಲ್ಲವೇ? ಯೋಚಿಸಿನೋಡಿ."

"ಇರಬಹುದು, ಆದ...."

ವಿಮುಲ ಮುಂದೆ ಮಾತಾಡಗೊಡಿಸದಂತೆ ನಡುವೆ ಬಾಯಿ ಹಾಕಿದಳು, "ನೀವು ಪತ್ರಿಕಾ ಪ್ರಪಂಚದಿಂದಲೂ ದೂರ. ಯಾವುದೇ ಚಟುವಟಿಕೆ ಜೀವನಕ್ಕೆ ಹುರುಪು ಕೊಡುತ್ತದೆ."

"ಪತ್ರಿಕೆಗಳನ್ನು ಓದಿ ಅದರಲ್ಲಿನ ಇಷ್ಟಾನಿಷ್ಟಗಳನ್ನು ಜೀರ್ಣಿಸಿ ಕೊಂಡು ದೇಶವಿದೇಶಗಳ ವ್ಯವಹಾರದಲ್ಲಿ ನಮ್ಮ ತಲೆ ಕೆಡಿಸಿಕೊಳ್ಳುವುದು ನನ್ನಿಂದಾಗದು; ಸುತರಾಂ ಇಷ್ಟವಿಲ್ಲ."

ವಿಮುಲ ನಗುಮುಖದಿಂದ ಹೇಳಿದಳು.

"ಅದರಿಂದ ತಲೆಯೇಕೆ ಕೆಡಿಸಿಕೊಳ್ಳಬೇಕು ? ಆರಾಮವಾಗಿ ಹೊತ್ತು ಕಳೆಯಬಹುದು ; ನಮ್ಮ ನಮ್ಮ ಮಾರ್ಗಗಳು ಭಿನ್ನ ವಿಚ್ಛಿನ್ನವಾದರೂ ಧ್ಯೇಯ ಒಂದೇ ಅಮ್ಮಾ !"

"ನೀನು ತಪ್ಪಾಗಿ ಭಾವಿಸುತ್ತಿರುವೆ ಮಗಳೇ ! ಈ ವಿಚಿತ್ರ ವಿಶ್ವ ಜಗತ್ತಿನಲ್ಲಿ ಜೀವನಧ್ಯೇಯ ಏನೆಂಬುದು ಕೊನೆಯವರೆಗೂ ತಿಳಿಯುವುದಿಲ್ಲ; ಮುಖ್ಯವಾಗಿ ಸಾಧ್ಯಾಸಾಧ್ಯತೆ ನಮ್ಮ ಕೈಯಲ್ಲಿದ್ದರಷ್ಟೆ ?"

ಆ ಕಮನೀಯ ಕಠೋರ ಹಾಸ್ಯವನ್ನು ಕೇಳಿ ಪ್ರಕೃತಿಯೇ ಸ್ತಬ್ಧ ಗೊಂಡಂತಾಯಿತು.

ವಿಮಲೆಯ ಮತ್ಸ್ಯನಯನಗಳಲ್ಲಿ ಒಮ್ಮೆಲೇ ಮಿಂಚಿನಂತಹ ಬೆಳಕು ಮೂಡಿತು. ಚೆಂದುಟಿಗಳಲ್ಲಿ ಎಳೆನಗುವಿನ ಚೆಲುವನ್ನು ಮೂಡಿಸಿ ನುಡಿದಳು. "ಓ....! ಆ ಕಟುಸತ್ಯ ಇದೀಗ ಹೊಳೆಯಿತು ಅಮ್ಮಾ !"

"ರಮಣಿಯ ಕರ್ತವ್ಯವನ್ನು ಯಾವ ಮಾರ್ದವತೆ ನಿರಾತಂಕವಾಗಿ ಮುನ್ನಡೆಸುವುದೋ, ಯಾವ ಮೃದುತ್ವ ಮತ್ತು ಅಂತಃಸತ್ವ ಹಿಂದುಮುಂದು ನೋಡಲು ಅವಕಾಶ ಕೊಡುವುದಿಲ್ಲವೋ, ಅದೇ ಜ್ಯೋತಿವೆತ್ತು ಎಲ್ಲಾ ಕ್ಷೇತ್ರಗಳಲ್ಲೂ ಉದಾಸೀನವನ್ನು ಧೂಳುಪಾಲು ಮಾಡಿ ಸಾಮರಸ್ಯವನ್ನು ಮೂಡಿಸುತ್ತದೆ. ಅಂತಲೇ ಎಂಥ ವಿಕಟ ವಿಪ್ಲವ ಸನ್ನಿವೇಶದಲ್ಲೂ ಸ್ತ್ರೀತ್ವಕ್ಕೆ ಸಾವಿಲ್ಲ !"

"ನಿಜ ...ಆಳವಾಗಿ ಯೋಚಿಸಿ ನೋಡಿದರೆ ಎಲ್ಲಕ್ಕಿಂತಲೂ ಉನ್ನತ ವಾದುದು ಕರ್ತವ್ಯವೊಂದೇ. ಕರ್ತವ್ಯದಲ್ಲಿ ಲೋಪವುಂಟಾದರೆ ಯಾವುದೂ

ಇಲ್ಲ. ಅಂತಲೇ ಜೀವನ ಸಂವೃದ್ಧಿ ಹೊಣೆಗಾರಿಕೆಯು ಮೇಲೆ ನಿಂತಿವೆ. ಎಂಬುದು ಇದೀಗ ಅರ್ಥವಾಯಿತು." ಎಂದಳು ವಿಮಲ, ಮುಖಬಿಂಬ ನಿರ್ವ್ಯಾಂಜ್ಯಭಾವನೆಯ ನಿಜಖಳೆಯಿಂದ ಬೆಳಗುತ್ತಿತ್ತು.

ಜಾನಕಿಯು ಮಗಳ ಕೆಲಸದಲ್ಲಿ ನೆರವಾಗುತ್ತ ಅಂತರ್ಮುಖಿಯಾಗಿ ಜೀವಮಾನದ ಪಾವಟಿಗೆಗಳತ್ತ ನೋಡತೊಡಗಿದಳು. ಪತಿ ರಾಮರಾಯ ಜೀವಿತ ಕಾಲದಲ್ಲಿ ಹರೆಯದ ಅಂಚನ್ನು ದಾಟದಿದ್ದ ಮಡದಿಯನ್ನು ಕುರಿತು ಅಂದಿದ್ದ,

"ಈ ಜೀವನ ಏನು ಎಂಬುದನ್ನು ಅರಿತುಕೊಳ್ಳುವ ಮೊದಲೇ ಜೀವನಕ್ಕೆ ಕಾಲಿಟ್ಟೆವು. ಎಲ್ಲವೂ ಮಕ್ಕಳಾಟದಂತೆ ನಡೆದುಹೋಯಿತು. ಪೂರ್ವಾರ್ಧಕ್ಕಿಂತಲೂ ಉತ್ತರಾರ್ಧ ಕ್ಲಿಷ್ಟ. ಅದನ್ನು ಬಹಳ ಜಾಗ್ರತೆಯಿಂದ ನಡೆಸಿಕೊಳ್ಳಬೇಕು."

"ಹೌದು" ಎಂಬಂತೆ ತಲೆದೂಗಿದಳು ಅವಳು. ಚಿತ್ತ ದೂರ ಭವಿಷ್ಯದಲ್ಲಿ ಅಂಡಲೆಯತೊಡಗಿತು,

"ನನಗಾಗ ಏನೂ ತಿಳಿಯುತ್ತಿರಲಿಲ್ಲ. ಹಿರಿಯರ ಮಾತಿಗೆ ಮಣಿದೆ."

"ಬಿಡಿ; ಈಗ ಅದೆಲ್ಲ ಏಕೆ? ದುಃಖತಾಪಗಳು, ಕರ್ತವ್ಯಬಾಧ್ಯತೆಗಳು ನಿಮಗೆ ಮಾತ್ರವಿಲ್ಲ; ನಮಗೂ ಇವೆ. ಈ ವಿಷಯವನ್ನು ನೀವು ಯಾವಾಗಲೂ ಮರೆತುಬಿಡುವುದರಿಂದ ಪರಿತಾಪವನ್ನು ಹೆಚ್ಚಿಸಿಕೊಳ್ಳುತ್ತೀರಿ! ನಾವು ಎಲ್ಲಾ ದುಃಖವನ್ನು ನುಂಗಿಕೊಂಡು ನಗುನಗುತ್ತಿರುತ್ತೇವೆ ನಮ್ಮ ದೇಶದ ಸ್ತ್ರೀ ಜಾತಿಗೆ ಅದೊಂದು ವರ....!"

ವಾಕ್ಸರಣಿ ಎದೆಯಾಳದಿಂದ ಹರಿದುಬಂತು. ಮುಖಭಾವ ಗಂಭೀರವಾಗಿತ್ತು ತನ್ನ ಜನ್ಮ ಸಾರ್ಥಕತೆಯಲ್ಲಿ ಆಕೆ ಜೀವನ ಶೈಥಿಲ್ಯವನ್ನು ಎಂದೂ ಕಂಡಿರಲಿಲ್ಲ... ಆ ಊಹೆ ಸಹ ಆಕೆಗೆ ಉಂಟಾಗಿರಲಿಲ್ಲ. ರಾಗಪೂರ್ಣವಾಗಿ ಬೆಳಗಿಸಿದ ಜೀವನ ಜ್ಯೋತಿ ಅಪ್ರಕಾಶಿತವಾದರೂ ಕುಡಿಕಟ್ಟದಂತೆ ಉರಿದಿತ್ತು.

ರಾಮರಾಯ ಮಡದಿಯ ಮಾತನ್ನು ಗಂಭೀರ ಗಮನದಿಂದ ಕೇಳಿದ.

ತಿಲಕಯುಕ್ತ ಲಲಾಟದ ಮೇಲೆ ತುಂತುರು ತುಂತುರಾಗಿ ಮೂಡಿದ ಶ್ರಮಬಿಂದುಗಳು ಗಣನೀಯ ಆಶ್ವಾಸನೆಗೆ ಸಾಕ್ಷಿಯಾಗಿದ್ದುವೋ... ಏನೋ.

ಗತಜೀವನದ ಯಾವುದೋ ಒಂದು ಅಸ್ಪಷ್ಟ ಸ್ಮೃತಿ ಚಿತ್ತಭಿತ್ತಿಯಲ್ಲಿ ಸುಳಿದಳಿಯಿತು. ಒಡನೆ ಮಡದಿಯ ಕಡೆ ನೋಟ ಹರಿಸಿದ, ಆ ಚಂಚಲ ನೇತ್ರಗಳಲ್ಲಿ ಜೀವನಜ್ಯೋತಿ ಬೆಳಗುತಿತ್ತು; ತುಟಿ ನಸುಕಂಪಿಸುತಿತ್ತು. ಗೃಹಲಕ್ಷ್ಮಿಯ ಅದ್ಭುತ ಹೊಣೆಗಾರಿಕೆಯ ಅಜ್ಞಾತ ರಹಸ್ಯವನ್ನು ಯಾರೋ ವ್ಯಕ್ತಪಡಿಸಿದಂತೆ ಆತನಿಗೆ ತೋರಿಬಂತು. ಸ್ವಲ್ಪಹೊತ್ತು ಯೋಚಿಸುತ್ತ ಕುಳಿತಿದ್ದು ಘನ ಗಾಂಭೀರ್ಯದಿಂದ ನುಡಿದ, “ಯಾವ ಸಾಮಾಜಿಕ ತಳ ಹದಿಯ ಮೇಲೆ ಈ ಜೀವನ ರೂಪಿತವಾಗಿಯೋ ಅದರ ರೂಪುರೇಷೆಯನ್ನು ವಿವರಿಸಿದರೆ ತಿಳಿದುಬರುವ ಅನುಬಂಧದ ಮೂರ್ತರೂಪ ಪುರುಷಾರ್ಥ. ಆದರೂ, ನಿಮ್ಮ ಹೊಣೆಗಾರಿಕೆ ಅಲ್ಪ ಎಂದು ನಾನೆನ್ನುವುದಿಲ್ಲ. ಜೀವನ ಬಂಧ ಒಂದಕ್ಕೊಂದು ಕೊಂಡಿ ಹೆಣೆದಿದೆ.”

“ಅಂದಮೇಲೆ....?”

“ಆದರೂ ಸಹ....” ಎಂದ ರಾಮರಾಯ ಒಂದು ಘಳಿಗೆ ತಡೆದು ತೀವ್ರ ಯೋಜನಾಭಂಗಿಯಲ್ಲಿ ಮುಂದುವರಿದ “ಇಲ್ಲಿ ಕೇಳು; ನೀನು ನಾಲ್ಕು ಗೋಡೆಗಳ ಮಧ್ಯೆ ಕಾರ್ಯ ನಿರ್ವಹಿಸಬಲ್ಲೆ....ಹೊರಗಡೆಯ ವ್ಯವಹಾರ....? ಅದೇನು ಸಾಮಾನ್ಯವಲ್ಲ.”

“ಇರಲಿ, ಅಷ್ಟಕ್ಕೆ ಅವಕಾಶವೇ ಇಲ್ಲದ ಮೇಲೆ ಮಾತಾಡುವುದರಿಂದ ಏನು ಪ್ರಯೋಜನ?”

“ಅದು ಸರಿಯೆ....”

“ಹಿಂದೂಸ್ಥಾನದಲ್ಲಿ ಸ್ತ್ರೀ ಜೀವನದ ಮೇಲೆ ಲಕ್ಷ್ಯವೇ ಇಲ್ಲ....ನಮ್ಮ ಜೀವನವೊಂದು ಜೀವನವೇ?....”

ರಾಮರಾಯ ಮುಗುಳುನಗೆ ಬೀರಿ ಅಂದ,

“ನೀನು ಅಷ್ಟು ತಿಳಿದುಕೊಂಡಿದ್ದೀಯಲ್ಲ, ಅದೇ ಆಶ್ಚರ್ಯ!”

“ಯಾರು ತಿಳಿದುಕೊಂಡಿಲ್ಲ....? ಎಲ್ಲರೂ ತಿಳಿದುಕೊಂಡಿದ್ದಾರೆ. ಆದರೆ, ಅಬಲತೆ ಎಲ್ಲಕ್ಕೂ ಶರಣಾಗುತ್ತದೆ....!”

ವಿಷಣ್ಣಭಾವದಿಂದ ನುಡಿದಳು ಮಡದಿ. ತುಟಿಗಳಲ್ಲಿ ನೀರಸ ನಗೆ ಕ್ಷಣಕಾಲ ಮಿನುಗಿ ಮಾಯವಾಯಿತು. ಆಂತರಿಕ ವಿಷಾದ ಪ್ರಕರಣ ಮುಖ ಬಿಂಬದಲ್ಲಿ ದಪ್ಪ ದಪ್ಪ ಅಕ್ಷರಗಳಲ್ಲಿ ಅಚ್ಚೊತ್ತಿತು.

"ಅದೇನು ಅಪಮಾನವೇ....?" ಪ್ರಶ್ನೆ ಆಶ್ಚರ್ಯಯುಕ್ತವಾಗಿತ್ತು.

"ಅಪಮಾನ....ಉಪೇಕ್ಷೆ...ದೌರ್ಜನ್ಯ... ಇನ್ನೂ ಏನೇನೋ ಇವೆ. ಹೆಸರಿಸುವುದೇ ಬೇಸರ. ಎಲ್ಲವೂ ತೆರೆಯಮರೆಯಲ್ಲಿ....ಅಜ್ಞಾತ ವೇದನೆಯಲ್ಲಿ ಅಡಗಿರುವುದೇ ಒಂದು ಜೀವನ ವಿಶೇಷ!"

"ಹಾಗಲ್ಲ....ಸ್ತ್ರೀ ಜೀವನದ ಪಾವಿತ್ರ್ಯ...? ಮುಖ್ಯವಾಗಿ ಅದನ್ನೇ ಮರೆತುಬಿಟ್ಟಿದ್ದೀಯೆ! ಎಂಥ ಆಶ್ಚರ್ಯ....ಅದೇನು ಸಾಮಾನ್ಯವೇ?"

"ಸರಿ; ಅಧಿಕಾರವ್ಯಾಮೋಹಕ್ಕೆ ಇದೊಂದು ನೆವ!"

"ನಿನ್ನ ಕಲಿಕೆ ವ್ಯರ್ಥವಾಗಿಲ್ಲ ಬಿಡು!"

ಮಡದಿ ಶಾಂತಮುಖಿಯಾಗಿ ಮುಗುಳು ನಕ್ಕಳು.

ಆ ಚಿತ್ರ ಸ್ಮರಣೆಯ ಹಾದಿಯಲ್ಲಿ ಸಾಗಿ ಹೋದಾಗ ಅನಿರೀಕ್ಷಿತವಾಗಿ ಕಣ್ಣುಗಳಲ್ಲಿ ರಂಗು ಮೂಡಿತು.

ಬಾಳ್ಗುಡಿಯನ್ನು ಕಟ್ಟಿದ್ದು ಸಂಪ್ರದಾಯದ ಅಡಿಗಲ್ಲಿನಮೇಲೆ. ತದೇಕದೃಷ್ಟಿಯಿಂದ ಬಾಳ್ಬಟ್ಟೆಯ ಎಳೆಎಳೆಗಳು ರೂಪುಗೊಂಡಿವೆ. ಇನ್ನು ಅದಕ್ಕಿಂತ ತಾನು ಸಾಧಿಸಬೇಕಾದುದು ಏನೂ ಉಳಿದಿಲ್ಲ ಎಂಬಷ್ಟು ಸಮಾಧಾನ. ಮೇಲಾಗಿ, ಈ ಜೀವನದ ಜಂಝಾಟದಲ್ಲಿ ಅಷ್ಟು ಮಾತ್ರ ನಡೆದಿರುವುದೂ ವಿಶೇಷವೇ....ಎನಿಸದೆ ಇರಲಿಲ್ಲ. ಆ ಆಲೋಚನೆಯಿಂದ ಜಡವಾದ ಚೇತನದೊಂದಿಗೆ ಶರೀರವೂ ಜಡವಾಗುತ್ತಿರುವಂತೆ ಭಾಸವಾಯಿತು. ಏನೋ ಒಂದು ರೀತಿಯಲ್ಲಿ ಮಂತ್ರಿತಳಂತೆ ಸುಮ್ಮನೆ ಕುಳಿತಿದ್ದು ಅನಂತರ ಹೇಳಿದಳು,

"ನಾವೇನೋ ಬಯಸುತ್ತೇವೆ, ಅದೇನೋ ಆಗುತ್ತದೆ. ಆದರೆ, ಹಾಗೆಂದು ಯಾವುದನ್ನೇ ಆಗಲಿ ವರ್ಜಿಸುವುದಕ್ಕಾಗುವುದಿಲ್ಲ. ಹೇಗೋ ಹಾಗೆ ಸರಿ ಹೊಂದಿಸುವುದೇ ಜೀವನ ಧರ್ಮ. ಈ ಶಿಷ್ಟಾಚಾರದಲ್ಲಿ ನಾವು ಕಲಿತ ಮಡಿ–ಮೈಲಿಗೆ ಅಂತಹ ಉಪಯೋಗಕ್ಕೇನೂ ಬರುವುದಿಲ್ಲ........ಎಂಬುದು ನನಗೆ ಈಗೀಗ ಅರ್ಥವಾಗುತ್ತಿದೆ. ಅದರಿಂದ ಸುಮ್ಮನೆ ಆಸೆ-ನಿರಾಸೆಗಳಲ್ಲಿ ತೊಳಲುವುದಷ್ಟೆ"

ಆ ಮಾತಿನಲ್ಲಿ ವ್ಯಂಗ್ಯವಾಗಲೀ ಅಥವಾ ಅಶ್ರದ್ಧೆಯಾಗಲೀ ಇರಲಿಲ್ಲ. ಏನೋ ಒಂದು ರೀತಿಯ ಸಹಜ ಅನುಭಾವದ ಅಲೆಗಳು ಮುಖಮುದ್ರೆಯಲ್ಲಿ ಸುಳಿಸುಳಿದಳಿಯುತಿದ್ದುವು.

" ಇದೀಗ ನೀವು ಹೇಳಿದ್ದು ಸರಿ. " ಎಂದಳು ವಿಮಲ.

ಕೆಳಸರಿದಿದ್ದ ಉತ್ತರೀಯವನ್ನು ಸರಿಪಡಿಸಿಕೊಂಡು ತದೇಕಧ್ಯಾನದಿಂದ ಮುಂದುವರಿದಳು ತಾಯಿ, " ನಾವು ಉರಿಸುವ ಜೀವನ ಜ್ಯೋತಿಯಮೇಲೆ ಸದಾ ಪರಮಲಕ್ಷ್ಯವಿಡುವುದರಿಂದ ಆತ್ಮಜ್ಯೋತಿಗೆ ತೈಲವೆರೆಯಲು ಕಿಂಚಿತ್ತೂ ಸಮಯವಿರುವುದಿಲ್ಲ... ಅದು ಮಾತ್ರವಲ್ಲ ಮಗೂ, ತೈಲವೂ ಸಹ ಅದಕ್ಕಾಗಿ ಉಳಿಯುವುದಿಲ್ಲ. ಅಂತಲೇ ಭಾರತದೇಶದ ಸ್ತ್ರೀಜಾತಿಯ ಮೌಲ್ಯ ಕಿರಿದಾಗಲು ಕಾರಣ.... ಈಗಿನ ವಾತಾವರಣಕ್ಕನುಗುಣವಾಗಿ ಉಜ್ವಲವಾದ ನವಕಾಂತಿಯನ್ನು ಸೃಷ್ಟಿಸಿಕೊಂಡು ಹೊಸಪಥವನ್ನು ಹಿಡಿಯುವೆನೆಂಬ ಕೆಚ್ಚು ಮೂಡಿದರೂ ಮೂಡಬಹುದು. ಆದರೆ....ಜೀವನ ಕ್ಷೇತ್ರ ಬಹಳ ವಿಶಾಲವಾದುದು. ಎಲ್ಲಾ ಕಡೆಯಲ್ಲೂ ಎರಡೂ ಹಸ್ತಗಳ ಸಹಕಾರ ದೊರೆಯುತ್ತೆ ಎಂಬುದು ಅಷ್ಟು ಸರಾಗವಲ್ಲ. ಎಲ್ಲಾ ಹೆಜ್ಜೆ ಹೆಜ್ಜೆಯೂ ಕಷ್ಟನಷ್ಟಗಳ ಸಾಲು. ಏನು ಮಾಡೋಣ? ಭವಸಾಗರ ಹರಿಯುವುದೇ ಊರ್ಧ್ವಮುಖವಾಗಿ, ಆದರೇನು? ಎಲ್ಲೆಲ್ಲಿ ತಂಗಬೇಕೋ ಅಲ್ಲಲ್ಲಿ ತಂಗಲೇಬೇಕು. ಅದು ಪ್ರಕೃತಿ ನಿಯಮ."

ಪ್ರಾಸಂಗಿಕವಾಗಿ ವಾಕ್ಯಸಲಿಲಧಾರೆ ಹರಿದರೂ ಏನೋ ಒಂದು ರೀತಿಯ ಭಾವಾತಿರೇಕ ಆಕೆಯಲ್ಲಿ ಕಾಣಿಸುತಿತ್ತು. ಕಾಂತಿಹೀನವಾದ ಕಣ್ಣುಗಳಲ್ಲಿ ಎಲ್ಲೋ ಅಲಕ್ಷಿತ ಕಾಂತಿ ತಟ್ಟನೆ ಬಂದು ನೆಲೆಸಿಂತಂತೆ ಉಜ್ವಲ ಕಾಂತಿಯಿಂದ ಬೆಳಗಿತು. ಜೀವನದಲ್ಲಿ ಅಂತಹ ಘಟಕಗಳು ಎಷ್ಟೋ ನಡೆದುಹೋಗಿವೆ. ಆದರೂ ಇದುವರೆಗೆ ಗಮ್ಯಸ್ಥಾನದ ನೆಲೆ ಎಲ್ಲಿದೆ ಎಂಬುದರ ಅರಿವಾಗಿಲ್ಲ. ಯಾವ ಅಜ್ಞಾತಶಕ್ತಿ ತನ್ನ ಪಾಶವೀ ಪ್ರವೃತ್ತಿಯಿಂದ ಎಲ್ಲರ ಮೇಲೆ ಅಧಿಕಾರ ಚಲಾಯಿಸುತ್ತಿದೆ ಎಂಬುದರ ಅರಿವು ಸಹ ಆಗುತ್ತಿಲ್ಲ. ಎಷ್ಟು ಯೋಚಿಸಿದರೇನು ? ಎಷ್ಟು ಚಿಂತಿಸಿದರೇನು ? ಯಾರ ಇಚ್ಛಾಶಕ್ತಿಯ ಮೇಲೆ ಜೀವನ ಆಧಾರಿತವಾಗಿದೆ ಎಂಬುದು ಕೂಡ ಅರ್ಥವಾಗುತ್ತಿಲ್ಲ.

ವಿಮಲ ಚೀರುವನ್ನು ಒರಿಸುತ್ತ ಮುಂದುವರಿದಳು,

"ಸಾಮಾನ್ಯ ಜನ ಇದನ್ನು ಯಾವ ರೀತಿ ಅರ್ಥೈಸುವರೋ ಹೇಳಲಾಗುತ್ತಿಲ್ಲ.... ನಾವು ಯಾವುದನ್ನು 'ಸಂಸ್ಕೃತಿ' ಎಂದು ತಿಳಿದುಕೊಂಡಿದ್ದೇವೋ ಅದರಲ್ಲಿ ಯಾವ ಹುರುಳೂ ಇಲ್ಲ ಎಂದೊಮ್ಮೆ ಅನಿಸುತ್ತದೆ. ಈ ದುಃಖಭರಿತ ಜೀವನದಲ್ಲಿ ಯಾವುದು ಸಂಸ್ಕೃತಿಗೆ ಆಧಾರವಾಗಿದೆಯೋ.....

ಅದು ಅಸ್ಪಷ್ಟ; ಗತಜೀವನದ ಸಂಸ್ಕಾರ ಅಂತಃಸ್ಥಲದ ಶುದ್ಧಾಶುದ್ಧಿಗೆ ಬದ್ಧವಾಗಿರಬಹುದು. ಒಳಿತು ಕೆಡಕುಗಳಿಗೆ ಆಧಾರವಾಗಿರಲೂಬಹುದು. ಅಂದಮೇಲೆ ನಮ್ಮ ಪ್ರಯತ್ನ ವ್ಯರ್ಥವೇ? ಎಂಬ ಪ್ರಶ್ನೆಯೂ ಏಳುತ್ತದೆ.... ನೀವೇನೆನ್ನುತ್ತೀರಿ?"

"ಇಂದು ಹಾಗೆನಿಸುವುದು ಸಹಜವೇ. ಆದರೆ.. ಅಂತಃಪಟಲದ ಮೇಲೆ ಅನೇಕ ವೇಳೆ ಗತಜೀವನದ ಮಧುರಾನುಭೂತಿಗಳು ಪ್ರತಿಫಲಿಸುತ್ತವೆ. ಅವುಗಳಿಂದ ಆಗ ನಾವು ಖಂಡಿತ ದೂರವಾಗಲಾರೆವು. ಅದರಿಂದ ಸಂಜನಿಸುವ ಆನಂದಾನುಭೂತಿ ಹೆಜ್ಜೆಯನ್ನು ದೂರ ಹಾದಿಗೆ ತಳ್ಳುತ್ತದೆ."

"ನಿಜ" ಎಂದುಕೊಂಡಳು ವಿಮಲ.

ಇಂದು ನಾರೀ ಜೀವನದ ಸಮಸ್ತ ಸುಖದುಃಖವನ್ನು ಒಮ್ಮೆಗೇ ಕಂಡುಕೊಂಡಂತೆ ಉದ್ಭಾಸಿತವಾಯಿತು. ಅದನ್ನು ತುಂಬಿಕೊಳ್ಳಲು ತನ್ನ ಪುಟ್ಟ ಅಂತರಂಗದಲ್ಲಿ ಸ್ಥಳವೇ ಸಾಲುತ್ತಿಲ್ಲ. ಮನೋಹರ ಮುಖಬಿಂಬದ ಸುತ್ತಲೂ ಅಂತರಂಗದಿಂದ ಕೋಡಿ ಹರಿದ ಜ್ವಾಲಾಪ್ರಭೆ ಜ್ವಲಿಸುತ್ತಿರುವಂತೆ, ಪೂರ್ಣ ಜ್ಞಾನಮಯಿಯಾಗಿ ಕಂಡಳು. ಆಗ ಅವಳ ಮುಖವನ್ನೇ ಒಂದೆರಡು ಕ್ಷಣ ನಿಟ್ಟಿಸಿದ ಜಾನಕಿ ಆನಂದಮುಖಿಯಾಗಿ ನುಡಿದಳು,

"ನೀನಿನ್ನೂ ಜೀವನರಂಗಕ್ಕೆ ಪದಾರ್ಪಣೆ ಮಾಡದಿದ್ದರೂ ಮಾರ್ಗಯೋಗವನ್ನು ತಿಳಿದುಕೊಂಡಿರುವುದೇ ವಿಶೇಷ. ಅದು ಈ ದುಃಖಿತ ಹೃದಯಕ್ಕೆ ಒಂದು ರೀತಿಯ ಭರವಸೆ ಮೂಡಿಸುತ್ತದೆ."

"ಸರಿಹೋಯ್ತು! ನಾವು ಸೂತ್ರದ ಬೊಂಬೆಗಳು ಆಡಿಸುವವ ಬೇರೆ! ಎಂದು ನೀವೇ ಸಲಸಲಕ್ಕೂ ಹೇಳುತ್ತಿರುತ್ತೀರಿ!"

ವಿಮಲ ನಕ್ಕು ನುಡಿದಳು. ಅವಳ ಸಿಂಧೂರಯುಕ್ತ ಬೈತಲೆಯ ಮೇಲೆ ಹರಿವ ಅಲೆಗೂದಲು ತಂಗಾಳಿಗೆ ಅಲುಗುತಿದ್ದುವು. ನಿಶ್ಚಲ ನೇತ್ರಗಳ ಹೊಳಪು ಉಜ್ವಲವಾಗಿತ್ತು. ಆಂತರಂಗಿಕ ಸ್ವಾಭಾವಿಕತೆಯನ್ನು ಈಗ ಗ್ರಹಿಸಿದಳೇನೋ.... ಕಪೋಲಪಾಲಿ ಲಜ್ಜೆಯಿಂದ ರಕ್ತರಂಜಿತವಾಯಿತು.

೧೦

....ಪೂರ್ವ ಗಗನ ಮಂಚದಲ್ಲಿ ಸೂರ್ಯೋದಯವಾಗಿತ್ತು.

....ಅರುಣಕಿರಣಗಳು ವಿಜಯೋಲ್ಲಾಸದಿಂದ ಕೋಟಿ ಕೋಟಿ ವಿಭಜನೆಯಾಗಿ ಓಡೋಡಿ ಬರುತ್ತಿವೆ.

....ವಾತಾವರಣ ನಿತಾಂತ ಶಾಂತಿಯಿಂದ ಕೂಡಿ ಕಣ್ಮನಗಳನ್ನು ತಣಿಸುವಂತಿತ್ತು.

....ಅಸ್ಖಲಿತ ಮಧುರವಾಣಿಯಲ್ಲಿ ಪಕ್ಷಿಗಳ ಸುಪ್ರಭಾತ ಹೊಮ್ಮಿ ಮನಃಸೌಖ್ಯವನ್ನುಂಟುಮಾಡುವಂತಿತ್ತು. ಆ ಅನನ್ಯ ಅನುಪಮ ಶುಭೋದಯ ಯಾವ ದುರಂತಕ್ಕೆ ಪೀಠಿಕೆ ಹಾಕಿತ್ತೋ....

ಅದೊಂದು ಅಪೂರ್ವ ಸುಂದರ ಭಾನುವಾರ,

ಮಾಮೂಲಿನಂತೆ ಪ್ರಸನ್ನ ಮಡದಿಯೊಡನೆ ತನ್ನ ಮನೆಯ ಹಾದಿ ತುಳಿದಿದ್ದ. ರಾತ್ರಿಯ ಪೂರ್ಣ ವಿಶ್ರಾಂತಿ ಮನಃಪ್ರಾಣಗಳಿಗೆ ಮುದವನ್ನೀಡಿತ್ತು. ಟಾರು ಬಳಿದ ಕರಿಯ ರಸ್ತೆ ಕೊನೆಯಿಲ್ಲದಂತೆ ಹರಿದಿದೆ. ಎಲ್ಲೂ ಗಲಾಟೆ–ಗದ್ದಲವಿರಲಿಲ್ಲ. ಗಾಳಿ ಸೇವನೆಗಾಗಿ ಹೊರಟವರು ಅಲ್ಲಲ್ಲಿ ಕಾಣ ಸಿಗುತಿದ್ದರು. ಗೋವಳರು ಮನೆ ಮನೆಯಲ್ಲಿ ಹಾಲು ಹಿಂಡಲು ಹಸುವಿನೊಡನೆ ಸಾಗುತಿದ್ದರು– ತಾಪದಗ್ಧ ಒಡಲನ್ನು ಶೀತಲಗೊಳಿಸಲೋ ಎಂಬಂತೆ.

ಪ್ರಸನ್ನ ಏನೊ ಒಂದು ರೀತಿಯಲ್ಲಿ ಅಭಿಮಾನ ಪೂರ್ವಕವಾಗಿ ಅಂದ,

"ನಮ್ಮದು ಒಂದು ರೀತಿಯ ಯಾಂತ್ರಿಕ ಜೀವನ....ನಮಗೆ ಇದರಿಂದ ಇದುವರೆಗೆ ಶಾಂತಿ–ಸಮಾಧಾನಗಳು ದೊರೆಯಲೇ ಇಲ್ಲ."

"ಇನ್ನಾವ ಬಗೆಯ ಜೀವನದಲ್ಲಿ ತಾನೇ ಇದಕ್ಕಿಂತ ವಿಶೇಷವಿರುತ್ತೆ?" ಪ್ರಶ್ನೆ ಸರಳವಾಗಿತ್ತು, ಮೋಹಿಸಿ ಬೇಕೆಂತಲೇ ಕೇಳಿದಳು.

ಸ್ವಲ್ಪ ಹೊತ್ತು ಯೋಚಿಸಿ "ಈ ಪ್ರಶ್ನೆಗೆ ಸರಿಯಾದ ಉತ್ತರ ಹೇಳಬೇಕೆಂದರೆ ಪ್ರತಿ ಸಂಸಾರವನ್ನೂ ಹೊಕ್ಕು ನೋಡಬೇಕಾಗುತ್ತದೆ.... ಅಲ್ಲವೇ ?"

"ಹೊಕ್ಕು ನೋಡುವುದೇನು ? ಪಕ್ಷಿನೋಟ ಸಾಕು."

ಪ್ರಸನ್ನ ನೀಳವಾದ ನಿಟ್ಟುಸಿರು ಬಿಟ್ಟ. ಸ್ವಲ್ಪ ದೂರ ಹಾದಿ ಸದ್ದಿಲ್ಲದೆ ಸಾಗಿತು.

ಅನಂತರ ಹೆದ್ದಾರಿಯಿಂದ ಬಲಕ್ಕೆ ತಿರುಗಿ ವಾಮಮಾರ್ಗವನ್ನು ಹಿಡಿದು ಆಟದ ಬಯಲಿಗೆ ಕಾಲಿಟ್ಟಾಗ ಪ್ರಕೃತಿಯ ವಾಮಾಂಗದ ಮೇಲೆ ಗಗನಚುಂಬೀ ಕರ್ಪೂರ ವೃಕ್ಷಗಳ ನೆರಳು ತಣ್ಣಗೆ ಹಾಸಿತ್ತು. ಆ ವೃಕ್ಷಗಳ ತೈಲಗಂಪು ತಂಗಾಳಿಯೊಡನೆ ತೇಲಿ ಶೀತಹಾರಿಯಾಗಿ ದೈಹಿಕ ಭಾದೆಯನ್ನು

ನಿವಾರಿಸುವಂತಿತ್ತು.

"ನಿಜವಾಗಿಯೂ ಕರ್ಪೂರ ತೈಲಗಂಪು ಬಹಳ ಹಿತವಾಗಿದೆ." ಎಂದ ಳಾಕೆ.

"ಗರ್ಭಿಣಿಯರಿಗೆ ತುಂಬ ಒಳ್ಳೆಯದಂತೆ!" ಅವನು ಹಾಸ್ಯದ ಚಟಾಕಿ ಹಾರಿಸಿದ.

"ಸರಿ ಬಿಡಿ; ನಿಮಗೆ ತಮಾಷೆ; ನನಗೆ ಪ್ರಾಣಸಂಕಟ!"

ಆ ಪ್ರಕರಣ ಸಂತಸದ ಸರಳ ಸಲಿಲವನ್ನು ಹರಿಸಿ ಅಲ್ಲಿಗೆ ಮುಕ್ತಾಯ ಗೊಂಡಿತು.

ಉಳಿದ ಹತ್ತು ಮಾರು ಹಾದಿ ಕೆಲವು ಕ್ಷಣಗಳಲ್ಲಿ ಕರಗಿತು. ಮನೆಯ ಮೆಟ್ಟಿಲು ಹತ್ತುತಿದ್ದಾಗ ಮೊದಲು ತಾಯಿಯ ದರ್ಶನವೇ ಆಯಿತು. ಅವ ಳಾಗಲೇ ಉಪಹಾರ ತಯಾರಿಸಿದ್ದು ಕಾದಿದ್ದಳೇನೋ.... ತುಟಿಗಳಲ್ಲಿ ಊಹಿ ಸಲೂ ಆಗದಂತಹ ಎಳೆನಗು ಮೂಡಿ ಮಾಯವಾಯಿತು. ಉಪಹಾರಕ್ಕೆ ಕೈಹಚ್ಚಿದ ಮೇಲೆ ನಿರ್ಮಲ ಪ್ರಾಸಂಗಿಕವಾಗಿ ಕೇಳಿದಳು,

"ಏನಪ್ಪಾ, ನಾನ್ ಗೆಜೆಟೆಡ್ ನೌಕರರೆಲ್ಲ ಸಂಪು ಹೂಡಲು ತೀರ್ಮಾ ನಿಸಿ ಬಿಟ್ಟಿದ್ದಾರೆ....?"

"ಹೌದು! ಸಂಪು ಹೂಡದಿದ್ದರೆ ನಮಗೆ ಕಾಲಾನುಕಾಲವೂ ಕೈತುಂಬ ಕೆಲಸ; ಪಗಾರ ಇಷ್ಟೆ!"

"ಆದರೂ....ಈಗಲೇ ದುಡುಕಬೇಡಪ್ಪಾ!" ತಾಯಿ ನಡುವೆ ಬಾಯಿ ಹಾಕಿದಳು.

"ಸಾಂಘಿಕ ನೀತಿ ನಮ್ಮನ್ನು ಬಿಡುತ್ತದೆಯೇ?"

"ನಾಳೆ ಅದರಿಂದ ಉಂಟಾಗುವ ತೊಂದರೆಗಳಿಗೆಲ್ಲಾ ತಲೆಯೊಡ್ಡ ಬೇಕು!"

"ಹೌದು; ಹಿಂದುಳಿದರಾದೀತೆ?"

"ಪರಿಸ್ಥಿತಿ ಹದಗೆಟ್ಟರೆ ಸರಕಾರ ಸುಮ್ಮನೆ ಬಿಟ್ಟೀತೆ?"

"ಜೇಲು ಕಾಣಿಸುತ್ತೆ. ಕೆಲವು ಕಾಲ ಆರಾಮವಾಗಿ ಸರಕಾರದ ಅತಿಥಿ ಗಳಾಗಿದ್ದರೆ ಸೈ!"

"ಹೌದು! ನಮಗೂ ಸದಾ ಬಿಡುವಿಲ್ಲದೆ ದುಡಿದು ಸಾಕಾಗಿದೆ!" ದನಿಗೂಡಿಸಿದಳು ಮೋಹಿನಿ.

"ಅಷ್ಟೊಂದು ಸುಲಭವೇ ?"

"ನಮ್ಮ ರೀತಿ-ನೀತಿ ಬೇರೆಯವರದಕ್ಕಿಂತ ತೀರ ಭಿನ್ನವಾದುದು.... ನೋಡೋಣ."

"ನಿಮ್ಮ ಕಾಲಿನಮೇಲೆ ನೀವೇ ಕಲ್ಲು ಹಾಕಿಕೊಳ್ಳುತ್ತೀರಿ!"

"ತಟಸ್ಥವಾಗಿರು...." ಪ್ರಫುಲ್ಲ ಸಲಹೆ ನೀಡಿದ.

"ಸಾಂಘಿಕ ಚಟುವಟಿಕೆಗಳಲ್ಲಿ ಭಾಗವಹಿಸಿದ್ದಾಗಿದೆ; ಇನ್ನು ಹಿಂಜರಿಯುವುದು ಕಷ್ಟ."

"ಅದಕ್ಕೇನಾದರೂ ಉಪಾಯ ಹೂಡಬಹುದು.... ಹೊಟ್ಟೆನೋವು-ತಲೆನೋವು ಅಂದರಾಯಿತು!"

"ಇಂದು ಹತ್ತೂವರೆಗೆ ಮೀಟಿಂಗ್ ಇದೆ. ಹೋಗಲೇಬೇಕು, ಏನಾಗುತ್ತೋ ನೋಡೋಣ."

"ಗಲಾಟೆ ಗದ್ದಲಗಳಿಂದ ದೂರ ಇರಿ." ಎಂದಳು ಜಾನಕಿ. ಗಮನ ಸರಕಾರದ ಧೋರಣೆಯ ಕಡೆ ಹರಿದಿತ್ತು. ಒಂದೆರಡು ಘಳಿಗೆ ಸ್ತಬ್ಧವಾಗಿ ಯೋಚಿಸಿ ಪುನಃ ಮುಂದುವರಿದಳು "ಸರಕಾರ ತುರ್ತು ಪರಿಸ್ಥಿತಿ ಘೋಷಿಸಿದೆ....ಮುಂದದು ಸುಮ್ಮನೆ ಕೂಡುವುದಿಲ್ಲ."

"ಕಾಹಿಲೆ ಬಂದಿದ್ದರೆ ಅನುಭವಿಸುತ್ತಿರಲಿಲ್ಲವೇ, ಹಾಗೆಯೇ ಇದು."

"ನಾವು ಹೀಗೊಂದು ಕ್ರಮ ಕೈಕೊಳ್ಳದಿದ್ದರೆ ಕಾಲಾವಧಿಯೂ ಹೀಗೆಯೆ." ಮೋಹಿನಿ ತನ್ನ ಅಭಿಪ್ರಾಯನ್ನು ದೃಢ ಕಂಠದಿಂದ ಮುಂದಿಟ್ಟಳು.

"ಇಬ್ಬರೂ ಎಲ್ಲಕ್ಕೂ ತಯಾರಾಗಿಯೇ ಇದ್ದೀರಿ ಅನ್ನು!" ಕರುಣಾತರ ಸ್ವರದಿಂದ ನುಡಿದಳು ಜಾನಕಿ.

"ಅಂದಿಂದಿಗೂ ಸಾಂಘಿಕ ಚಟುವಟಿಕೆಗಳಲ್ಲಿ ಸಕ್ರಿಯಪಾತ್ರ ವಹಿಸಿ ಈಗ ಹಿಂಜರಿಯುವುದು ತುಂಬ ಕಷ್ಟ." ಮೋಹಿನಿ ಮತ್ತೆ ಒತ್ತಿ ಹೇಳಿದಳು. ಅಂತರ್ನಿಹಿತ ಭಾವಧಾರೆ ಅಲೆಅಲೆಯಾಗಿ ಮುಖಮುದ್ರೆಯಲ್ಲಿ ಬಿಂಬಿತವಾಗಿ ಅಲ್ಲಿಂದಲೇ ಲಯ ಹೊಂದುತಿತ್ತು.

ಸ್ವಾಮಿಸಿ ಯೋಜನೆಯಲ್ಲಿ ಸಿಕ್ಕಿ ಸುಮ್ಮನಾದಳು. ಚಿತ್ತ ಗತಕಾಲದ ಘಟನೆಗಳನ್ನು ಇಳಿದು ತನ್ನ ಜೀವನಮಾನದ ಒಂದು ಘಟನಾ ಕ್ಷೇತ್ರದಲ್ಲಿ

ಸಂಚರಿಸಿತು. ಇಂತಹದೇ ಒಂದು ಪ್ರಸಂಗದಲ್ಲಿ ಸಂಪು ಹೂಡಿ ಆಫೀಸಿನಿಂದ ಹೊರಹಾಕಲ್ಪಟ್ಟ ರಾಮರಾಯ ಹತ್ತು ತಿಂಗಳು ಆರ್ಥಿಕ ಮುಗ್ಗಟ್ಟಿನಲ್ಲಿ ನರಳಿದ ಘೋರ ಚಿತ್ರ ಮನವನ್ನು ನಡುಗಿಸಿತು. ಆದರೂ ಮತ್ತೆ ಬಾಯ್ದೆರೆಯಲು ಮನಸ್ಸಾಗಲಿಲ್ಲ. 'ಹೇಳಿದಷ್ಟು ಹೇಳಿಯಾಗಿದೆ. ಇನ್ನು ದೈವೇಚ್ಛೆ' ಎಂಬ ಭಾವನೆ ಮನವನ್ನು ದೃಢಪಡಿಸಿತ್ತು.

ಪ್ರಸನ್ನ ಹತ್ತು ಗಂಟೆಗೆ ಸರಿಯಾಗಿ ಮಡದಿಯೊಡನೆ ಮೀಟಿಂಗಿಗೆ ಹೊರಟ.

ವಿಮಲ ವಿಸ್ಮಯಚಕಿತ ದೃಷ್ಟಿಯಿಂದ ಪ್ರಫುಲ್ಲನ ಕಡೆ ನೋಡುತ್ತ "ಇನ್ನು ಇದೊಂದು ತಲೆನೋವು!" ಎಂದಳು.

"ಹೌದು....ಹೌದು!" ಪ್ರಫುಲ್ಲ ಹಾಸ್ಯಪ್ರಧಾನವಾಗಿ ನುಡಿದ.

"ಸೂರ್ಯೋದಯವೇ ಶಾಶ್ವತವೆಂದು ಭ್ರಮೆಪಡುವ ವಯಸ್ಸಲ್ಲ ನನ್ನದು. ಜೀವನದಲ್ಲಿ ಇಂತಹ ಪ್ರಸಂಗಗಳು ಯಾವಾಗಲೂ ಬರುತ್ತಿರುತ್ತವೆ. ಆದರೂ, ಎಚ್ಚರಿಕೆ ತೆಗೆದುಕೊಳ್ಳದಿದ್ದರೆ ತಪ್ಪಾಗುತ್ತದೆ" ಎಂದಳು ಮಕ್ಕಳ ತಾಯಿ. ಉಜ್ವಲ ಸೂರ್ಯಕಾಂತಿಯಿಂದ ಬೆಳಗುತ್ತಿರುವ ಆಕೆಯ ಮುಖ.. ಸಜಲ ನೇತ್ರಗಳು....ಹರಡಿದ ಅಲಕರಾಶಿ ಇದೇನು ನವೋದಯ ಕಾಂತಿಯೋ ಅಥವಾ ಅಸ್ತಮಾನ ಪ್ರಭೆಯೋ ಎಂದು ಅರ್ಥವಾಗದ ಅಪೂರ್ವ ಶಾಂತಿಯಿಂದ ಕೂಡಿತ್ತು.

ಸ್ವಲ್ಪ ಹೊತ್ತು ಯಾರೂ ಮಾತಾಡಲಿಲ್ಲ.

ಹೊರಜಗತ್ತಿನಲ್ಲಿ ಮಿಂಚುಳ್ಳಿಯೊಂದು ರಾಗಾಲಾಪನೆ ಮಾಡುತಿತ್ತು.

ಸಾನ್ ಗಜೆಟೆಡ್ ನೌಕರರ ಸಂಘ ಯಾವ ಉದ್ದೇಶದಿಂದ ಉದಯಿಸಿತ್ತೋ ಅದರ ಹಿತಕ್ಕಾಗಿ ಕಂಕಣ ತೊಟ್ಟಿತ್ತು. ಅಂದಿಂದಿಗೂ ಸ್ವಹಿತಕ್ಕಾಗಿ ಹೂಡಿದ ಹೋರಾಟ ನಿರರ್ಥಕವಾಗಬಾರದು ಎಂಬ ಪ್ರಜ್ಞೆಯಲ್ಲಿ ಅದರ ರೂಪುರೇಷೆ ಬಲಗೊಳ್ಳುತಿತ್ತು. ಹಲವಾರು ಅಂಶಗಳ ಬೇಡಿಕೆಯನ್ನು ಸರಕಾರದ ಮುಂದಿಟ್ಟು ಕಾರ್ಯಗತ ಮಾಡಲು ಒತ್ತಾಯಿಸಿಯೂ ಇತ್ತು. ಆದರೆ ಅತೀವ ಆರ್ಥಿಕ ದುಸ್ಥಿತಿಯಿಂದ ಸರಕಾರ ಹಣೆ ಮಣಿಯದೆ ನಿರ್ಲಕ್ಷ್ಯ ತೋರುತ್ತಲಿದೆ.

ಅಂದಿನ ಮೀಟಿಂಗಿನಲ್ಲಿ ಯಾರೂ ಕೆಲಸಕ್ಕೆ ಹೋಗಬಾರದು ಎಂಬ ನಿರ್ಧಾರ ಒಮ್ಮತದಿಂದ ಮಾಡಿ, ಆ ಸರ್ವಾಂಗೀಣ ಅದ್ಭುತ ವ್ಯವಹಾರ

ಸರಕಾರದ ಯೋಜನೆ ಯೋಲೆ ಮಂಡಿಸಲ್ಪಟ್ಟಿತು.

ಆಗಲೂ,

ನಿರೀಕ್ಷೆ.... ನಿರ್ಣಯ ... ನಿಗ್ರಹ ... ನಿರರ್ಥಕ ...

ಯಾವುಯಾವುದೋ ಚಿತ್ತಮಂಥನ.... ಯಾವುಯಾವುದೋ ಹಸ್ತಕ್ಷೇಪ.... ಯಾವುಯಾವುದೋ ವಿಚಾರ ಮೋಹನ ... ಚಿನ್ನವಿಚ್ಛಿನ್ನವಾಗಿ ಮೂಡಿ ವಿಚಾರ ಪ್ರಜ್ಞೆಗೆ ನಾನಾ ಬಣ್ಣಗಳನ್ನು ಬಳಿದಾಗ ವಿಷಯ ಇತ್ಯರ್ಥವಾಗದೆ ತಳ್ಳಿಹಾಕಲ್ಪಟ್ಟಿತು. ಸರಕಾರದ ಧೋರಣೆ ಅಸಹನೀಯವಾಗಿ ನೌಕರರು ಸಂಪು ಹೂಡಲು ನಿರ್ಧರಿಸಿ, ಯಾರೂ ಕೆಲಸಕ್ಕೆ ಹೋಗಬಾರದೆಂದು ಕರೆ ಕೊಟ್ಟರು. ಸಾಂಘಿಕ ಶಕ್ತಿಯ ಚಟುವಟಿಕೆಯ ಮೇಲೆ ಸರಕಾರ ಕಣ್ಣು ಹಾಯಿಸಿತ್ತು. ಅಷ್ಟು ಮಾತ್ರವಲ್ಲದೆ ಪೋಲೀಸಿನವರಿಗೆ ಕಟ್ಟುನಿಟ್ಟಾದ ಕ್ರಮ ಕೈಕೊಳ್ಳಲು ಮುನ್ಸೂಚನೆಯನ್ನು ನೀಡಿಯೂ ಇತ್ತು.

ನೀಲಾಂಬುಧಿಯ ಅಂಚಿನಿಂದ ಪ್ರವಾಳಲತೆಯಂತೆ ಉದಯರಾಗ ಉದಿತವಾಯಿತು. ವಿರಾಟ್ ಸೂರ್ಯಮಂಡಲ ಮೆಲ್ಲಮೆಲ್ಲನೆ ಬಾನೇರಿ ದಿನಚರಿಯನ್ನು ಸರಾಗವಾಗಿ ಆರಂಭಿಸಿತು. ನೌಕರರು ಎಂದಿನಂತೆ ಆಫೀಸಿನ ಹಾದಿ ತುಳಿದರೂ ಕೆಲಸಕ್ಕೆ ಹಾಜರಾಗದೆ ಹೊರಗಡೆ ಉದ್ಯಾನದಲ್ಲಿ ಕಲೆತು ಗುಂಪುಕಟ್ಟಿ ಕುಳಿತರು. ಕೆಲಸಕ್ಕೆ ಹೋಗಲಿಚ್ಛಿಸಿದ ಕೆಲವರನ್ನು ಅಲ್ಲಲ್ಲೇ ತಡೆಗಟ್ಟಿ ಬಾಗಿಲು ದಾಟಗೊಡಿಸದೆ ಮನೆಗೆ ಹಿಂದಿರುಗಿಸಿದರು. ಸಂಪು ಹೂಡಿದರೂ, ಪಿಕೆಟಿಂಗ್ ನಡೆಸಿದರೂ ಕೆಲಸ ಕಾರ್ಯಗಳು ಇತರ ಸಹಕಾರ ಹಸ್ತಗಳಿಂದ ನಿಧಾನಗತಿಯಲ್ಲಿ ನಡೆಯುತ್ತಿದ್ದುವು.

ಅಂದು,

ವಿಧಾನಸೌಧದ ಮುಂದೆ ಕಲೆತು ಅಲ್ಲಿಂದ ಮೆರವಣಿಗೆಯಲ್ಲಿ ಪಾಲ್ಗೊಂಡ ನೌಕರರು ಬೃಹದ್ ಅಜಗರ ಗತಿಯಲ್ಲಿ ಹೊರಟು ಧೂಳಾವೃತವಾದ ಕರಿಯ ಹೆದ್ದಾರಿಯಲ್ಲಿ ನಿಶ್ಚಿತ ಸ್ಥಳಕ್ಕೆ ಪಯಣಿಸಿದರು. ಸಾವಿರಾರು ಸೈಕಲ್ಲುಗಳು.... ಸಾವಿರಾರು ಅಭಿಶಸ್ತ ಹೆಜ್ಜೆಗಳು ಕೂಡಿ ಹೂಡಿದ ತಾಳಲಯ ಬದ್ಧ ಶ್ರುತಿ ಮೇಳ ಗಮನೀಯವಾಗಿತ್ತು.

ಸರಕಾರ ಏಳು ದಿನಗಳ ಅವಧಿ ನೀಡಿ, ಆ ಅವಧಿಯೊಳಗೆ ಕೆಲಸಕ್ಕೆ ಹಿಂದಿರುಗದವರನ್ನು ಕೂಡಲೇ ಕೆಲಸದಿಂದ ತೆಗೆದುಹಾಕುವುದಾಗಿ ಸಾರಿತು.

ನೌಕರರು ಮಣಿಯಲಿಲ್ಲ. ಭವಿತವ್ಯದ ಮಹತ್ತ್ವನ್ನು ವಿಧಿಯ ಕೈಯಲ್ಲಿ ಅಡವಿಟ್ಟು ತಮ್ಮ ಅಚಲ ನಿರ್ಧಾರಕ್ಕೆ ಶರಣಾದರು. ಸಭೆ ವಿಸರ್ಜನೆಯಾದ ಮೇಲೆ ಪ್ರಸನ್ನ ಮಡದಿಗಾಗಿ ಹುಡುಕಿದ. ಆ ಜನಸಂದಣಿಯಲ್ಲಿ ಅವಳು ಅದೆಲ್ಲಿ ಮಾಯವಾಗಿದ್ದಳೋ....ಹುಡುಕಿ ಬೇಸತ್ತು ಮುಂದಾಗಿ ಮನೆಯಕಡೆ ಹೋಗಿರಬಹುದು ಎಂಬ ಯೋಜನೆಯಿಂದ ಮನೆಗೆ ಹೋಗಿ ನೋಡಿದರೆ ಬಾಗಿಲಲ್ಲಿ ಬೀಗ ನೇತಾಡುತಿತ್ತು....ನೋಡೋಣ ಬರಬಹುದು ಎಂಬ ಚಿಂತನೆಯಲ್ಲಿ ಪುಸ್ತಕ ಪ್ರಪಂಚಕ್ಕೆ ಗಮನವನ್ನು ತೆತ್ತು ಕಾದು ಕುಳಿತು ಕೊಂಡ.

ಹೊತ್ತು ಉರುಳಿತು ; ಸಂಜೆ ಹೆಜ್ಜೆ ಇಡುತ್ತಿದೆ ; ಆದರೂ ಮಡದಿಯ ಸುಳಿವಿಲ್ಲ.

ಗೆಳತಿಯರ ಮನೆಗೆ ಹೋಗಿರಬಹುದೇನೋ ಎಂಬ ಊಹೆ ಚಿಂತಿತ ಬುದ್ಧಿಗೆ ಸೂಕ್ತ ಸಾಂತ್ವನ ನೀಡುತಿತ್ತು. ಆದರೂ ಕರುಣಕಾತರ ಚಿತ್ತ ಸುಮ್ಮನೆ ಕೂರಗೊಡಿಸಲಿಲ್ಲ. ತಾನು ಎಲ್ಲೆಲ್ಲಿ ಅರಸಬಹುದೋ ಅಲ್ಲೆಲ್ಲ ಸುತ್ತಾಡಿ ತನ್ನ ಮನೆಗೂ ಹೋಗಿಬಂದ. ಎಲ್ಲಿಯೂ ಅವಳ ಸುಳಿವಿಲ್ಲ. ತನುಮನಗಳನ್ನು ವ್ಯಾಪಿಸಿದ ಚಿಂತೆ–ಕಳವಳ ಆಂತರಂಗಿಕವಾಗಿ ಧಾಳಿ ನಡೆಸ ಹತ್ತಿದುವು. ಕೊನೆಗೆ ಪೋಲೀಸ್ ಠಾಣೆಗಳಿಗೂ ಭೇಟಿ ನೀಡಿ ಕೃತಕೃತ್ಯ ನಾಗದೆ ಸಪ್ಪೆಮೋರೆಯಿಂದ ಹಿಂದಿರುಗಿದ. ಭಯ ಭೀತಿಯಿಂದ ಹೃದಯ ವ್ಯಾಪ್ತಿಗೆ ಮೀರಿ ಮಿಡಿಯುತಿತ್ತು. ಕಳವಳದ ಕಾರ್ಮೋಡಗಳು ತಲೆಯನ್ನು ತುಂಬಿದ್ದುವು. ಅವಳಿಗಾಗಿ ಇನ್ನೂ ಸ್ವಲ್ಪ ಹೊತ್ತು ಕಾಯುವುದೇ ಅಥವಾ ಪೋಲೀಸಿಗೆ ತಿಳಿಸುವುದೇ ಎಂಬ ಯೋಚನೆಯಲ್ಲಿರುವಾಗಲೇ ಬಾಗಿಲ ಬಳಿ ಪಾದ ಸಪ್ಪಳ ಕೇಳಿಸಿತು. ಎದ್ದು ಧಾವಿಸುವುದರೊಳಗಾಗಿ ಕರೆಗಂಟೆ ಕೂಗಿ ಸುದ್ದಿಕೊಟ್ಟಿತು. ಪ್ರಸನ್ನ ಕಾತರತೆಯಿಂದ ಬಾಗಿಲು ತೆರೆದರೆ ಕತ್ತಲೆಯ ಮುಸುಕಿನಲ್ಲಿ ಪ್ರಫುಲ್ಲ ಕರಗಿ ನಿಂತಿದ್ದ.

"ಏನಪ್ಪಾ ?"

"ಮೋಹಿನಿ ಬಂದರೇ ?"

"ಇಲ್ಲ."

"ಅದಕ್ಕಾಗಿಯೇ ಬಂದೆ....ಈಗ ಏನು ಮಾಡೋಣ ?"

"ನನಗೂ ತುಂಬ ಯೋಚನೆಯಾಗಿದೆ."

ಇಬ್ಬರೂ ಮರುಮಾತಿಲ್ಲದೆ ನಿಂತರು.

ಆಕಾಶವಲಯದಲ್ಲಿ ನಕ್ಷತ್ರ್ರೇಕ್ಷುಗಳು ಸ್ವಚ್ಛಂದವಾಗಿ ಬೆಳಗುತಿದ್ದುವು. ಸಂಜೆಗಪ್ಪು ಗಗನನೀಲಿಯನ್ನು ಆವರಿಸಿತ್ತು.

"ಇನ್ನೂ ಸ್ವಲ್ಪ ಹೊತ್ತು ನೋಡೋಣ; ಈಗಲೇ ಆತುರ ಪಡುವುದು ಬೇಡ" ಎಂದ ಪ್ರಫುಲ್ಲ.

"ಆದರೆ ಎಂದೂ ಹೀಗಾಗಿರಲಿಲ್ಲ. ನನಗೆ ಅದೇ ಚಿಂತೆಯಾಗಿದೆ. ಸಭೆ ಚದುರುವವರೆಗೂ ಇದ್ದಳಂತೆ. ಅನಂತರ ಎಲ್ಲಿ ಹೋಗಿರಬಹುದು? ನನಗೆ ಅದೇ ಅಶ್ಚರ್ಯ....!"

ಇದೇರೀತಿ ಸಾಗಿದ ಮಾತುಕತೆ ಕೊನೆ ಮುಟ್ಟಿದಾಗ ತಾಸೊಂದು ಉರುಳಿತ್ತು. ಪ್ರಫುಲ್ಲ ಮತ್ತೆ ಬರುವುದಾಗಿ ಹೇಳಿ ಹೊರಟ. ಗೇಟಿನ ಹತ್ತಿರ ನಿಂತ ಪ್ರಸನ್ನ ಹಂದಲಿಲ್ಲ. ಮಾರ್ಕೆಟ್ಟಿನ ಗೋಪುರದ ಗಡಿಯಾರ ಗಂಟೆ ಬಾರಿಸಿತು. ಒಡನೆ ದೈನ್ಯ ನೋಟ ತನ್ನ ಗಡಿಯಾರದ ಮೇಲೂ ಹೊರಳಿದಾಗ ಅದರ ಮುಳ್ಳೂ ಒಂಭತ್ತರ ಅಂಕಿಗೆ ಸರಿಯಾಗಿ ಸರಿದಿತ್ತು. ರಸ್ತೆಯಲ್ಲಿ ವಾಹನಗಳು ತ್ವರಿತಗತಿಯಲ್ಲಿ ಹರಿದಾಡುತಿದ್ದುವು. ನಡೆದಾಡುವ ಜನ ವಿರಳವಾದರೂ ಆಗಾಗ ಕಾಣಿಸುತ್ತಾರೆ. ಹೆಚ್ಚು ಗದ್ದಲ ಗಲಾಟೆಗಳಿಲ್ಲದೆ ವಾತಾವರಣ ಶಾಂತಮನೋಹರವಾಗಿತ್ತು. ಪ್ರಸನ್ನ ಅಪಿಸ್ಟನಂತೆ, ಅಭಿಭೂತನಂತೆ ಅದೆಷ್ಟು ಹೊತ್ತು ನಿಂತಿದ್ದನೋ....ಇನ್ನು ಕಾಯುವುದು ಸಾಕು, ಮುಂದಿನ ಕ್ರಮ ಕೈಕೊಳ್ಳಬೇಕು ಎನಿಸಿದಾಗಲೇ ಮನೆಯ ಮುಂದೆ ನಿಂತ ರಿಕ್ಷಾ ಗಮನವನ್ನು ಸೆಳೆದುಕೊಂಡಿತು.

ಮರುಕ್ಷಣದಲ್ಲಿ ಮೋಹಿನಿ ತನ್ನ ಗೆಳತಿಯೊಡನೆ ಇಳಿದಳು.

"ಇದೇನು ಸಮಾಚಾರ?" ಪ್ರಸನ್ನ ಕಣ್ಣರಳಿಸಿದ.

"ನಮ್ಮನ್ನು ಅರೆಸ್ಟು ಮಾಡಿ ಪೋಲೀಸ್ ಸ್ಟೇಷನ್ನಿನಲ್ಲಿ ಕೂಡಿಟ್ಟರು!" ಮೋಹಿನಿ ಮುಗುಳುನಕ್ಕಳು.

"ಈವತ್ತು ಯಾರನ್ನೂ ಅರೆಸ್ಟು ಮಾಡಿದ ಸುದ್ದಿ ನಮಗೆ ತಿಳಿಯಲೇ ಇಲ್ಲ?"

"ಓ....! ನಮ್ಮ ಜೊತೆ ಸೀತಾ ಸಹ ಇದ್ದಳು. ಈಗ ಎಲ್ಲರನ್ನೂ

ಬೇಸರತ್ತಾಗಿ ಬಿಟ್ಟಿದ್ದಾರೆ!" ಎಂದ ಮೋಹಿನಿ ತನ್ನ ಗೆಳತಿಯ ಕಡೆ ತಿರುಗಿ "ನೀನು ಈಗ ಮನೆಗೆ ಹೋಗುತ್ತೀಯಾ? ಬಿಟ್ಟುಬರಲು ಯಾರಾದರೂ ಬರಬೇಕೆ?" ಎಂದಳು. ದನಿಯಲ್ಲಿ ಸ್ನೇಹಸಲಿಲ ಹರಿದು ಬಂದಿತು.

"ಬೇಕಿಲ್ಲ" ಎಂದ ಅವಳು ಪ್ರಸನ್ನನ ಕಡೆ ತಿರುಗಿ "ನೀವು ಗಾಬರಿಯಾಗಿದ್ದಿರಬೇಕು ಅಲ್ಲವೆ?" ಎಂದಳು.

"ಹೌದು, ನಮಗೆ ಯಾವ ಸಮಾಚಾರವೂ ತಿಳಿದಿರಲಿಲ್ಲ ...ತಿಳಿದಿದ್ದರೆ ಚಿಂತಿಸುವ ಕಾರಣವಿರಲಿಲ್ಲ."

"ನಿಜ....ನಿಜ."

ಅವಳು ಪುನಃ ರಿಕ್ಷ ಹತ್ತಿದಳು. ಅದು ಸದ್ದು ಮಾಡುತ್ತ ಹೊರಟಿತು.

ಒಳ ಬರುತ್ತ ಮೋಹಿನಿ ಅಂದಳು "ವಿನಾಕಾರಣ ನಮ್ಮನ್ನು ಅರೆಸ್ಟು ಮಾಡಿದ್ದು! ನಾಲ್ಕಾರು ಮಂದಿ ಗಂಡಸರನ್ನೂ ಅರೆಸ್ಟು ಮಾಡಿದ್ದಾರೆ. ಅವರನ್ನು ಬೇರೆ ಕಡೆ ಕರೆದೊಯ್ದರು!"

"ಎಲ್ಲಾ ನಾಟಕ!"

"ಹೌದು, ನಮ್ಮನ್ನು ಹೆದರಿಸುವುದಕ್ಕೆ....!"

ಇಬ್ಬರ ಮುಖದಲ್ಲೂ ನಗುವಿನ ವಿಮಲಧಾರೆ ಹರಿಯಿತು.

## ೧೦

....ಸಂಧಾನ....ಅನುಸಂಧಾನ....ಪ್ರತಿಸಂಧಾನ ...

....ಸರಕಾರದ ಮತ್ತು ನೌಕರರ ನಡುವೆ ನಡೆದ ದೀರ್ಘ ಸಂಧಾನ ಕಾರಣಬದ್ಧವಾಗಿ, ದೀಕ್ಷಾಬದ್ಧವಾಗಿ ಮುರಿದುಬಿತ್ತು. ಒಮ್ಮೆಗೇ ವಿಧಾನ ಸೌಧದಿಂದ ಬಹುತೇಕವಾಗಿ ಹೊರಬಿದ್ದ ಕೆಳದರ್ಜೆ ನೌಕರರು ಜಯ ಘೋಷಣೆ ಮಾಡುತ್ತ ಬೃಹದ್ ಮೆರವಣಿಗೆಯಲ್ಲಿ ಪಾಲ್ಗೊಂಡರು....ಮಹಿಳೆಯರು ಮುಂದೆ, ಪುರುಷರು ಹಿಂದೆ.

....ನಭೋಭೇರಿಯಾದ ಮಾನವ ಕಂಠಗಳ ಅದ್ಭುತ ರವ....ನಮ್ರ ಕಂಠಗಳ ವಿನಮ್ರ ಬೇಡಿಕೆ....ದರ್ಪೋದ್ಧತ ಕಂಠಗಳ ಘೋರಣೆ.. ದ್ವೈಧೀ ಭಾವಗಳ ಸಂಘರ್ಷಣೆ....ಲಾಠೀಪ್ರಹಾರ....ತುಮುಲ ಯುದ್ಧದ ಚೀತ್ಕಾರ....

ಚೀತ್ಕಾರ....ಒಂದೊಂದೂ ಒಂದೊಂದು ರೂಪದಲ್ಲಿ, ನಗರಲೋಕದ ಅದ್ಭುತ ರಂಗದಲ್ಲಿ ಜ್ವಾಲಾಮುಖಿಯಾಗಿ ವಿಜೃಂಭಿಸುತ್ತಿವೆ. ಸುಖೀ ಭವಿಷ್ಯವನ್ನು ಬಯಸಿ ಬಡ ನೌಕರರ ಅಮೃತ ಯಾತ್ರೆ ನಡೆದಿತ್ತು. ಸಹಸ್ರ ಸಹಸ್ರ ಅಭಿಶಸ್ತ ಹೆಜ್ಜೆಗಳ ಗಂಭೀರಧ್ವನಿ ಕರ್ಣಾನಂದಕರವಾಗಿತ್ತು. ಪ್ರಾಣರಕ್ಷಣೆ–ಮಾನ ರಕ್ಷಣೆಗಾಗಿ ಹೆಣಗುವ ಮಾನವಕೋಟಿ ದೀಕ್ಷಾಬದ್ಧರಾಗಿ ಹೋರಾಡುವಾಗ ಹೆಜ್ಜೆ ಹೆಜ್ಜೆಯಲ್ಲೂ ಹಿಂಸೆ-ದ್ವೇಷಗಳಿಗೆ ಅತೀತ ರಾಗಿ ಮೃತ್ಯುವಿನ ಪಾದ ಧ್ವನಿಯನ್ನು ಆಲೈಸುತ್ತ ಸಾಗುತ್ತಿರುವ ಅದ್ಭುತ ದೃಶ್ಯ ಇಡೀ ನಗರದ ಕಾರುಣ್ಯ ದೃಷ್ಟಿಯನ್ನು ತನ್ನೆಡೆಗೆ ಆಕರ್ಷಿಸಿತು,

ಪ್ರಸನ್ನ ಗಂಟಲು ಹರಿಯುವವರೆಗೆ ಒಡನಾಡಿಗಳೊಂದಿಗೆ ಘೋಷಣೆ ಮಾಡುತ್ತಿದ್ದ. ಈ ಸಂಘರ್ಷಣೆ ಎಂದಿಗೆ ನಿವಾರಣೆಯಾಗುವುದೊ ಎಂಬುವ ಕೊರಗಿನೊಂದಿಗೆ ಬೇಡಿಕೆ ಈಡೇರುವವರೆಗೆ ಬಿಡುವುದಿಲ್ಲ ಎಂಬ ಛಲ.... ಮಹಾಯಜ್ಞದ ಪೂಜಾರಿಗಳ ಮಂತ್ರಘೋಷಣೆ ನಡೆಯುತ್ತಿದ್ದಂತೆಯೇ ಶ್ರೇಯಸ್ಸಿನ ಹಾದಿಗೆ ಮುಳ್ಳುಬೇಲಿ ಹಾಕಲೋ ಎಂಬಂತೆ ಎಲ್ಲಿಂದಲೋ ಕಲ್ಲುಗಳು ದಪದಪನೆ ಬಿದ್ದುವು. ಒಡನೆ ಘರ್ಷಣೆ ಆರಂಭವಾಯಿತು. ಲಾಠೀಪ್ರಹಾರ–ಅಶ್ರುವಾಯು–ತುಪಾಕಿಗಳ ಢಂ-ಕಾರ! ಪ್ರಾಣರಕ್ಷಣೆಗಾಗಿ ಮಿಲಿಮಿಲಿ ಒದ್ದಾಡುವ ಜೀವಿಗಳ ಕರುಣಾಜನಕ ದೃಶ್ಯ. ಮೇಲಾಗಿ, ರೋಷಗೊಂಡ ಪೋಲೀಸರ ಉದ್ಧಟತನ ಅನೇಕರನ್ನು ಯಮಸದನಗಳಿಗೆ ರವಾನಿಸಿ, ಅಸಂಖ್ಯ ಮಂದಿಯನ್ನು ಜೈಲುಯಾತ್ರೆ ಮಾಡಿಸಿತು. ಬಹುತೇಕ ಜನನಾಯಕರನ್ನು ಕೆಲಸದಿಂದ ಉಚ್ಚಾಟನೆ ಮಾಡಿತು ಸರಕಾರ. ಹಾಗೆ ಉಚ್ಚಾಟನೆಯಾದ ಮುಖ್ಯರಲ್ಲಿ ಮೋಹಿನಿಯೂ ಒಬ್ಬಳು. ಜೈಲು ಕಂಡವ ರಲ್ಲಿ ಪ್ರಸನ್ನ ಮೊದಲಿಗ. ಮೋಹಿನಿ ಜೈಲಿಗೆ ಹೋಗಲು ಆಶಿಸಿದ್ದಳೇನೋ ಹೌದು. ಆದರೆ ಗರ್ಭಿಣಿಯೂ ಅಶಕ್ತಳೂ ಆದುದರಿಂದ ಅಲ್ಲಿ ಪ್ರವೇಶ ದೊರೆಯಲಿಲ್ಲ. ಏಕಾಂಗಿಯಾಗಿ ಹೊರಗಡೆ ಉಳಿದುದು ಅವಳ ಧೃತಿಗೆಡಿ ಸಿತು. ತೌರುಮನೆಯವರ ಆಶಾವಾಹಿನಿಗೆ ವಿರುದ್ಧವಾಗಿ, ಗೃಹಿಣಿಯಾಗಿ ಹೊರಬಂದಿದ್ದ ಅವಳು ಏಕಾಂಗಿಯಾಗಿ ತನ್ನ ಮನೆಯಲ್ಲೇ ಕೆಲವು ದಿನ ಉಳಿದರೂ ಅನಂತರ ಇರುವುದು ಸಾಧ್ಯವಾಗಲಿಲ್ಲ. ಜಾನಕಿ ಬಂದು ಆಶ್ವಾಸಿಸಿದೊಡನೆಯೇ ಮನೆಯನ್ನು ಬರಿದು ಮಾಡಿ ಹೊರಡಲು ಅಣಿ

ಯಾದಳು.

ಅದೇ ಸಮಯದಲ್ಲಿ ಚಂದ್ರಮನ ಉದಯಗೂಢ ರಶ್ಮಿಗಳಿಂದ ಪಾಂಡುರ ಶೋಭೀ ಪೂರ್ವದಿಶೆಯು ಮನೋಹರವಾಯಿತು. ಹುಣ್ಣಿಮೆಯ ಪೂರ್ಣ ಚಂದ್ರನ ಆಗಮನದಿಂದ ಪೂರ್ವೀಗಗನರಂಗವು ಪ್ರಿಯ ಸಮಾಗಮ ಜನ್ಯ ಆನಂದದಿಂದ ತುಂಬಿಹೋದಂತೆ ಉಲ್ಲಾಸಿತವಾಯಿತು. ಅಲ್ಲಲ್ಲಿ ಎತ್ತರವಾಗಿ ನಿಂತಿದ್ದ ವೃಕ್ಷಶಿಖೆಗಳ ಮೇಲೆ ಹರಿದ ಪೀತಾಭ ರಶ್ಮಿಗಳ ರಜತಜಾಲ ದರ್ಶನೀಯವಾಗಿತ್ತು. ನೀಲಗಗನ ವಿಚಿತ್ರ ಕಾಂತಿಯಿಂದ ಕೂಡಿ ಅಲ್ಲಲ್ಲಿ ಬಿಳಿಮುಗಿಲಿನ ನವಚಿತ್ರಾಂಗಗಳನ್ನು ನೆಯ್ದಿತ್ತು.

ಜಾನಕಿ ಆ ದಿವ್ಯ ಚಂದ್ರಕಾಂತಿಯೆಡೆಗೆ ನೋಟವನ್ನು ಹರಿಸಿ ಭಾವನಾ ಮಯಿಯಾಗಿ ನುಡಿದಳು.

"ಈ ಬ್ರಹ್ಮಾಂಡದಲ್ಲಿ 'ನಮ್ಮದು' ಎಂದು ನಾವು ಎಲ್ಲಕ್ಕೂ ಹೊಡೆ ದಾಡುವುದೇ ಒಂದು ವಿಶೇಷ!"

"ಅದಕ್ಕೆ ಈ ಬ್ರಹ್ಮಾಂಡವೇ ಕಾರಣ!" ಮುಗುಳು ನಕ್ಕಳು ಮೋಹಿನಿ.

ರಸ್ತೆಯಲ್ಲಿ ಮುಖಾಮುಖಿಯಾಗಿ ಓಡಾಡುವ ಮಂದಿ ದೃಷ್ಟಿಗೆ ಬೀಳು ತ್ತಿದ್ದರು. ಬಡತನದ ಬೇಗೆಯನ್ನುಂಡ ಸತದೃಷ್ಟ ಜೀವಗಳ ಪರಿಷೆ ಅವ್ಯಾ ಹತವಾಗಿ ನಡೆದಿತ್ತು. ಬುದ್ಧಿಹೀನ ಶ್ರದ್ಧಾಹೀನ ಮಂದಿಯ ಕರುಣಾಜನಕ ದೃಶ್ಯ ಕರುಳನ್ನು ಕತ್ತರಿಸುವಂತಿತ್ತು. ಈ ವಿಚಿತ್ರ ಜಗತ್ತಿನ ವೈವಿಧ್ಯತೆಯ ಮೇಲೆ ದೃಷ್ಟಿ ಹರಿದಾಡಿ ಹಿಮ್ಮರಳಿದಾಗ ಮೋಹಿನಿ ರಿಕ್ಷ ಹಿಡಿಮ ಪೆಟ್ಟಿಗೆ ಯನ್ನು ಅದರಲ್ಲಿಡುತಿದ್ದಳು.

"ಆಯಿತು ಹತ್ತಿರಿ" ಎಂದಳು ಮೋಹಿನಿ.

ಇಬ್ಬರೂ ಹತ್ತಿ ಮನೆಯನ್ನು ಮುಟ್ಟಿದಾಗ ಇನ್ನೂ ವಿಮಲ-ನಿರ್ಮಲೆ ಯರು ಮನೆಗೆ ಬಂದಿರಲಿಲ್ಲ.

"ಏಕೆ? ಇನ್ನೂ ಇಬ್ಬರೂ ಬಂದಿಲ್ಲವಲ್ಲಾ? ದಿನವೂ ಬರುವುದು ಇಷ್ಟು ತಡವಾಗುತ್ತದೆಯೇ?"

ಮೋಹಿನಿಯ ಪ್ರಶ್ನೆಗೆ ಅತ್ಯಂತ ನಿರಾಸಕ್ತಿಯಿಂದ ಉತ್ತರಿಸಿದಳು ಜಾನಕಿ,

"ಬಹುಶಃ ಲೈಬ್ರರಿಗೆ ಹೋಗಿರಬೇಕು."

ಮೋಹಿನಿ ಮರುಮಾತಿಲ್ಲದೆ ಪೆಟ್ಟಿಗೆಯನ್ನು ಒಳಗಡೆ ಇಟ್ಟಳು.

ಅನಿರ್ದಿಷ್ಟ ಕಾಲ ಆಫೀಸುಗಳು ಬಾಗಿಲನ್ನು ಮುಚ್ಚಿಕೊಂಡುವು. ಸಂಘಾನದಗತಿ ಅಲ್ಲೇ ಉಳಿಯಿತು. ದೇಶ ರಕ್ಷಣಾ ಕಾಯಿದೆ ಬಂದಿಗಳನ್ನು ಜೇಲಿನ ಅತಿಥಿಗಳನ್ನಾಗಿಯೇ ಉಳಿಸಿತು. ಅನಿಶ್ಚಿತ ಪರಿಸ್ಥಿತಿ–ಅನಿಶ್ಚಿತ ಜೀವನ-ಆರ್ಥಿಕ ಮುಗ್ಗಟ್ಟು ಒಂದಕ್ಕೊಂದು ಸುಭದ್ರ ಕೊಂಡಿಯನ್ನು ಹೆಣೆದು ಕೊಂಡಿವೆ....ಆಫೀಸಿನ ಕೆಲಸವಿಲ್ಲದೆ ತಿಂಗಳಾಗಿತ್ತು. ಸಂಪು ಹೂಡಿದ ಯಾರನ್ನೂ ಪುನಃ ಕೆಲಸಕ್ಕೆ ತೆಗೆದುಕೊಂಡಿರಲಿಲ್ಲ. ಅದೆಲ್ಲ ಇತ್ಯರ್ಥವಾಗ ಬೇಕಾದರೆ ಇನ್ನಾವ ಕಾಲವೋ....ಅಲ್ಲಿಯತನಕ ಏನು ಎಂಬುದೇ ಪ್ರಶ್ನೆ.

ಇಂದು ನಿರ್ಮಲ-ವಿಮಲ ಒಟ್ಟಾಗಿಯೇ ಕಾಲೇಜಿನಿಂದ ಮನೆಗೆ ಬಂದರು. ಶಾಲೆಯ ಆವರಣದಲ್ಲೇ ಕಾಲೇಜು ಹುಟ್ಟಿಕೊಂಡಿದ್ದುದರಿಂದ ಬಹಳಷ್ಟು ಅನುಕೂಲವೇ ಆಗಿತ್ತು. ಇಬ್ಬರೂ ಒಳಹೆಜ್ಜೆ ಇಡುತ್ತಲೂ ಪ್ರಪ್ರಥಮವಾಗಿ ದೃಷ್ಟಿಗೆ ಬಿದ್ದ ಮೋಹಿನಿ ಅವನತಮುಖಿಯಾಗಿ ಪುಸ್ತಕ ಪಠಣ ಕೈಕೊಂಡಿದ್ದಳು. ಒಳಬರುತ್ತಲೇ ನಿರ್ಮಲ ಅಂದಳು "ನೀನು ಅಲ್ಲಿ ಒಬ್ಬಳೇ ಇರುವುದಕ್ಕಿಂತ ಇಲ್ಲಿಗೆ ಬಂದುದು ಒಳ್ಳೆಯದಾಯಿತು."

ಮೋಹಿನಿ ಜಾಹಿರಾತಿಗೆ ಬೀರುವಂತಹ ಕೃತಕ ನಗೆಯನ್ನು ಬೀರಿದಳು.

"ಇಂದಿನ ವಿಶೇಷವೇನು ? ಸಂಘದವರು ಏನಾದರೂ ಹೇಳಿದರೇ ?"

"ಇದುವರೆಗೆ ಏನೂ ತಿಳಿದು ಬರಲಿಲ್ಲ."

"ಖೈದಿಗಳ ಬಿಡುಗಡೆ ...?"

"ಏನೂ ತಿಳಿಯದು."

"ಎಷ್ಟು ಕಾಲ ತೆಗೆದುಕೊಳ್ಳುತ್ತೋ ಅದೇ ಕಷ್ಟ."

"Emancipation ಬೇಕೆಂದು ನಾನು ಎಂದೂ ಆಶಿಸಲಿಲ್ಲ. ಸರಕಾರ್ವ ಎಲ್ಲರನ್ನೂ ಕೂಡಿ ನನ್ನನ್ನು ಹೊರಗಿಟ್ಟು ದ್ರೋಹ ಮಾಡಿತು. ಪತಿಯನ್ನು ಜೇಲಿಗೆ ಕಳುಹಿಸಿದ ಮೇಲೆ ಸತಿಗೆ ಜೀವನಾಂಶ ಕೊಡುವಷ್ಟು ಉದಾರತೆ ಯನ್ನಾದರೂ ತೋರಬೇಕಿತ್ತು....ಅದೂ ಸಹ ಇಲ್ಲ."

ಕಿಟಕಿಯಲ್ಲಿ ಹಾದ ಸಂಧ್ಯಾಕಾಂತಿಯಲ್ಲಿ ಬೆಳಗುತಿದ್ದ ಮುಖ, ಹಣೆಯ ಮೇಲೆ ನರ್ತಿಸುವ ಮುಂಗುರುಳು, ಸುಂದರ ಸಜಲ ನೇತ್ರದಯಗಳು,

ಕಪೋಲಪಾಲಿಯಲ್ಲಿ ರಂಗು ಬಳಿದಂತೆ ಹೊಮ್ಮಿದ ಚಂದನರಾಗ. ಕಣ್ಣುಗಳ ಸುತ್ತ ಕಡೆದ ಕಪ್ಪು ಒಂದೊಂದೂ ಮನಮೋಹಕವಾಗಿವೆ....ಇದುವರೆಗೂ ಇಂತಹ ಅದ್ಭುತ ಸೌಂದರ್ಯ ಅವಳಲ್ಲಿದೆ ಎಂಬುದನ್ನು ಖಂಡಿತ ಕಂಡು ಕೊಂಡಿರಲಿಲ್ಲ ಎಂದುಕೊಂಡಳು ನಿರ್ಮಲ. ತುಟಿಗಳಲ್ಲಿ ಊಹೆಗೆ ಸಿಲುಕದ ಮುಗುಳ್ನಗು ಮೂಡಿ ಮಾಯವಾಯಿತು. ಮುಂದಡಿ ಇಡುತ್ತ ಪ್ರಾಸಂಗಿಕ ವಾಗಿ ನುಡಿದಳು ನಿರ್ಮಲ,

"ಅದಕ್ಕೇಕೆ ಅಷ್ಟು ಆತಂಕ? ಕಾಲಾನುಕಾಲಕ್ಕೂ ಇಟ್ಟುಕೊಳ್ಳಲು ಇವರೇನು ರಾಜಕೀಯ ಖೈದಿಗಳಲ್ಲವಲ್ಲಾ? ಸದ್ಯದಲ್ಲೇ ಎಂದಾದರೂ ಬಿಡುಗಡೆಯಾದೀತು. ಕೆಲವು ಕಾಲ ತೊಂದರೆ....ಹೆಜ್ಜೆ ಮುಂದಿಟ್ಟ ಮೇಲೆ ಸಹಿಸಿಕೊಳ್ಳಲೇಬೇಕು."

"ಅದು ನಿಜ; ಎಲ್ಲರಿಗೂ ಆದುದು ನನಗೆ ಆಗಿದ್ದರೆ ಖಂಡಿತ ವ್ಯಥೆ ಇರಲಿಲ್ಲ....ಲೋಕನಿಯಮ ವಿಚಿತ್ರವಾದುದು."

"ಅದಲ್ಲ ಮೋಹಿನೀ! ಬಲಹೀನರನ್ನು ಬಂಧನದಲ್ಲಿಡಲಾಗುವುದಿಲ್ಲ ... ಇದು ಅಂತಹ ಪ್ರಸಂಗ."

"ನಾನು ಅಂತಹ ಅಶಕ್ತಳೇನೂ ಅಲ್ಲ. ಸರಕಾರ ಧೈರ್ಯ ಮಾಡ ಬಹುದಿತ್ತು."

"ಅದಕ್ಕಿಂತ ನಿನಗೆ ಜೀವನಾಂಶ ಕೊಡಬಹುದಾಗಿತ್ತು. ಈಗಲೂ ತಡವಾಗಲಿಲ್ಲ; ಬರೆದುಕೊಂಡು ನೋಡು."

"ಆಗಲೇ ಬರೆದುಕೊಂಡಿದ್ದಾಯ್ತು. ನಮ್ಮ ಆಫೀಸರನ್ನು ನೋಡಿಯೂ ಬಂದೆ....ಸಂಪಿನ ವಿಚಾರ ಇತ್ಯರ್ಥವಾಗದೆ ಏನೂ ಮಾಡುವುದಕ್ಕಾಗುವು ದಿಲ್ಲ, ಎಂದು ಒಂದೇ ಮಾತಿನಲ್ಲಿ ಉತ್ತರ ಪೂರೈಸಿದರು"

"ಸರಿ; ಕಾದು ನೋಡುವುದೊಂದೇ ದಾರಿ."

ವಿಮಲ ಆ ಸಂಭಾಷಣೆಯಲ್ಲಿ ಪಾಲ್ಗೊಳ್ಳದಿದ್ದರೂ ವಿಷಯವನ್ನು ತನ್ನಲ್ಲೇ ತರ್ಕಿಸಿಕೊಂಡಳು. ಹೀಗಾಗಬಹುದೆಂದು ಮೊದಲೇ ಊಹಿಸಿದ್ದು ದರಿಂದ ಹೆಚ್ಚೇನೂ ಆಶ್ಚರ್ಯವಾಗಲಿಲ್ಲ. ತನ್ನ ಪುಸ್ತಕಗಳನ್ನು ಬೀರುವಿ ನಲ್ಲಿಟ್ಟು ಒಳಹೆಜ್ಜೆ ಇಡುತ್ತ ಒಂದೇ ಮಾತಿನಲ್ಲಿ ತನ್ನ ಅಭಿಪ್ರಾಯವನ್ನು ಹೊರ ಹಾಕಿದಳು,

"ಕತ್ತಲಾದ ಮೇಲೆ ಬೆಳಗಾಗುವುದು ಇದ್ದೇ ಇದೆ."

ಮೋಹಿನಿ ಮುಗುಳು ನಕ್ಕಳು.

"ಅದು ನಿಜ." ಅನುಮೋದಿಸಿದಳು ನಿರ್ಮಲ.

ಒಳಗಡೆ ಒಲಿಯ ಬಳಿ ಕುಳಿತ ಸ್ವಾಮಿನಿ ಅದೇನೋ ನಡೆಸಿದ್ದಾಳೆ. ದಿನವೂ ಒಂದಲ್ಲ ಒಂದು ರೀತಿಯಲ್ಲಿ ತನ್ನ ಜನ್ಮ ಸಾರ್ಥಕತೆಯು ಅಲ್ಲಿ ನಡೆಯುತ್ತಿರುತ್ತದೆ. ಆ ಸಂಭ್ರಮ ವಿಶೇಷದಲ್ಲಿ ಯಾವ ಜೀವನ ಶೈಥಿಲ್ಯವನ್ನೂ ಅವಳು ಕಾಣಲಿಲ್ಲ....ಅಥವಾ ಅದರ ಊಹೆ ಸಹ ಉಂಟಾಗಲಿಲ್ಲ ಅಂದಿಂದಿಗೂ ಹೃನ್ಮಂದಿರದಲ್ಲಿ ಉರಿಸಿಕೊಂಡು ಬಂದ ರಾಗಜ್ಯೋತಿಯ ಕುಡಿಯನ್ನು ಎತ್ತರಿಸಿ ಉಜ್ವಲಗೊಳಿಸುವ ಮೊದಲೇ ತನ್ನ ಸಹಚರನ ಮಾರ್ಗ ಬದಲಾಯಿತು. ಆದರೂ ಅವಳು ಧೃತಿಗೆಡಲಿಲ್ಲ. ಆತನೇ ಸರ್ವಸ್ವ ಎಂಬ ಭ್ರಮೆ ಕೇವಲ ವಿಭ್ರಮವೀಚಿಯಾಗಿಯೇ ಉಳಿಯಿತು. ಆ ಅನನ್ಯ ಕಟುಸತ್ಯ ಹೊಳೆದ ನಂತರ ಪ್ರೀತಿ ವ್ಯಾಮೋಹಕ್ಕಿಂತಲೂ ಉನ್ನತವಾದುದು 'ಕರ್ತವ್ಯ'ವೊಂದೇ ಎಂಬುದು ಸ್ಪಷ್ಟವಾಗಿ ಹೊಳೆಯಿತು. ಅಂದಿನಿಂದ ಸ್ತ್ರೀತ್ವದ ನ್ಯೂನತೆಯನ್ನು ತಿದ್ದಿಕೊಳ್ಳಲು ಸತತ ಪ್ರಯತ್ನಿಸಿದ್ದಾಳೆ....ಕೊನೆಯತನಕ ಪ್ರಯತ್ನಿಸುವ ಯೋಜನೆಯನ್ನೂ ಹಾಕಿಕೊಂಡಿದ್ದಾಳೆ.

ನಿರ್ಮಲ ಒಳಹೆಜ್ಜೆ ಇಡುತ್ತಲೇ ಅಂದಳು,

"ಏನಿದ್ದರೂ ನಾನು ನೋಡಿಕೊಳ್ಳುವೆ. ಏಳಿ ಅಮ್ಮಾ!"

"ಆಯಿತು....ಆಯಿತು. ಇನ್ನೇನೂ ಇಲ್ಲ."

ಆ ಅಖಂಡ ಸ್ತ್ರೀತ್ವದಲ್ಲಿ ಲೀನಳಾಗಿ ಮಹಾನುಭೂತಿಯನ್ನು ಪಡೆಯತೊಡಗಿದಾಗ ತೀರ ವಿಭಿನ್ನವಾದ ಮತ್ತೊಂದು ಜೀವನ ಜ್ವಾಲೆ ಬೆಳಗುತ್ತಿದ್ದುದು ಬಹುಶಃ ಮನಃಪಟಲದಿಂದ ಅಳಿಸಿಯೇ ಹೋಗಿರಬಹುದು. ಒಂದು ಘಳಿಗೆ ಮನದಲ್ಲಿನ ನೂರು ಜಂಜಡವೆಲ್ಲ ಅಲ್ಲಿಂದಲ್ಲೇ ತಟಸ್ಥವಾದಂತೆ ತೋರಿತು ನಿರ್ಮಲಳಿಗೆ.

ಅದೇ ವೇಳೆಗೆ ಮುಖಮಜ್ಜನ ಮಾಡಿಕೊಂಡು ಬಂದ ವಿಮಲ ದಿನಚರಿಯಲ್ಲಿ ತೊಡಗುತ್ತ ಹೇಳಿದಳು,

"ಈ ದೇಶದ ಪ್ರಗತಿ ಯಾರೊಬ್ಬರ ಮೇಲಾದರೂ ಆಧಾರ ಪಟ್ಟಿದೆಯೆಂದು ಹೇಳುವುದಾದರೆ ಅದು ಸ್ತ್ರೀಯರ ಮೇಲೆ ಎಂದು ಯಾರಾದರೂ

ದೃಢವಾಗಿ ಹೇಳಬಲ್ಲರು!"

"ಎಲ್ಲರೂ ಹಾಗೆನ್ನುವುದು ಅಷ್ಟು ಸುಲಭವಲ್ಲ ಮಗಳೇ!" ಎಂದು ಮುಗುಳು ನಕ್ಕಳು ತಾಯಿ.

"ವೊಂಡುವಾದ ಹೂಡುವುದರಿಂದೇನು? ಕೂಲಂಕಶವಾಗಿ ಪರಿಶೀಲಿಸಿದರೆ ತಿಳಿಯುತ್ತದೆ."

"ಎಲ್ಲರೂ ಅವರವರ ನೇರಕ್ಕೇ ನೋಡಿಕೊಳ್ಳುತ್ತಾರೆ!"

"ನಿಮ್ಮ ಮಾತು ಅಕ್ಷರಶಃ ಸತ್ಯ." ಎಂದಳು ನಿರ್ಮಲ.

ತಾಯಿ ಸತ್ಯಾರ್ಥ ತುಂಬಿದ ನೋಟವನ್ನು ಅತ್ತ ಹೊರಳಿಸಿ,

"ಸರಿ; ಯಾವುದನ್ನೂ ಚಿರಕಾಲ ಸತ್ಯ ಎಂದು ಭಾವಿಸಲಾಗುವುದಿಲ್ಲ. ಇಂದಿನ ಅಭಿಪ್ರಾಯ ನಾಳೆಗಿರಲಾರದು. ಇದು ಪರಿವರ್ತನಯುಗ; ಯಾವಾಗ ಏನು ಎಂಬುದನ್ನು ಊಹಿಸುವುದಕ್ಕಾಗುವುದಿಲ್ಲ. ಆದರೂ ಇಂತಹ ಪರಿವರ್ತನಗಳಾದರೆ ಅದೇ ಒಂದು ಮೈಲಿಗಲ್ಲು!"

".. ಮೈಲಿಗಲ್ಲು?"

"ಹೌದು; ಮಗೂ ಹೌದು!"

ಸ್ವಾಮಿನಿಯ ನಿಶ್ಚಲ ನಯನಗಳು ಉಜ್ಜಲವಾಗಿ ಬೆಳಗಿದುವು.

ಮೋಹಿನಿ ಮೌನವಾಗಿ ಅವರ ಸಂಭಾಷಣೆಯನ್ನು ಕೇಳುತಿದ್ದಳು. ಕೈಯಲ್ಲಿದ್ದ ಪುಸ್ತಕ ಹಾಗೇ ಉಳಿದಿತ್ತು. ಸ್ವಲ್ಪ ಹೊತ್ತು ವಿಷಯವನ್ನು ತನ್ನಲ್ಲೇ ತರ್ಕಿಸಿಕೊಂಡು ಅನಂತರ ಏನೋ ಒಂದು ರೀತಿಯಲ್ಲಿ ಅಸಡ್ಡೆಯಿಂದ ತನ್ನ ಅಭಿಪ್ರಾಯವನ್ನು ಹೊರ ಹಾಕಿದಳು,

"ಆದರೂ ಎಷ್ಟು ಕಾಲದಿಂದ ನಮ್ಮ ಸಾಮಾಜಿಕ ವ್ಯವಸ್ಥೆ ಒಂದೇ ತೆರನಾಗಿದೆ...? ದೇಶದಲ್ಲಿ ವಿದ್ಯಾ ಪ್ರಗತಿ ಸಾಕಷ್ಟು ನಡೆದಿದೆ. ಸುಧಾರಿಸಿಕೊಳ್ಳುವುದಾದರೆ ಈ ವೇಳೆಗಾಗಲೇ ಸುಧಾರಿಸಿಕೊಳ್ಳಬಹುದಾಗಿತ್ತು."

"ಅಷ್ಟು ಮಾತ್ರವೇಕೆ? ಇಂಗ್ಲಿಷಿನವರ ಸಂಪರ್ಕದಿಂದಲಾದರೂ ಕಲಿತುಕೊಳ್ಳಬಹುದಾಗಿತ್ತು. ವಿಶ್ವಪ್ರಗತಿಯನ್ನು ನೋಡಿ ಅರಳದ ಮನೋವಿಕಲ್ಪ ಓನಾಮದಿಂದ ಆದೀತೇ?"

"ಆಗದೆ ಏನು?.......ವಿಪರೀತ ಮಂದಗಾಮಿತ್ವ,"

"ನಮ್ಮ ದೇಶ ಸಕಲ ಸಂಪದ್ಭರಿತವಾದುದು. ಮನೋವಿಕಾಸವಾಗದೆ

ಸುನ್ನವಷ್ಟೆ ಮೂಡಲಿಲ್ಲ...ಮಂದಗಾಮಿತ್ವ ಮಾತ್ರವೇನು? ನಮ್ಮಲ್ಲಿ ಪ್ರತಿಗಾಮಿತ್ವವೂ ಉಂಟು!"

ಇದುವರೆಗೂ ಸುಮ್ಮನಿದ್ದ ಸ್ವಾಮಿನಿ ಭಾವಪೂರ್ಣಲೋಚನಗಳಿಂದ ನೋಡುತ್ತ ನುಡಿದಳು.

"ನಾರೀ ಶ್ರೀ ಹೃದಯದಲ್ಲಿ ದೀಪ್ತಿಯನ್ನು ಬೆಳಗದ ಯಾವ ಜೀವನವೂ ಸಫಲತೆಯನ್ನು ಹೊಂದಲಾರದು. ಆ ಮಹಾನುಭೂತಿಗೆ ಬೇಕಾದ ಜ್ಞಾನ ಸಂಪುಟಕ್ಕೆ ಅಗತ್ಯವಾದ ಶಿಕ್ಷಣವನ್ನು ಕೊಡದೆ ಆಕೆಯ ಚಿತ್ತಭಿತ್ತಿಯ ಮೇಲೆ ಮುಸುಗು ಹಾಕಿರುವುದರಿಂದಲೇ ನಮ್ಮ ದೇಶದ ಪ್ರಗತಿ ಕುಂಠಿತವಾಯಿತು. ಮುಖ್ಯವಾಗಿ ಸ್ತ್ರೀ ಚೇತನ ಚೇತರಿಸಿಕೊಳ್ಳಬೇಕು! ಅಜ್ಞಾನವಶರಾಗಿ, ರೋಗವಶರಾಗಿ ಗೃಹಸ್ಥ ಜೀವನದಲ್ಲಿ ಕೊಳೆಯುವುದರಿಂದ ಶಿಶು ಶಿಕ್ಷಣವೂ ಪ್ರಗತಿ ಪಥದಲ್ಲಿ ನಡೆಯಲಾರದು."

"ಹೌದು ಅನಾದಿಯಿಂದ ಸ್ತ್ರೀ ಶಿಕ್ಷಣ–ಸ್ತ್ರೀ ಸ್ವಾತಂತ್ರ್ಯ ನಿರ್ವಂಚನೆಯಿಂದ ಲಭ್ಯವಾಗಿದ್ದಿದ್ದರೆ ಭಾರತ ಸಾಮ್ರಾಜ್ಯ ಅಕಳಂಕ ಕೀರ್ತಿಯನ್ನು ಪಡೆಯುತಿತ್ತು....ಏನು ಮಾಡೋಣ, ಎಲ್ಲಾ ಸ್ವಾರ್ಥ ಸಾಧಕರ ಉಪಟಳ."

ಮಹಿಳಾ ಮಂಡಲಿ ಚರ್ಚಿಸಿದ ವಿಚಾರ ತರಂಗ ತಾಳಲಯ ಬದ್ಧವಾಗಿ ಪ್ರೈರೂ ಪ್ರಗತಿಯ ರೂಪುರೇಷೆಯನ್ನೇನೂ ಮೂಡಿಸಿದೆ ಸಾಯಂಸಮಯದ ಶೀತಲ ವಾತಾವರಣದಲ್ಲಿ ತಣ್ಣಗೆ ಲೀನವಾಯಿತು.

ಸ್ವಾಮಿನಿ ಸ್ತಬ್ಧವಾಗಿ ಚಿಂತಿಸಿದಳು. ಪತಿ ರಾಮರಾಯ ಗತಿಸುವವರೆಗೆ ಆರ್ಥಿಕ ವ್ಯವಹಾರ ಏನು ಎಂಬುದನ್ನು ಕಿಂಚತ್ತೂ ಅರಿತಿರಲಿಲ್ಲ. ತನಂತರ ಜೀವನ ಸಂಗ್ರಾಮದಲ್ಲಿ ಅಲ್ಪಸ್ವಲ್ಪವಾಗಿ ಅರಿತ ಬಗೆಯನ್ನು ಕುರಿತು ಯೋಚಿಸತೊಡಗಿದಳು. ಅಂತರ್ನಿಹಿತ ಭಾವಧಾರೆ ಮುಖ ಮುದ್ರೆಯಲ್ಲಿ ಅಲೆಯಲೆಯಾಗಿ ಸುಳಿದಳಿಯುತಿತ್ತು. ಮೋಹಿನಿ ಒಂದೆರಡು ಕ್ಷಣ ಹುಬ್ಬೆತ್ತಿ ನೋಡಿದಳು....ವೃದ್ಧೆ ಹೆಚ್ಚು ಕಲಿತವಳಲ್ಲವಾದರೂ ನ್ಯಾಯಬದ್ಧವಾಗಿ ಹೂಡಿದ ವಿಚಾರ ಸರಣಿ ತೃಪ್ತಿಯನ್ನು ಮೂಡಿಸಿತು. ನೇತ್ರದ್ವಯಗಳು ವಿಸ್ಮಯಾಧಿಕ್ಯದಿಂದ ಅರಳಿದುವು.

ಪಟ. ಪಟ. ಪಟ. ಪಟ. ಪಟ. ಪಟ.

ಆ ಪಟಿತ್ಕಾರ ಪ್ರಫುಲ್ಲನ ಡೆಸ್ಕಿಯ ಸಪ್ಪಳವೆಂಬುದನ್ನು ಮೊಟ್ಟ

ಮೊದಲು ಅರಿತವಳು ಜಾನಕಿ. ಮರುಕ್ಷಣದಲ್ಲಿ ಮುಚ್ಚಿದ ಬಾಗಿಲ ಬಳಿ ನಿಂತ ಅವನು ಕರೆದ,

"ಅಮ್ಮಾ......!"

೧೧

....ಶೈವಾಲ ಶೂನ್ಯ ಸರೋವರದಂತೆ ನಿರ್ಮಲವಾದ ಗಗನ ಭಿತ್ತಿ ಮೇಘಮುಕ್ತವಾಗಿತ್ತು.

....ತರುಣಾರುಣ ಉಜ್ವಲೋಜ್ವಲ ಕಾಂತಿಯಿಂದ ಜಗದ್ವಲಯವನ್ನು ಬೆಳಗುತಿದ್ದ.

....ಆಕಾಶ ಪ್ರಾಂತ್ಯದಲ್ಲಿ ಮಿಂಚುಳ್ಳಿಗಳ ಹಿಂಡು ಹಾರುತಿದ್ದುವು. ಮಿಾ ಮಿಾ ಮಿಾ ಮಿಾ ಮಿಾ ಮಿಾ ೯ ೯ ೯ ೯!

ನಿರ್ಮಲ ಧಫ್ತರವನ್ನು ಎದೆಗಾಂತು ಹಿಡಿದು ಆಫೀಸಿನ ಮೆಟ್ಟಿಲು ಹತ್ತಿದಳು. ಕಣ್ಣುಗಳಲ್ಲಿ ಅಸಾಧಾರಣ ಗುರುತ್ವ ಮಿಂಚುತಿತ್ತು. ಆಫೀಸಿನ ಒಳಗಡೆ ಹೆಜ್ಜೆ ಇಟ್ಟಾಗಲೇ ನುಡಿ ವಂದನಾರ್ಥವಾಗಿ ಹೊರಬಿತ್ತು.

"ನಮಸ್ಕಾರ ಡಾಕ್ಟರ್!"

"ನಮಸ್ಕಾರ."

ಡಾ|| ಹಿಲ್ಡಾ ಕುರ್ಚಿಯ ಕಡೆ ನೋಡಿ ಕುಳಿತುಕೊಳ್ಳಲು ಸೂಚನೆ ಕೊಟ್ಟು, ಪುನಃ ತನ್ನ ಕಾಗದ ಪತ್ರಗಳೆಡೆಗೆ ನೋಟವನ್ನು ಹೊರಳಿಸಿದಳು. ಸ್ವಲ್ಪ ಹೊತ್ತಿನವರೆಗೆ ನಿಶ್ಶಬ್ದವಾಗಿ ಕೆಲಸ ಸಾಗಿಸಿದನಂತರ ಕೇಳಿದಳು,

"ಏನು ಬಂದಿದ್ದಿ? ನಿನ್ನ ಕಡೆಯ ವ್ಯವಹಾರ ಹೇಗೆ ನಡೆಯುತ್ತಿದೆ?"

"ಪರವಾಯಿಲ್ಲ...." ಎಂದು ಅಷ್ಟಕ್ಕೆ ಸುಮ್ಮನಾದಳು ನಿರ್ಮಲ.

"ನೀನು ಬಂದ ವಿಷಯವೇನೂ ಹೇಳಲಿಲ್ಲವಲ್ಲಾ?"

"ಈ ಸಾಲಿನಲ್ಲಿ ಎಂ. ಎ., ಗೆ ಸೇರಬೇಕೆಂದುಕೊಂಡಿರುವೆ. ನನಗೆ ರಜೆ ಬೇಕಾಗುತ್ತದೆ. ಮೊದಲೇ ಹೇಳಿರೋಣವೆಂದು ಬಂದೆ."

"ಸಂಬಳವಿಲ್ಲದೆ ಓದಬಲ್ಲೆಯಾ?"

ನಿರ್ಮಲ ಒಂದು ಘಳಿಗೆ ತಲೆಬಾಗಿ ಯೋಚಿಸಿ ಅತ್ಯಂತ ವಿನಮ್ರತೆಯಿಂದ ನುಡಿದಳು,

"ನಮ್ಮ ಸ್ಥಿತಿಗತಿ ನಿಮಗೆ ಗೊತ್ತೇ ಇದೆ ಡಾಕ್ಟರ್!"

"ಗೊತ್ತು" ಸ್ವಲ್ಪಹೊತ್ತು ಸುಮ್ಮನಿದ್ದು ಅನಂತರ ಅಭಿರಾಮಭಂಗಿಯಲ್ಲಿ ನುಡಿದಳು "ಆದರೆ, ರೂಲ್ಸ್ ಎಲ್ಲರಿಗೂ ಒಂದೇ.

ಆ ಮುಹೂರ್ತದಲ್ಲಿ ಅಮರನಾಥ ಚಿತ್ತಭಿತ್ತಿಯಲ್ಲಿ ತೇಲಿಬಂದ..... ಸಂಬಳವಿಲ್ಲದಿದ್ದರೂ ಪರವಾಯಿಲ್ಲ, ನಾನಿರುವವರೆಗೆ ಯೋಚಿಸಬೇಡ; ಎಂದು ಸಾರಿ ಹೇಳುತಿದ್ದಾನೆ. ಆ ಮುಖ, ಆ ತೇಜ ಚಿಂತಿತ ಮನಕ್ಕೆ ಚೇತನವನ್ನು ತುಂಬಿದುವು. ಮರುಕ್ಷಣದಲ್ಲಿ ಚೇತರಿಸಿಕೊಂಡಂತೆ ದೃಢಭಾವದಿಂದ ನುಡಿದಳು,

"ರಜೆ ಕೊಡಿ. ಹಣದ ವ್ಯವಸ್ಥೆ ಹೇಗಾದರೂ ಆಗುತ್ತೆ."

"ಎಲ್ಲಿ ಓದುವುದೆಂದು ತೀರ್ಮಾನಿಸಿದ್ದಿ ?"

"ಇಲ್ಲೇ....ಸೆಂಟ್ರಲ್ ಕಾಲೇಜ್" ಎಂದ ನಿರ್ಮಲ ಸ್ವಲ್ಪ ವಿಜಾತೀಯವಾದ ಧ್ವನಿಯಲ್ಲಿ ಮುಂದುವರಿದಳು "ನನಗೆ ಮಾನಸ ಗಂಗೋತ್ರಿ"ಗೆ ಹೋಗಬೇಕೆಂಬ ಇಚ್ಛೆ ಬಹಳವಾಗಿತ್ತು. ಖರ್ಚು ಬಹಳವಾಗುತ್ತದೆ. ಅದು ನನ್ನಿಂದ ಸಾಧ್ಯವಾಗದು."

"ಇದುವರೆಗಿನ ಸಂಪಾದನೆಯಲ್ಲಿ ಏನೂ ಉಳಿತಾಯ ಮಾಡಿಲ್ಲವೇ ?"

"ಏನೇನೂ ಸಾಧ್ಯವಾಗಲಿಲ್ಲ, ಡಾಕ್ಟರ್! ಸಂಸಾರ ದೊಡ್ಡದು."

"ನಿನ್ನ ತಮ್ಮಂದಿರು ಸಂಪಾದಿಸುತ್ತಾರಲ್ಲವೇ ?"

"ಸಂಪಾದಿಸುತ್ತಾರೆ....ಕೈ ನೊಟಕು!"

ಇಬ್ಬರ ಮುಖದಲ್ಲೂ ಎಳೆ ನಗು ಮೂಡಿ ಮಾಯವಾಯಿತು.

"ನೋಡೋಣ, ವಿವರವಾಗಿ ಬರೆದುಕೊ."

"ತುಂಬ ವಂದನೆಗಳು!"

"............"

ನಿರ್ಮಲ ಅಲ್ಲಿಂದ ತರಗತಿಯ ಕಡೆ ಹೊರಟಳು. ಹೊಮ್ಮೋಟದ ಸುಂದರಹಾದಿಗೆ ಕಾಲಿಟ್ಟಾಗ ನೀಲವರ್ಣದ ಸಮವಸ್ತ್ರಗಳಿಂದಲಂಕೃತರಾದ ಸಹಸ್ರಾರು ಮಕ್ಕಳ ದರ್ಶನ ಒಮ್ಮೆಗೇ ಆಯಿತು. ತರಗತಿ ಆರಂಭವಾಗಲು

ಇನ್ನೂ ಐದಾರು ನಿಮಿಷಗಳಿದ್ದುದರಿಂದ ಮಕ್ಕಳು ಉಲ್ಲಾಸಭರಿತರಾಗಿ ಹೂದೋಟದಲ್ಲಿ ಚಿಟ್ಟೆಗಳಂತೆ ಹಾರಾಡುತಿದ್ದರು. ನಿರ್ಮಲೆಯನ್ನು ಅಲ್ಲಿ ಕಾಣುತ್ತಲೂ ಅನೇಕ ಎಳೆ ದನಿಗಳು ಏಕ ಕಂಠದಲ್ಲಿ ಮೊಳಗಿದುವು,

"ನಮಸ್ಕಾರ ಮಿಸ್ !"

"ನಮಸ್ಕಾರ....!"

ಮೃದು ಮಂದಹಾಸವನ್ನು ಮಕ್ಕಳೆಡೆಗೆ ಬೀರುತ್ತ ಹೆಜ್ಜೆ ತೆಗೆದಳು. ಹಾಲ್ಗೆನ್ನೆಯ ಹಸು ಮಕ್ಕಳ ಹೂ ಎಸಳಂತಹ ತುಟಿಗಳಲ್ಲಿ ನಲಿಯುತಿದ್ದ. ಎಳೆ ನಗುವನ್ನು ನೋಡಿದಷ್ಟೂ ಹೃದಯದ ಹೊಂಗಡಲು ಉಕ್ಕೇರುತಿತ್ತು. ಪ್ರಾಕ್ತನ ಪುಣ್ಯವಶದಿಂದ ಮುದ್ದು ಮಕ್ಕಳ ಸಹವಾಸ ಒದಗಿದೆ ಎಂದೆನಿಸಿ ತನ್ನ ಬದುಕಿನ ಸಾರ್ಥಕತೆ ಹೆಜ್ಜೆ ಹೆಜ್ಜೆಗೂ ಆತ್ಮಗತವಾಗುತಿತ್ತು. ಆ ಹೃದಯಹಾರೀ ಭಾವನೆಯಿಂದ ಅಭಿಶಸ್ತ ಹೆಜ್ಜೆಗಳ ಗತಿ ಮೃದುಮಂದತ್ವ ಹೊಂದಿತು. ನಾಲ್ಕು ಮಾರು ಕಳೆಯುವುದರೊಳಗಾಗಿ ಲೀಲಾ ಎದುರಾದಳು. ಮುಂದೆ ಇಬ್ಬರೂ ಕೈ ಕೈ ಹಿಡಿದು ಹೊರಟರು.

"ಪಾರ್ವತಿ ರಜೆ ತೆಗೆದುಕೊಂಡಿದ್ದಾಳೆ. ನಾನಿಂದು ಅವಳ ತರಗತಿಯನ್ನೂ ನೋಡಿಕೊಳ್ಳಬೇಕಾಗಿದೆ" ಎಂದಳು ಲೀಲಾ; ಮುಖಮಂಡಲದಲ್ಲಿ ರಾತ್ರಿಯ ವಿಶ್ರಾಂತಿ ಹರ್ಷದ ಕೋಡಿಯನ್ನು ಹರಿಸಿತ್ತು. ರಂಗೊರೆದ– ಕೆಂಪು ಹೂ ಎಸಳಂತಹ ತುಟಿಗಳಲ್ಲಿ ಸುಂದರ ನಗೆಯನ್ನು ಚೆಲ್ಲಿದಳು.

"ನೀನು ಯಾವಾಗಲೂ ನಗುನಗುತ್ತಲೇ ಇರುತ್ತಿ. ಭಗವಂತ ನಿನಗೆ ಎರಡು ಕೈಗಳಿಂದಲೂ 'ಆನಂದ' ಎಂಬ ಅಮೃತವನ್ನು ಪ್ರಾಸಾದಿಸಿದ್ದಾನೆ.... ನಮಗಾದರೋ ದಿನವೂ ಒಂದಲ್ಲ ಒಂದು ತೊಂದರೆ ತಲೆಗೆ ಅಂಟಿರುತ್ತೆ. ಯಾವ ರೀತಿ ಈ ಜೀವನವನ್ನು ಉದ್ಧರಿಸಬೇಕೋ ಅರ್ಥವಾಗದೆ ಚಿಂತಿಸುವುದೇ ಆಗುತ್ತದೆ!"

ಓಹೋಹೋಹೋ !

ಸವಿಗೊರಲಿನ ಇಂಪನ್ನು ಚೆಲ್ಲಿ ಸೂಸಿ ಆನಂದ ಪ್ರಮತ್ತಳಾಗಿ ನುಡಿದಳು ಲೀಲಾ,

"ಭಗವಂತ ಯಾರಿಗೆ ಆನಂದ ನೀಡಿಲ್ಲ ? ನೀನದನ್ನು ಬಳಸಿಕೊಳ್ಳುತ್ತಿಲ್ಲ, ನಾನದನ್ನು ಬಳಸಿಕೊಳ್ಳುವೆ. ಅಷ್ಟೇ ವ್ಯತ್ಯಾಸ ನನಗೂ ನಿನಗೂ!"

"ಇರಬಹುದು ; ಆದರೂ...."

"ಆದರೂ, ಏನು ಹೇಳು ?"

"ಏನೇನೋ ತೊಂದರೆ–ಕಿನಿಸಿಗೆ, ಇದ್ದೇ ಇರುತ್ತೆ. ಒಂದು ಬಗೆ ಹರಿಯುವುದರೊಳಗಾಗಿ ಮತ್ತೆರಡು ಮೂಡುವುದು ಸರ್ವೇಸಾಮಾನ್ಯವಾಗಿ ಹೋಗಿದೆ...." ಮುಂದೆ ಏನೋ ಹೇಳಬೇಕೆಂದವಳು ಮುಂದುವರಿಸದೆ ಅಷ್ಟಕ್ಕೆ ಮಾತನ್ನು ತುಂಡುಗಡಿದಳು. ಅರಳಿದ ಕಣ್ಣುಗಳಲ್ಲಿ ಸಾತ್ವಿಕ ಖಳೆ ಮಿಂಚುತಿತ್ತು.

"ಅದು ಎಲ್ಲರ ಜೀವನದಲ್ಲೂ ಉಂಟು. ನಿನಗೆ ಮಾತ್ರವೇನು ?"

"ಇರಬಹುದು."

"ಮತ್ತೇಕೆ ಕೊರಗು ?"

"ಕೊರಗುವಂತಾದ್ದೇನಿಲ್ಲ. ನಿನ್ನ ಆನಂದವನ್ನು ನೋಡಿ ಹೊಟ್ಟೆಯುರಿಯಾಯಿತು ಅಷ್ಟೆ."

ಇಬ್ಬರ ಮುಖದಲ್ಲೂ ನಗುವಿನ ಚಿಲುಮೆ ಉಕ್ಕಿ ಹರಿಯಿತು.

"ನಿನ್ನದು ಎಷ್ಟನೇ ಪೀರಿಯಡ್ ?

ಎರಡನೇ ಪೀರಿಯಡ್."

"ಹಾಗಾದರೆ ನನ್ನೊಂದಿಗೆ ಬಾ, ಸ್ವಲ್ಪ ಕೆಲಸವಿದೆ."

ಅಲ್ಲಿಂದ ಇಬ್ಬರೂ ಏಕಾತ್ಮರಾಗಿ ಮುಂದುವರಿದರು.

"ನನ್ನದೂ ಸಹ ಎರಡನೆಯ ಪೀರಿಯಡ್. ಅಷ್ಟರೊಳಗಾಗಿ ಇಲ್ಲೇ ನೋಟ್ಸ್ ತಯಾರಿಸಿಕೊಂಡರಾಯ್ತು ಎಂದುಕೊಂಡಿದ್ದೆ. ಈಗಷ್ಟೆ ಪಾರ್ವತಿ ಅವಳ ತರಗತಿಯನ್ನು ನೋಡಿಕೊಳ್ಳಲು ಹೇಳಿಹೋದಳು. ನನಗ ನೋಟ್ಸ್ ಬರೆಯಲು ವಿರಾಮವೇ ಇಲ್ಲ, ನಾನು ಕೆಲಸ ಮುಗಿಸುವಷ್ಟರಲ್ಲಿ ಒಂದಿಷ್ಟು ನೋಟ್ಸ್ ಬರೆದುಕೊಡು."

ತಮ್ಮ ಕೊಠಡಿಗೆ ಹೋಗುತ್ತಲೂ ಪುಸ್ತಕವನ್ನೂ ಹಾಳೆಗಳನ್ನೂ ಗೆಳತಿಗೆ ಒದಗಿಸಿ ತರಗತಿಯ ಕಡೆ ಬಿರುಗಾಳಿಯಂತೆ ಹೊರಟುಹೋದಳು ಲೀಲಾ. ಆ ಪುಸ್ತಕದಿಂದ ಅಂದಿನ ಪಾಠದ ಬಗ್ಗೆ ನೋಟ್ಸ್ ಬರೆಯುವುದು ಹೆಚ್ಚು ಹೊತ್ತೇನೂ ತೆಗೆದುಕೊಳ್ಳಲಿಲ್ಲ. ಲೇಖನಿ ಮುದ್ದು ಮುದ್ದಾದ ಅಕ್ಷರಗಳಲ್ಲಿ ಹರಿಯುತಿತ್ತು. ಮಸಿಯ ಒರತೆ ಕೂದಲೆಳೆಯಂತೆ ಬಸಿಯು

ತ್ತಿತ್ತು. ತನ್ನ ಶೈಲಿ, ತನ್ನ ಬರವಣಿಗೆ, ತನ್ನ ಅಕ್ಷರ ಒಂದೊಂದೂ ನಿತಾಂತ ಆಕರ್ಷಣೆಯಿಂದ ಕೂಡಿದ್ದು, ನೋಟ್ಸ್ ರೂಪುಗೊಂಡಷ್ಟೂ ಮನಸ್ಸಿಗೆ ಹಿತ. ಯಾವ ವಿಧವಾದ ಸಂವೇದನೆಯೂ ಅನುಭವಕ್ಕೆ ಬಾರದಷ್ಟು ಚಿತ್ತ ಪರಿಪುಷ್ಟವಾಗಿತ್ತು. ನಿಶ್ಚಲ ನಯನಗಳಲ್ಲಿ ಮೂಡಿದ ಗುರುತ್ವ ಬಯಸಿದರೂ ಹಿಮ್ಮರಳದು. ತನ್ನನ್ನು ತಾನೇ ಉತ್ಸರ್ಗಗೊಳಿಸುವ ಆ ಶಕ್ತಿ ಯಾವುದು ? ಎಲ್ಲಿದೆ ? ಎಂಬುದೂ ಸಹ ಅರ್ಥವಾಗುತ್ತಿಲ್ಲ. ನಿರ್ಮಲ ನಿಯಮಾನುಸಾರವಾಗಿ, ಯಾಂತ್ರಿಕವಾಗಿ ಕೈಯಾಡಿಸಿದಳು.

ಮೊದಲನೆಯ ತರಗತಿ ಮುಗಿದಾಗಲೇ ಎರಡನೆಯ ತರಗತಿ ಆರಂಭವಾಗಿತ್ತು.

ಲೀಲಳಿಗೆ ನೋಟ್ಸ್ ಒಪ್ಪಿಸಿ, ನಿರ್ಮಲ ತನ್ನ ತರಗತಿಗೆ ಪದಾರ್ಪಣೆ ಮಾಡಿದಳು. ಮಕ್ಕಳ ಮುಗುಳ್ನಗೆ ಸ್ವಾಗತ ನೀಡಿತು.

ಅಂದು,

ಪಂಡಿತ್ ಜವಹರಲಾಲರ ಬಗ್ಗೆ ಪಾಠ,

"... ನೆಹರೂರವರಿಗೆ ಒಮ್ಮೆ ಆರೋಗ್ಯ ಕೆಟ್ಟಿತ್ತು. ಅವರು ಭಾರತದ ಯಾವ ಮೂಲೆಯಲ್ಲಿದ್ದರೂ ವಿಶ್ರಾಂತಿ ಸಿಗುವುದು ಅಸಂಭವವೆಂದು ಅವರ ವೈದ್ಯರು ಭಾರತದ ಆಚೆ ಎಲ್ಲಾದರೂ ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ಸೂಚಿಸಿದರು. ಆಗ ಇನ್ನೂ ಭಾರತಕ್ಕೆ ಸ್ವಾತಂತ್ರ್ಯ ಬಂದಿರಲಿಲ್ಲ. ಬಿಡುವಿಲ್ಲದ ಕೆಲಸ....ಅತ್ಯಂತ ಕ್ಲಿಷ್ಟವಾದ ಸಮಸ್ಯೆಗಳು ಮಾನಸಿಕ ಆಂದೋಳನ ಹೂಡುತಿದ್ದುವು. ಅವರಿಗೆ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳದೆ ಗತ್ಯಂತರವಿರಲಿಲ್ಲ....ಅವರು ಸಿಲೋನಿಗೆ ಹೊರಟರು."

ಬಾಲಕಿಯರು ತಲೆ ಬಾಗಿ ನೋಟ್ಸ್ ಬರೆದುಕೊಳ್ಳುತಿದ್ದರು. ಆ ಸಮ್ಮೋಹನಕರವಾದ ವಿಶಿಷ್ಟತರ ಬಾಲಕಿಯರ ಸಮೂಹ ಶಿಸ್ತುಪಾಲನೆಯ ನೇಮದಲ್ಲಿ ದೃಷ್ಟಿಯನ್ನು ಅತ್ತಿತ್ತ ಹೊರಳಿಸದೆ ಬರವಣಿಗೆಯಲ್ಲಿ ತೀವ್ರ ನಿಮಗ್ನಗೊಂಡಿತ್ತು

ವೇದಿಕೆಯಿಂದ ನಿರ್ಮಲೆಯ ಕಂಠಸ್ವನ ಸರಳ ಶೈಲಿಯಲ್ಲಿ ಹರಿಯಿತು,

"ನೆಹರೂರವರಂತಹ ಮಹಾನ್ ವ್ಯಕ್ತಿ ಸಿಲೋನಿಗೆ ಹೋದರೇನು ? ಸಿಂಗಪೂರಿಗೆ ಹೋದರೇನು ಅವರು ಎಲ್ಲಿದ್ದರೆ ಅಲ್ಲಿ ಜನರಾಶಿ....! ಆದರೂ

ಒಮ್ಮೆ ಅವರು ಪ್ರಸಿದ್ಧ ಬೌದ್ಧವಿಹಾರಗಳನ್ನೊಳಗೊಂಡ ಅನೂರಾಧಪುರಕ್ಕೆ ಭೇಟಿಕೊಟ್ಟರು. ಅಲ್ಲಿಯ ಪುರಾತನ ಉಪವಿಷ್ಟ ಬುದ್ಧವಿಗ್ರಹ ಅವರ ಮನವನ್ನು ಅಪಾರವಾಗಿ ಸೆಳೆಯಿತು. ಅದನ್ನು ತಿಳಿದ ಅವರ ಸ್ನೇಹಿತನೊಬ್ಬ ಆ ವಿಗ್ರಹದ ಪ್ರತಿಚಿತ್ರವನ್ನು ತಯಾರಿಸಿ ಅವರಿಗೆ ಕಳುಹಿಸಿಕೊಟ್ಟ. ಅದು ಅವರಿಗೆ ಡೆಹರಾಡೂನ್ ಸೆರೆಮನೆಯಲ್ಲಿದ್ದಾಗ ತಲುಪಿತು...."

"ಅಂದರೆ....ಅವರು ಮತ್ತೆ ಬಂಧಿತರಾದರೇ ?" ಬಾಲಕಿಯೊಬ್ಬಳ ಮುಗ್ಧ ಪ್ರಶ್ನೆ.

"ಹೌದು. ಅವರಿಗೆ ಅದೆಲ್ಲಾ ಸಾಮಾನ್ಯ."

ಬಾಲಕಿ ಮಾತಾಡಲಿಲ್ಲ. ನಿಶ್ಚಲ ದೃಷ್ಟಿ ಅತ್ತಲೇ ಹರಿಯಿತು. ಆ ಮುದ್ದು ಮುಖದ ಮುಗ್ಧಭಾವ....ಕಣ್ಣುಗಳ ಉಜ್ವಲ ಹೊಳಪು 'ಪಾಪ' ಎಂಬಂತಿತ್ತು.

ನಿರ್ಮಲಳ ಶ್ರೀಕಂಠಧ್ವನಿ ವೀಣಾಲಹರಿಯಂತೆ ಹರಿಯಿತು,

ಈ ಚಿತ್ರದ ಬಗ್ಗೆ ನೆಹರೂರವರು ಹೀಗೆ ಬರೆದಿದ್ದಾರೆ. "ಚಿತ್ರವನ್ನು ನನ್ನ ಪುಟ್ಟ ಓವರಿಯಲ್ಲಿ ಮೇಜಿನ ಮೇಲೆ ಇಟ್ಟಿದ್ದೆ. ಅದು ನನಗೆ ಅತ್ಯಂತ ಮೆಚ್ಚಿನ ಒಡನಾಡಿಯಾಗಿಬಿಟ್ಟಿತು. ಆ ಮೂರ್ತಿಯ ಶಾಂತ ಮುಖಮುದ್ರೆ ನನಗೆ ಎಲ್ಲಾ ಸಮಯದಲ್ಲೂ–ಎಂತಹ ಕ್ಲಿಷ್ಟ ಪರಿಸ್ಥಿತಿಯಲ್ಲೂ ಗೆಲುವಿನ ಆಶ್ವಾಸನೆ ನೀಡುತ್ತಿತ್ತು....ಬುದ್ಧದೇವ ನನ್ನ ಹೃದಯವನ್ನು ಸದಾ ರಂಜಿಸಿದ್ದಾನೆ. ಆ ರಂಜನೆಯನ್ನು ನಾನು ಎಂದೂ ವಿಭಜಿಸಲಾರೆ. ಆದರೆ, ಅದು ಧಾರ್ಮಿಕ ರಂಜನೆಯಲ್ಲ; ಏಕೆಂದರೆ ಬೌದ್ಧಧರ್ಮದ ಸುತ್ತಲೂ ಬೆಳೆದು ಬಂದಿರುವ ಸಿದ್ಧಾಂತಗಳಲ್ಲಿ ನನಗೆ ಶ್ರದ್ಧೆಯಿಲ್ಲ. ನನ್ನನ್ನು ಸೆಳೆದಿರುವುದು ಬುದ್ಧನ ವ್ಯಕ್ತಿಮಹತ್ವ, ಹಾಗೆಯೇ ಕ್ರಿಸ್ತನ ವ್ಯಕ್ತಿಮಹತ್ವವೂ ಸಹ ನನ್ನನ್ನು ಅಪಾರವಾಗಿ ಆಕರ್ಷಿಸಿದೆ...."

ಚತುಃಷಷ್ಟಿ ಲೇಖನಿಗಳ ಕರಕರ ಶಬ್ದಮೌಲ್ಯ ಶಾಂತ ಸಮುದಾಯದಲ್ಲಿ ವಿದ್ಯಾಧಿದೇವತೆಯ ಸಾಕ್ಷಾತ್ಕಾರವನ್ನು ಪಡೆಯುವುದೋ ಎಂಬಷ್ಟು ಶ್ರದ್ಧಾಭಕ್ತಿಗಳಿಂದ ಕೂಡಿತ್ತು.

"...ಆ ಮಹಾನುಭಾವರಿಗೆ ಶಾಂತಭಾವದಲ್ಲಿ ಎಂಥ ಶ್ರದ್ಧಾಭಕ್ತಿಗಳಿತ್ತು ಎಂಬುದಕ್ಕೆ ಅವರ ಬರವಣಿಗೆಯೇ ಆಧಾರ...."

ಪಾಠ ಮುಗಿಯುವುದಕ್ಕೂ ಗಂಟೆ ಬಾರಿಸುವುದಕ್ಕೂ ಸರಿಹೋಯ್ತು. ಬಿಡುವಿನ ವೇಳೆಗಾಗಿ ಮಕ್ಕಳು ತರಗತಿಯನ್ನು ಬಿಟ್ಟು ಮರಿ ಜಿಂಕೆಗಳಂತೆ ಹೊರಬಿದ್ದರು. ಪ್ರತಿ ತರಗತಿಗಳಿಂದಲೂ ಮಕ್ಕಳು ಹೊರಬಂದು ಆವರಣದಲ್ಲಿ ಕಲೆತಾಗ ನೀಲ ಜಲಧಿಯೇ ಅಲ್ಲಿ ಧುಮಿಧುಮಿಸುತ್ತಿರುವಂತೆ ಕಂಗೊಳಿಸುತಿತ್ತು. ನಿರ್ಮಲ ಜಗಲಿಯಮೇಲೆ ಏಕಾಂಗಿಯಾಗಿ ನಿಂತು ಉಜ್ವಲ ನೋಟವನ್ನು ಅತ್ತಲೇ ಚೆಲ್ಲಿ ಕೊಟ್ಟಳು.... ಆಗ ಕೆಲವು ಗಂಟೆಗಳ ಹಿಂದೆ ಲೀಲಾ ಆಡಿದ ವಾಕ್ಯಸರಣಿ ಕರ್ಣವಲಯದಲ್ಲಿ ಪ್ರತಿಧ್ವನಿಸಿತು,

"ಭಗವಂತ ಯಾರಿಗೆ ಆನಂದ ನೀಡಿಲ್ಲ? ನೀನದನ್ನು ಬಳಸಿಕೊಳ್ಳುತ್ತಿಲ್ಲ, ನಾನದನ್ನು ಬಳಸಿಕೊಳ್ಳುತ್ತಿರುವೆ.ಅಷ್ಟೇ ವ್ಯತ್ಯಾಸ ನನಗೂ ನಿನಗೂ!"

ಹೌದು.... ! ಆನಂದವನ್ನೂ ಆನಂದಿತಗೊಳಿಸುವಂತಿತ್ತು ದೃಷ್ಟಿಯ ಕಕ್ಷೆಯೊಳಗಿನ ಆ ಅಮೂಲ್ಯ ದೃಶ್ಯ !

## ೧೨

ಶಾಲೆಯಲ್ಲಿ ಪಾಠ ನಡೆಯುತ್ತಿದ್ದಂತೆಯೇ ಟಪ್ಪಾಲಿನವ ಹಸರು ಲಕೋಟೆಯೊಂದನ್ನು ಮೇಜಿನ ಮೇಲಿಟ್ಟು ಹೋದ. ಹಸ್ತಾಕ್ಷರ ಪರಿಚಿತ.... ವಿಚಾರವಾಹಿನಿಯೂ ಆತ್ಮಗತ.... ಆದರೂ ಅದನ್ನು ಒಡೆದು ಓದುವ ಕುತೂಹಲ-ಕಾತರ. ಅಂತಲೇ ತನ್ನನ್ನು ತಾನು ಹತೋಟಿಯಲ್ಲಿಟ್ಟುಕೊಂಡು ಕಾಗದವನ್ನು ಚೀಲದಲ್ಲಿ ಇಟ್ಟು ಕೊಂಡಳು ನಿರ್ಮಲ. ಹೃದಯ ಕುಂಡಲಿನಿಯಲ್ಲಿ ಆತ್ಮವಾಹಿನಿ ಅಮರ ಮಂತ್ರವನ್ನು ಎಡೆಬಿಡದೆ ಪಠಿಸುತಿತ್ತು. ಪಾಠ ಪ್ರವಚನದ ಅವಧಿಯನ್ನು ಶಾಂತಿಯುತವಾಗಿ ಮುಗಿಸುವಷ್ಟು ವ್ಯವಧಾನವೂ ಉಳಿಯಲಿಲ್ಲ. ಆತುರ-ಆತಂಕಗಳ ಗಣಿಯಾಗಿ ನಿಮಿಷ ನಿಮಿಷಗಳನ್ನು ಕಳೆಯುವಾಗ ಅಂತಃಸ್ಥಲವನ್ನು ಅಪೂರ್ವ ಅನುಭಾವ ಸ್ಪರ್ಶಿಸುವಂತಿತ್ತು. ಕಾಲೇಜಿನಿಂದ ವಿಮಲ ಬರುವ ಮೊದಲೇ ಅದನ್ನು ಓದಿಕೊಳ್ಳುವುದು ಮಾತ್ರವಲ್ಲ; ಗೆಳತಿಯರು ಕೊಠಡಿಗೆ ಬರುವುದರೊಳಗಾಗಿ ಓದಿ ಅಡಗಿಸಿಕೊಳ್ಳದಿದ್ದಲ್ಲಿ ಗುಲ್ಲು ಹಬ್ಬುತ್ತದೆ. ಅಂತಲೇ ತ್ವರಿತವಾಗಿ ಕಾರಿಡಾರಿನ ತುದಿಯಲ್ಲಿ ನಿಂತು ಒಡೆದಳು. ಯಾರ ದೃಷ್ಟಿಗೆ ಬಿದ್ದರೂ ಯಾವುದೋ ಬಹಿರಂಗ ಪತ್ರದಂತೆ

ಕಂಡುಬರಲಿ ಎಂಬ ಹಾರೈಕೆ. ಅಮರನಾಥ ಬೆಂಗಳೂರನ್ನು ಬಿಟ್ಟಮೇಲೆ ಪತ್ರವನ್ನು ಬರೆದಿರಲಿಲ್ಲ. ಬಿಡುವು ದೊರೆತಾಗ ಬಂದು ಹೋಗುವೆ ಎಂದು ಹೇಳಿದ್ದರೂ ಒಮ್ಮೆಯೂ ಬಂದಿರಲಿಲ್ಲ. ಆ ಎಲ್ಲಾ ಯೋಚನೆಗಳನ್ನು ತುಂಬಿಕೊಂಡು ಅತ್ಯಂತ ಉತ್ಸುಕವಾಯಿತು ಚಂಚಲ ಚಿತ್ತ. ಹಸುರು ಕಾಗದ, ನೀಲಿ ಮಸಿ ...ಸುಂದರ ಅಕ್ಷರ, ಸರಳ ಶೈಲಿ....

....ನಿಮಗೆ ಹೇಳಬೇಕಾದುದನ್ನೆಲ್ಲ ಬರೆಯಬೇಕಾದರೆ ಎಷ್ಟೊಂದು ಕಾಗದಗಳು ಬೇಕಾಗಬಹುದು? ಎಷ್ಟು ಸಮಯ ಹಿಡಿಯಬಹುದು? ಯೋಚಿಸಿದರೂ ಊಹಿಸಲಾರೆ ನಾನು ಇರಲಿ, ಹೇಳುವುದನ್ನೆಲ್ಲಾ ಸಂಕ್ಷಿಪ್ತವಾಗಿ ಹೇಳಿ ನಿಮ್ಮ ಅಮೂಲ್ಯವಾದ ಸಮಯವನ್ನು ಉಳಿತಾಯಮಾಡುವೆ. ನಿಮ್ಮ ಚೆಕ್ಕು ಹಸ್ತಗತವಾದಾಗ ಹೃದಯ ಸಂಪುಟ ಸುಖ-ದುಃಖಗಳಿಂದ ತುಂಬಿ ಒಮ್ಮಿಂದೊಮ್ಮೆಲೇ ಬಿರಿಯುವಂತಾಯಿತು. ಆಪದ್ಬಾಂಧವರನ್ನು ಕೃತಜ್ಞತಾಪೂರ್ವಕವಾಗಿ ಸ್ಮರಿಸುವ ಹಂಬಲಕ್ಕೆ ಪ್ರತಿದ್ವಂದ್ವಿಯಾದ ಒಡಲ ಸಂಕಟಾವತರಣವಾಯಿತು. ಸುಖಾನಂದವನ್ನು ಮೀರಿ ನರನರಗಳೂ ದುಃಖಿಸಿದುವು. ರಕ್ತದಕಣಕಣಗಳೂ ಪರಿತಪಿಸಿದುವು. ಅಂತರ್ನಿಹಿತ ಅದ್ಭುತ ಆತ್ಮ ಪ್ರವಾಹ ನನ್ನ ಹತೋಟಿಯನ್ನು ಮೀರಿ ಹರಿಯಿತು. ನಾನು ಮೂರ್ತಿಮತ್ತಾದೆ. ಮನಸ್ಸಾಗರದಲ್ಲಿ ಮಹಾ ವಿಕ್ಷೋಭೆಯ ಪ್ರಭಂಜನ ನಡೆಯುತಿತ್ತು. ಕೃತಜ್ಞತೆಯಭಾರದಿಂದ ಶರೀರ ಕುಸಿಯುವಂತಾಯಿತು. ನನ್ನನ್ನು ನಾನು ಸಾವರಿಸಿಕೊಳ್ಳಬೇಕಾದರೆ ಅದೆಷ್ಟು ಹೊತ್ತು ತೆಗೆದುಕೊಂಡೆನೋ ಈಗ ಹೇಳಲಾರೆ....ಸಮಯವನ್ನು ಗಮನಿಸುವಷ್ಟು ಚಿತ್ತಸ್ವಾಸ್ಥ್ಯ ಆಗ ನನ್ನಲ್ಲಿರಲಿಲ್ಲ. ಹೊತ್ತು ಉರುಳಿ ಮನಸ್ಸು ತಿಳಿಯಾದಾಗ ನನ್ನನ್ನು ನಾನು ಶಪಿಸಿಕೊಂಡೆ. ಆದರೂ ಸಹ ನಮ್ಮನಮ್ಮಲ್ಲಿ ಆದ ಒಪ್ಪಂದವನ್ನು ಯಾವ ಕಾರಣಕ್ಕೂ ಬಿಟ್ಟುಕೊಡಲಾರೆ. ಇಂದು ನಿಮ್ಮ ಮೇಲೆ ಅವಲಂಭಿಸಿದರೂ ಅದರ ಇಮ್ಮಡಿ ಮುಮ್ಮಡಿ ನಿಮ್ಮ ಸಂಸಾರದ ಭಾರವನ್ನು ಹೊರಲು ಈ ಜೀವನ ಸರ್ವಾಂಗವಾಗಿ ಸಿದ್ಧವಾಗಿದೆ. ದಯವಿಟ್ಟು ನನ್ನನ್ನು ಆತ್ಮಶಃ ಕ್ಷಮಿಸಿಬಿಡಿ. ನಿಮ್ಮಲ್ಲಿ ಅಂತಹ ದಯಾಗುಣವಿರುವುದರಿಂದಲೇ ಈ ಯಾಚನೆ... ಅತ್ಯಂತ ವಿನಯಪೂರ್ವಕವಾದ ಯಾಚನೆ.

ಇನ್ನು ಮಾನಸ ಗಂಗೋತ್ರಿಯ ವಿಚಾರವನ್ನು ಬರೆಯುವುದಾದರೆ

ಆತ್ಮ ಸಂತೋಷದಿಂದ ಬರೆಯಬಹುದು. ನನ್ನ ವ್ಯಾಸಂಗ ತೃಪ್ತಿಕರವಾಗಿ ನಡೆಯುತ್ತಿದೆ. ಪ್ರಶಾಂತ ವಾತಾವರಣ ವ್ಯಾಸಂಗಕ್ಕೆ ಅದ್ಭುತ ಪುಷ್ಟಿ ನೀಡುತ್ತದೆ. ಬೆಂಗಳೂರಿನ ಗಲಾಟೆ ಗದ್ದಲಗಳಿಂದ ದೂರವಾದುದು ಮನಸ್ಸಿಗೆ ತುಂಬ ಹಿತ. ಆದರೆ ನಿಮ್ಮಿಂದ ದೂರದೂರವಾದುದು ಅನುಭವಿಸಲಾಗದ ಪರಿತಾಪ.

ಬಿಡುವಿನ ದಿನಗಳಲ್ಲಿ ಚಾಮುಂಡಿಬೆಟ್ಟಕ್ಕೆ ಹೋಗಿ ಬರುವೆ. ನಾಲ್ಕಾರು ಮಂದಿ ಕೂಡಿಕೊಂಡು ಬೆಟ್ಟ ಹತ್ತಿ ಹೋಗುವುದರಲ್ಲಿ ತುಂಬ ಉಲ್ಲಾಸಕರವೆನಿಸುತ್ತದೆ. ಆಗೆಲ್ಲಾ ನಿಮ್ಮನ್ನು ಎಷ್ಟು ಜ್ಞಾಪಿಸಿಕೊಳ್ಳುತ್ತೇನೋ ದೇವರಿಗೇ ಗೊತ್ತು. ಚಾಮುಂಡೇಶ್ವರಿಯ ಮುಂದೆ ಕರ ಜೋಡಿಸಿದಾಗ ಹೊಮ್ಮುವ ಮೊದಲ ಪ್ರಾರ್ಥನೆ ಮುಂದಣ ದ್ವೈವಾರ್ಷಿಕ ವಸಂತಗಳು ಸರಾಗವಾಗಿ ಕಳೆದು ನಮ್ಮ ಹೃದಯ ಮಿಲನವಾಗಲಿ ಎಂದು. ಆ ಬಗ್ಗೆ ಭಗವತಿ ಖಂಡಿತ ದಯಮಾಡುವಳು ಎಂದು ಅಂತರ್ವಾಣಿ ಸದಾ ಕೂಗಿ ಹೇಳುತ್ತದೆ; ಅದು ದೇವಿಯ ಆದೇಶದ ಸ್ವರವೆಂದು ನನಗೆ ಖಂಡಿತ ಅನ್ನಿಸುತ್ತದೆ.

ನಾನು ನಿಮ್ಮ ಅಭಿಭಾವುಕನೆಂದಮಾತ್ರಕ್ಕೆ ಹಗ್ಗ ಕಿತ್ತ ಗೂಳಿಯಂತೆ ಸ್ವಚ್ಛಂದನಲ್ಲ. ನಿರ್ಧನನಾದರೂ ಧೂಳೀಕಣದಂತೆ ಹತಭಾಗ್ಯನಲ್ಲ. ಮರುಕಾಂತಾರದ ಪಯಣಿಗನಂತೆ ಪಥಭ್ರಾಂತನೂ ಅಲ್ಲ. ಕೊರಕಲ ಪ್ರದೇಶದಲ್ಲಿ ಬತ್ತಿಹೋಗುವ ನಿರ್ಮಲವಾರಿಯಂತೆ ವ್ಯರ್ಥ ಕಾಮನೂ ಅಲ್ಲ. ಅದಕ್ಕೆ ಆಗಸದ ತಾರೆಗಳೇ ಸಾಕ್ಷಿ!

ನೀವು ನನ್ನ ಒಕ್ಕಣೆಯನ್ನು ನೋಡಿ ನಗಬಹುದು. ಇರಲಿ, ಒಂದಲ್ಲ ಒಂದು ದಿನ ನನ್ನನ್ನು ಅರ್ಥಮಾಡಿಕೊಳ್ಳಬಲ್ಲಿರಿ ಎಂಬ ಪೂರ್ಣ ಭರವಸೆ ಲೇಖನಿಯ ಮೊನೆಯಲ್ಲಿ ಮಸಿಯನ್ನು ಹರಿಸುತ್ತಿದೆ. ಅಂತಲೇ ನಾನು ಸ್ವಸ್ಥ ಚಿತ್ತನಾಗಿರುವೆ. ಮುಂದಿನ ವರ್ಷ ಖಂಡಿತ ನೀವು ಎಂ. ಎ., ಗೆ ಸೇರಿಕೊಳ್ಳಿರಿ. ಅನಂತರ ಸಂಸಾರದ ಭಾರವನ್ನು ನಾನು ಸಂಪೂರ್ಣ ಹೊತ್ತುಕೊಳ್ಳುವೆ; ಡಾಕ್ಟರೇಟ್ ಮಾಡುವುದಾದರೂ ತುಂಬ ಸಂತೋಷ. ನಿಮಗೆ ಆ ಸಾಮರ್ಥ್ಯವಿದೆ ಎಂದು ಹೇಳಿಕೊಳ್ಳಲು ಹರ್ಷಿತನಾಗುವೆ. ಭಗವತಿ ನಿಮಗೆ ಧೈರ್ಯ ಸಾಹಸವನ್ನು ನೀಡಲಿ.

ಈ ಮಧ್ಯೆ ಬಿಡುವು ದೊರೆತರೆ ವಾರದ ಕೊನೆಯಲ್ಲಿ ಅಲ್ಲಿಗೆ ಬರಲು ಉದ್ದೇಶಿಸಿರುವೆ....

ನಿರ್ಮಲ ಕಾಗದವನ್ನು ಮಡಿಸಿಟ್ಟುಕೊಂಡಳು. ಸಾರಾಂಶ ಗ್ರಹಿತ ಚಿತ್ತ ಆನಂದಾವೃತ, ವಿಸ್ಫುರಿತವಾಗಿತ್ತು. ಕೆಲವು ಸಮಯ ಮನಃಪಟಲ ದಿಂದ ಜಗತ್ತು ಸಂಪೂರ್ಣ ಅಳಿಸಿಯೇ ಹೋಯಿತೇನೋ ...ನರನಾಡಿಗಳಲ್ಲಿ ಅದೇ ವಿಚಾರಧಾರೆ ಆರೋಹಣ ಅವರೋಹಣ ನಡೆಸುವಾಗ ಉಜ್ವಲ ನಯನದ್ವಯಗಳು ನಿಶ್ಚಲವಾಗಿ ಬೆಳಗಿದುವು. ಮುಖಮಂಡಲದಲ್ಲಿ ಭಾವೋದ್ವೇಗ ಸ್ಪಷ್ಟವಾಗಿ ಅಂಕಿತವಾಗಿತ್ತು. ನಿರಂತರ ಪರಿವರ್ತನವಾದ ಪ್ರಕೃತಿಯಲ್ಲಿ ಅದೆಂತಹ ಸಾಮರಸ್ಯ ತೋರುತ್ತಿದೆ? ಎಂತಹ ಆಶ್ಚರ್ಯ? ಸಂಭ್ರಮಯುಕ್ತ ನೋಟ ಪರಿಸರದಲ್ಲಿ ಹರಿದಾಗ ಶಾಲೆಯ ಉತ್ತಮಾಂಗದ ಮೇಲೆ ಹೆಮ್ಮರಗಳ ನೀಳನೀಳವಾದ ನೆರಳು ತಣ್ಣಗೆ ಹರಡಿತ್ತು. ನೆರಳು-ಬೆಳಕುಗಳ ರಮ್ಯ ಜೋಡಣೆಯ ರಂಗವಲ್ಲಿಯ ಮೇಲೆ ಮಕ್ಕಳು ಆನಂದೋತ್ಸಾಹದಿಂದ ಜಿಗಿದಾಡುತಿದ್ದರು. ಎಳೆಯ ದನಿಗಳ ಮೋಹಕ ರವ ಕಿವಿಯನ್ನು ಮುತ್ತುವಾಗ ಹೆಜ್ಜೆ ಹೆಜ್ಜೆಯೂ ಅತೀತ ಯುಗಧರ್ಮದ ಪಾಲಾದ ಬಗೆಯನ್ನು ಬೂಟಿನ ರವ ಸಾರಿ ಹೇಳುತಿತ್ತು. ಕಷ್ಟದ ಕಹಿಯನ್ನರಿಯದ ಆನಂದ ವಿಸ್ತೃತ ಮನುಕುಲಜ್ಯೋತಿ ಉಜ್ವಲವಾಗಿ ಜ್ವಲಿಸುತಿತ್ತು. ವಸಂತೋದಯ ಪಲ್ಲವಿಸುವ ಪುಷ್ಪಕೋಟಿಯಂತೆ ನಳನಳಿಸುವ ಬಾಲಕಿಯರ ದಳವನ್ನು ನೋಡುತ್ತ ಸ್ವಲ್ಪ ಹೊತ್ತು ನಿಂತಳು ನಿರ್ಮಲ. ಹೃದಯ ಸಂಪುಟದಲ್ಲಿ ಅನುಭೂತ ಆನಂದವಿಶೇಷ ಹಿಮಗಡ್ಡೆಯಂತೆ ಘನೀಭೂತವಾಯಿತು. ರಂಗುರಂಗಿನ ಅಧರೋಷ್ಠಗಳ ಮೇಲೆ ಲಘುಮಂದಹಾಸ ಹರಿದಾಡಿತು.

ಅದೇ ಸಮಯದಲ್ಲಿ ಅತ್ಯಂತ ಸನಿಹದಲ್ಲಿ ಹೆಜ್ಜೆಗಳ ಪಟತ್ಕಾರ ಕೇಳಿಬಂತು. ಪಟ. ಪಟ. ಪಟ. ಪಟ.

ಏಕನಿಷ್ಠೆಯಲ್ಲಿದ್ದ ಮನಸ್ಸು ವಿಮುಖವಾದಾಗ ನೋಟ ಸಹಜವಾಗಿ ಅತ್ತ ಹೊರಳಿತು. ಆಗಲೇ ಒಳಗೆ ಬಂದಿದ್ದ ವಿಮಲ ನಕ್ಕು ನೋವಿನಿಂದ ಹೇಳಿದಳು,

"ನನಗೆ ತುಂಬ ತಲೆನೋವು ನಾನೀಗ ಮನೆಗೆ ಹೋಗುವೆ."

"ಬರೀ ತಲೆನೋವು ಮಾತ್ರವೇ?" ಚಿಂತೆ ಭರಿತ ಕಂಠದಿಂದ ಕೇಳಿ

ದಳು ನಿರ್ಮಲ.

"ಹೌದು....ಅಷ್ಟೆ."

"ನಿನ್ನನ್ನು ನೋಡಿದರೆ ತುಂಬ ಬಳಲಿದಂತೆ ತೋರುತ್ತಿ." ಎನ್ನುತ್ತ ಮೈ ಕೈ ಮುಟ್ಟನೋಡಿದಳು ನಿರ್ಮಲ. ಮೈಯಲ್ಲಿ ಅಂತಹ ಬಿಸಿಯೇನೂ ಇರಲಿಲ್ಲವಾದರೂ "ಸರಿಯಾಗಿ ಹೇಳವ್ವಾ, ಇನ್ನೇನೂ ಇಲ್ಲವೇ ?" ಎಂದಳು ಮತ್ತೆ.

"ಆದ್ಯೋಪಾಂತವಾಗಿ ಹೇಳಲೇ ?"

ನುಡಿ ಹಾಸ್ಯರಸ ಪ್ರಧಾನವಾಗಿ ಹರಿದು ಬಂದಾಗ ಇಬ್ಬರ ತುಟಿಗಳಲ್ಲೂ ಎಳೆ ನಗುವಿನ ಲಹರಿ ಉಕ್ಕಿ ಹರಿಯಿತು.

ವಿಮಲ ಅಲ್ಲಿಂದ ಹೊರಟಳು. ಪ್ರಾಂಗಣವನ್ನು ದಾಟಿ ಉದ್ಯಾನದ ಹಾದಿ ಹಿಡಿಯುವವರೆಗೂ ಅವಳ ಅಪರದ್ದೇಶವನ್ನು ನೋಡುತಿತ್ತು ನೆಟ್ಟ ನೋಟ. ತಾನು ಸಂಸಾರಕ್ಕೆ ಕಾಲಿಡುವ ಮುನ್ನ ಅವಳ ಭವಿಷ್ಯವನ್ನೂ ರೂಪಿಸಿಕೊಳ್ಳಬೇಕಾಗಿದೆ. ಏನೇ ಇದ್ದರೂ, ಆತುರದ ಕ್ರಮ ಕೈಕೊಳ್ಳುವಂತಿಲ್ಲ ಎಂಬ ವಿವೇಚನೆ ದಂಗೆಯೆದ್ದಿತು. ನಿರ್ಮಲ ಶ್ರದ್ಧಾಭಿಮಾನವನ್ನು ಬದಿಗಿಟ್ಟು ಭಾರವಾದ ಉಸಿರನ್ನು ಹೊರ ಹರಿಯಬಿಟ್ಟಳು.

ಚೈತ್ರಮಾಸದ ಮಾವಿನ ಮೊಗ್ಗುಗಳು ಮನವನ್ನು ಉತ್ಸುಕಗೊಳಿಸುವಂತೆ ಶೃಂಗಾರಮಯವಾಗಿ ಅರಳಿದ್ದುವು. ಲೋಕಾಲೋಕಗಳ ಭ್ರಮರಾವಳಿಯೆಲ್ಲ ಝೇಂಕಾರಗೈಯ್ಯುತ್ತ ಅಲ್ಲಿ ಆವರಿಸಿಬಿಟ್ಟವೆ. ವೃಕ್ಷ ಶಿಖೆಯ ಪಕ್ಷಪಲ್ಲವದಲ್ಲಿ ಲೀಯಮಾನವಾದ ಕೋಗಿಲೆಯ ಕೂಜನ ಆಗಾಗ್ಗೆ ಕೇಳಿ ಬರುತಿತ್ತು. ನೆಲದ ಮೇಲೆ ಹದವರಿತು ಹರಡಿದಂತೆ ಚೆಲ್ಲಿ ಸೂಸಿದ್ದ ಜೀರ್ಣಿತ ಎಲೆ-ಹೂಗಳ ರಾಶಿರಾಶಿ. ಉಷ್ಣವಾತಾವರಣದಿಂದ ಮೈಯ್ಯಲ್ಲಿ ಬೆವರಿನ ಹನಿಗಳು ಒಸಿಯುತಿದ್ದರೂ ಅಂತಃಸ್ಥಲ ಯಾವುದೋ ಮಧುರಾನುಭೂತಿಯಿಂದ ತುಂಬಿಹೋಗಿತ್ತು. ತನ್ನ ಅಸ್ತಿತ್ವವನ್ನೇ ಸಮೂಲವಾಗಿ ಅಲುಗಾಡಿಸುವಂತೆ ತೋರಿತು ಆ ಮುಹೂರ್ತ!

ನಿರ್ಮಲ ಹಸನ್ಮುಖಿಯಾಗಿ ವಿಶ್ರಾಂತಿ ಕೊಠಡಿಯಕಡೆ ಹೋದಳು. ಬಾಗಿಲು ಹರವಾಗಿ ತೆರೆದಿತ್ತು. ಒಳಗಡೆ ಲೀಲಾ ಪಾರ್ವತಿಯರು ಆಗಲೇ ಕಾಫಿ ಸೇವನೆಯಲ್ಲಿ ನಿಮಗ್ನರಾಗಿದ್ದರು. ಹೊಸ್ತಿಲು ದಾಟುವುದರೊಳಗಾಗಿ

ಪಾರ್ವತಿಯ ಪ್ರಶ್ನೆ ಹೊರಬಿತ್ತು "ಏನಮ್ಮಾ, ವಿಶೇಷ ?"

ಆ ಪ್ರಶ್ನೆಯನ್ನು ನಿರೀಕ್ಷಿಸಿರಲಿಲ್ಲವಾದುದರಿಂದ ಅವಳಲ್ಲಿ ಸಿದ್ಧ ಉತ್ತರವೂ ಇರಲಿಲ್ಲ. ಅಂಬರವಿಹಾರಿಯಾಗಿದ್ದ ಚಿತ್ತ ಸರ್ರನೆ ಕೆಳಗಿಳಿದು ಒಂದೆರಡು ಕ್ಷಣ ಚಡಪಡಿಸಿತ್ತೇನೋ. ಅನಂತರ ನಗುಮುಖದಿಂದ ಉತ್ತರವನ್ನು ಹೊರಹಾಕಿದಳು. "ಏನಿಲ್ಲಮ್ಮಾ, ಮಕ್ಕಳ ರಾಜ್ಯದಲ್ಲಿರುವಾಗ ನಾವೂ ಮಕ್ಕಳಾಗಿಬಿಡುತ್ತೇವೆ, ಅಷ್ಟೆ."

"ನಿನ್ನ ಕಾಫಿ ತಣ್ಣಗಾಯಿತೇನೋ." ಎನ್ನುತ್ತ ಲೋಟಿಗೆ ಬಗ್ಗಿಸಿ ಮುಂದಿಟ್ಟಳು ಲೀಲಾ.

"ಈ ಸಲ ಮೈಸೂರಿನ ಟ್ರಿಪ್ಪಿಗೆ ನೀನೂ ಬರುತ್ತೀ ತಾನೇ ?"

ಸ್ವಲ್ಪಹೊತ್ತು ಯೋಚಿಸಿ, "ಓ, ಈಗ ನನಗೆ ಸಾಧ್ಯವಾಗುವುದಿಲ್ಲ ಲೀಲಾ." ಎಂದಳು ನಿರ್ಮಲ.

"ಏಕಮ್ಮಾ?" ಪಾರ್ವತಿಯ ಪ್ರಶ್ನೆ.

"ನಿಜವಾಗಿ....?" ಎಂದಳು ಲೀಲಾ.

"ಮೋಹಿನಿಯನ್ನು ಸದ್ಯ ಆಸ್ಪತ್ರೆಗೆ ಸೇರಿಸಬೇಕಾಗುತ್ತದೆ. ಅವಳಿಗೆ ಈಗಲೇ ಹೆರಿಗೆ ಸಮಯ. ಪ್ರಸನ್ನ ಇನ್ನೂ ಜೈಲಿನಲ್ಲಿದ್ದಾನೆ." ಎಂದ ನಿರ್ಮಲ ಸ್ವಲ್ಪ ಹೊತ್ತಿನನಂತರ ಪುನಃ ಕೇಳಿದಳು "ಎಷ್ಟು ಮಕ್ಕಳ ಜೋಡಣೆಯಾಯ್ತು ?"

"ಓ, ಈಗ ಬಸ್ಸಿಗೆ ಭರ್ತಿಯಾಗಿದ್ದಾರೆ. ಮೂವರು ಉಪಾಧ್ಯಾಯಿನಿಯರು. ನಾನೇನೋ ಒಪ್ಪಿಕೊಂಡಿರುವೆ. ಇನ್ನಾರು ಆರಿಸಲ್ಪಡುವರೋ ತಿಳಿಯದು."

"ನಾನೂ ಬರಬಹುದಾಗಿತ್ತು, ಈ ತೊಂದರೆ ಇಲ್ಲದಿದ್ದರೆ.."

"ಅಮರನಾಥನ ಭೇಟಿ ಬೇರೆ ಆಗುತಿತ್ತು!" ಪಾರ್ವತಿ ತುಂಟನಗೆ ಬೀರಿದಳು. ನುಡಿ ಹಾಸ್ಯರಸ ಪ್ರಧಾನವಾಗಿ ಹರಿದಾಗ ಹೊಳೆ ಹೊಳೆಯುವ ನಯನದ್ವಯಗಳಲ್ಲಿ ಕಿಡಿಗೇಡಿತನದ ಕಿಡಿಗಳು ಮೂಡಿದುವು

ಆ ಮಾತಿನಿಂದ ನಿರ್ಮಲೆಯ ಚಂಗೆನ್ನೆಗಳಲ್ಲಿ ಚಂದನವೊರೆದಂತೆ ರಂಗು ಮೂಡಿತು. ಆದರೂ ಅದನ್ನು ತೋರಗೊಡದಂತೆ ಎಚ್ಚರವಹಿಸಿ ಅತ್ಯಂತ ಶ್ರದ್ಧೆಯಿಂದ ಉತ್ತರಿಸಿದಳು,

"ಅದೇನು ಮಹಾ ವಿಶೇಷ ? ಭೇಟಿ ಎಲ್ಲಾದರೂ ಆಗುತ್ತೆ."

ಈ ನೀರಸ ಪ್ರವೃತ್ತಿಯನ್ನು ವಿಸ್ಮಯಾಧಿಕ್ಯದಿಂದ ನಿಟ್ಟಿಸಿದ ಪಾರ್ವತಿ ಮುಖಮುದ್ರೆಯಲ್ಲಿ ಆಶ್ಚರ್ಯವನ್ನು ಸೂಸಿ ಹೇಳಿದಳು "ಅಹಹಹಹ್ಹ! ಬೆಕ್ಕು ಕಣ್ಮುಚ್ಚಿ ಹಾಲು ಕುಡಿದರೆ ಯಾರಿಗೂ ಗೊತ್ತಾಗದೇ ?"

"ನೀವು ಏನಾದರೂ ತಿಳಿದುಕೊಳ್ಳಿ. ಅದರಲ್ಲಿ ನನ್ನ ಅಡ್ಡಿ ಏನೂ ಇಲ್ಲ"

ದೀಪ್ತ ಸ್ವರದಲ್ಲಿ ಉತ್ತರ ಮೊಳಗಿತು.

ಲೀಲಾ ಪಾರ್ವತಿಯರು ತಮ್ಮ ತಮ್ಮ ಧಪ್ತರಗಳೊಡನೆ ತಮ್ಮ ತಮ್ಮ ತರಗತಿಯ ಕಡೆ ಹೊರಟರು. ಪ್ರಾಂಗಣದಲ್ಲಿ ಚಿಟ್ಟೆಗಳಂತೆ ಜಿಗಿದಾಡುತಿದ್ದ ಮಕ್ಕಳೂ ಅವರನ್ನು ಅನುಸರಿಸಿದರು.

ನಿರ್ಮಲ ಮೇಜಿನ ಮೇಲೆ ಮೊಳಕೈಯ್ಯೂರಿ ಹಸ್ತದ ಮೇಲೆ ಶಿರೋಭಾರವನ್ನಿಳುಹಿದಳು. ಪತ್ರದ ಒಕ್ಕಣೆಯೆಲ್ಲಾ ಹೃದಯಪದ್ಮ ಪತ್ರದಲ್ಲಿ ಸ್ವಚ್ಛಂದವಾಗಿ ಮುದ್ರಿತವಾಗಿತ್ತು....ಹೇಗೆ ಉತ್ತರಿಸಬೇಕೋ....ಯಾವ ರೀತಿಯಲ್ಲಿ ಮನಃಪ್ರವಾಹವನ್ನು ಹರಿಯಬಿಡಬೇಕೋ ಹೊಳೆಯುತ್ತಿಲ್ಲ. ಆ ಚಿಂತಾ ಶಾಂತಿ ಮುಖಬಿಂಬದ ಕುಂಕುಮಗೌರಕಾಂತಿಗೆ ಮೆರಗನ್ನು ಕೊಟ್ಟಂತಿತ್ತು. ಮಂದಮಂದಾನಿಲನ ಆಶ್ಲೇಷದಿಂದ ವಾಸಂತೀ ಉತ್ತರೀಯ ಚಂಚಲವಾಗಿತ್ತು.

"ಮೇಡಂ....!"

"........"

"ಮೇಡಂ!"

ವಿಚಾರ ವಿಹಾರಿಯಾಗಿದ್ದ ಚಿತ್ತ ತಟ್ಟನೆ ಇತ್ತ ಹರಿಯಿತು. ನೋಡಿದರೆ ಬಾಗಿಲ ಬಳಿ ನೀಲಿ ಸಮವಸ್ತ್ರ ಧರಿಸಿದ ಸುಂದರ ಬಾಲೆ!

"ಏನಮ್ಮಾ ?"

"ಪ್ರಿನ್ಸಿಪಲ್ ನಿಮ್ಮನ್ನು ಕರೆಯುತಿದ್ದಾರೆ."

ನಿರ್ಮಲ ಎದ್ದು ಅವಳೊಡನೆ ಹೊರಡುತ್ತ ಕೇಳಿದಳು,

"ನೀನು ಯಾವ ತರಗತಿಯಲ್ಲಿದ್ದಿ ?"

"ಐದನೆ ತರಗತಿ."

ಯಾವ ಸೆಕ್ಷನ್....?"

"B. ಸೆಕ್ಷನ್"

"ನಿನ್ನ ಹೆಸರು ?"

"ಧಾರುಣೀ !"

"ಬಲು ಮುದ್ದಾಗಿದೆ ಹೆಸರು ! ನೀನೂ ಅಷ್ಟೇ ಮುದ್ದಾಗಿದ್ದಿ !"

ಪ್ರಶಂಸೆ ಮುಖಬಿಂಬದ ಮೇಲೆ ಲಜ್ಜೆ-ಆನಂದಗಳ ಹೊಂಗೆಂಪು ಅರಳಿಸಿತು.

ಆಫೀಸ್ ಮುಟ್ಟಿದಾಗ ಪ್ರಿನ್ಸಿಪಲ್ ತಮ್ಮ ಕೆಲಸ ಮುಗಿಸಿದ್ದಳು. ಅವಳ ಮುಗುಳುನಗೆ ಸ್ವಾಗತ ನೀಡಿತು.

"ವಂದನೆಗಳು !"

ಪ್ರತಿವಂದನೆ ಸಲ್ಲಿಸಿ "ಬಾ ಮಗೂ !" ಎಂದ ಪ್ರಿನ್ಸಿಪಲ್, ಅನಂತರ ಹೇಳಿದಳು "ಈ ಮಗುವಿಗೆ ಟ್ಯೂಶನ್ ಬೇಕಂತೆ. ಮೂರು ತಿಂಗಳು ಬೇಸಗೆ ಪರೀಕ್ಷೆಯವರೆಗೆ ದಿನವೂ ಟ್ಯೂಶನ್ ಕೊಡಬೇಕಾಗುತ್ತೆ."

"ಹುಡುಗಿ ಬಹಳ ಚಟುವಟಿಕೆಯಾಗಿದ್ದಾಳೆ....?" ಅರಳುಕಂಗಳಲ್ಲಿ ಆಶ್ಚರ್ಯಭಾವವನ್ನು ಸೂಸಿದಳು ನಿರ್ಮಲ.

"ಹೌದು ಇದ್ದಾಳೆ....ಕಲಿಕೆ ಸಾಲದು."

"ನಾಳೆಯಿಂದ ಬೆಳಗಿನ ಪಾಠಕ್ಕೆ ಬರುವೆಯಾ ?"

"ಆಗಲಿ, ಮೇಡಂ !"

ಅವಳಿಗೆ ತಾಯಿ ಇಲ್ಲ. ಚಿಕ್ಕಮ್ಮ ಇದ್ದಾಳೆ ; ಮನೆಯಲ್ಲಿ ಸುಖವಿಲ್ಲ ವೆಂದು ಅವಳ ತಂದೆ ಇಲ್ಲೇ ಬೋರ್ಡಿಂಗ್‌ನಲ್ಲಿ ಬಿಟ್ಟಿದ್ದಾರೆ."

ವಿಷಯ ತಿಳಿದಾಗ ಕರುಳು ಹರಿಯುವಂತಾಯಿತು. ನೋಟವನ್ನು ವಿಷಣ್ಣಭಾವದಿಂದ ಅವಳೆಡೆಗೆ ಹರಿಸಿದಳು. ಬೆರಳು ಕಚ್ಚುತ್ತಾ ಮೂಕ ಪ್ರಾಣಿಯಾಗಿ ನಿಂತಿದ್ದಳು ಹುಡುಗಿ. ಮುಖಭಾವ ಮ್ಲಾನವಾಯಿತು.

"ಓ....ಇಲ್ಲೇ ಇದ್ದೀಯಾ ? ಇನ್ನೇನು ಹೋಗಿಬರುವ ತೊಂದರೆಯೇ ಇಲ್ಲವಲ್ಲ, ಬೆಳಿಗ್ಗೆ ತಯಾರಿರು ; ನಾನು ಒಂಭತ್ತು ಗಂಟೆಗೆಲ್ಲಾ ಇಲ್ಲಿರುವೆ. ಆಯಿತೇ ಮಗೂ ?"

ಅವಳ ತಲೆಯ ಮೇಲೆ ಕೈಯಿಟ್ಟು ಮುದ್ದುಗೈಯ್ಯುತ್ತ ಕೇಳಿದಳು

ನಿರ್ಮಲ.

"ಆಗಲಿ...."

ಪ್ರಿನ್ಸಿಪಲ್ ಅಲ್ಲಿಂದ ಬೇರೆಡೆಗೆ ಹೊರಟಳು.

ತಲೆಬಾಗಿದ ಹುಡುಗಿಯ ಗಲ್ಲವನ್ನು ಹಿಡಿದೆತ್ತಿ ಕೇಳಿದಳು "ಎಷ್ಟು ದಿನಗಳಿಂದ ಇಲ್ಲಿದ್ದಿ ?"

"ಕಳೆದ ಬೇಸಿಗೆಯಿಂದ."

"ಅದರ ಮೊದಲು....?"

"ಮನೆಯಿಂದ ಬರುತಿದ್ದೆ."

"ಈ ಶಾಲೆಯಲ್ಲಿ ಎಷ್ಟು ವರ್ಷದಿಂದ ಇದ್ದೀಯಾ ?"

"ನಾಲ್ಕನೆ ತರಗತಿಯಿಂದ."

"ಮತ್ತೇಕೆ ಈಗ ಟ್ಯೂಷನ್ ? ಹೋದವರ್ಷ ಉತ್ತೀರ್ಣಳಾಗಿದ್ದಿ. ನಂಬರ್ ಎಷ್ಟು ಬಂದಿತ್ತು ?"

"ತುಂಬ ಕಡಿಮೆ....ಈಗ ಪಾಠ ಬಹಳ ಕಷ್ಟವಾಗುತ್ತೆ."

"ನಾಳೆಯಿಂದ ತಪ್ಪದೆ ಪಾಠಕ್ಕೆ ಬಾ; ನಾನು ನಿನಗೆ ಸಹಾಯ ಮಾಡುವೆ."

ಅತ್ಯಂತ ಅನುಕಂಪದಿಂದ ನುಡಿದಳು ನಿರ್ಮಲ. ಧಾರುಣಿ 'ಹ್ಞೂ' ಎಂಬಂತೆ ತಲೆಯಾಡಿಸಿದಳು, ಮಾತಾಡಲಿಲ್ಲ.

"ನಾನೀಗ ತರಗತಿಗೆ ಹೋಗಲೆ ?"

"ಆಗಲಿ."

ಧಾರುಣಿ ಅಲ್ಲಿಂದ ಸರಸರನೆ ಹೊರಟಳು.

ನಿರ್ಮಲಳ ಕುಡಿನೋಟ ಅವಳನ್ನೇ ನಿಟ್ಟಿಸಿತು.

೧೩

.... ಜಗದ್ವಲಯದಲ್ಲಿ ಅದ್ಭುತ ಸಂಧ್ಯಾಶಾಂತಿ ಅನುಭೂತವಾಗಿತ್ತು.

....ಗಗನತಲದ ನೀಲಿಮಾರಂಗದಲ್ಲಿ ಅಪೂರ್ವ ರಾಗಾರುಣ ರಂಜಿತವಾಗಿತ್ತು.

...ಕೆಂಧೂಳಿನಿಂದ ಪಟಲಿತವಾದ ಆಕಾಶಮಾರ್ಗ ಧೂಸರಾಯಮಾನ ವಾಗಿತ್ತು.

ನಿರ್ಮಲ ಶಾಲೆಯ ಪಾಠಕ್ರಮಗಳನ್ನು ಮುಗಿಸಿದನಂತರ ಸಂಧ್ಯಾ ಸೊಬಗಿಗೆ ಮೈಗೊಟ್ಟು ಆಸ್ಪತ್ರೆಯ ಕಡೆ ಹೊರಟಳು. ಹೃದಯಸ್ಥಿತ ಉಷ್ಣ ಭರಿತ ಪ್ರೇಮಾನಂದಧಾರೆಯ ತೀಕ್ಷ್ಣತೆಯಿಂದ ಶರೀರ ಸಂಪತ್ತು ಜ್ವಲಂತ ಆಗ್ನೇಯಗಿರಿಯಂತೆ ಉಷ್ಣೋಷ್ಣವಾಗಿತ್ತು. ಅದು ತನ್ನ ವಿಕೃತ ಚಿಂತನದ ಪರಿಣಾಮವೇ ಎಂಬುದು ಮನವರಿಕೆಯಾದಾಗ ತನ್ನನ್ನು ತಾನು ನಿಗ್ರಹಿಸಲು ಸಮರ್ಥಳಾದರೂ ಆರ್ದ್ರಾರ್ದ್ರ ಮುಖಮಂಡಲದ ಮೇಲೆ ಎಳೆಚಂದನರಾಗ ಬೆರೆಯಿತು. ಕರವಸ್ತ್ರದಿಂದ ಮುಖವನ್ನು ತೀಡಿಕೊಂಡು ನೋಟವನ್ನು ಬಸ್ಸಿನ ನಿಲ್ದಾಣದೆಡೆಗೆ ಹರಿಯಬಿಟ್ಟಳು. ಬಸ್ಸುಗಳು ಸಾಲಾಗಿ ನಿಂತಿದ್ದುವು. ಬಹಳ ಹೊತ್ತಿನಿಂದ ಕಾದಿದ್ದ ಪಥಿಕರ ನೂಕುನುಗ್ಗಲಾಟ; ಮಂದಮತಿಗಳ ಅತಿ ವರ್ತನೆ; ದುರಹಂಕಾರಿಗಳ ದರ್ಪೋದ್ಧತ ಧೋರಣೆ ಒಂದೊಂದೂ ಅಸಹ್ಯ ವಾಗಿದ್ದುವು. ಆದರೂ ಪಯಣಿಸದೆ ವಿಧಿ ಇರಲಿಲ್ಲ. ಬಸ್ಸು ಆಸ್ಪತ್ರೆಯ ವಲಯ ವನ್ನು ಮುಟ್ಟಿದಾಗ ಹೊತ್ತು ಐದರ ಅಂಚನ್ನು ದಾಟಿತ್ತು. ಅಲ್ಲಿನ ರೋಗಿಗಳ ಕುಟುಂಬ ವರ್ಗದವರು ಒಂದೇ ಸಮನೆ ಬರುತ್ತಿದ್ದಾರೆ. ಕಣ್ಣು ಮುಖಗಳಲ್ಲಿನ ಆತಂಕ ಮಾನವೀಯತೆಯನ್ನು ಪ್ರದರ್ಶಿಸುವಂತಿತ್ತು. ಆಸ್ಪತ್ರೆಯ ವರಾಂಡಕ್ಕೆ ಕಾಲಿಡುವುದೇ ತಡ ಲೋಶನ್ ವಾಸನೆ ಮೂಗನ್ನು ಮುತ್ತಿತು. ಹಾದಿ ಯುದ್ದಕ್ಕೂ ಜವಾನರೂ ದಾದಿಯರೂ ಎದುರಾದರು. ಅನೇಕ ವೇಳೆ ಡಾಕ್ಟ ರುಗಳೂ ಕಾಣಬಂದರು. ರೋಗಿಗಳ ಸಂಬಂಧಿಗಳಲ್ಲಿ ಕಷ್ಟ-ಸುಖಗಳ ನೆರ ದೃಗ್ಗೋಚರಿಸುತಿತ್ತು. ಎಲ್ಲವನ್ನೂ ಏಕನಿಷ್ಠೆಯಿಂದ ಅವಲೋಕಿಸುತ್ತ ವಾರ್ಡಿಗೆ ಕಾಲಿಟ್ಟಾಗ ಅಲ್ಲಿ ಮೋಹಿನಿ ಇರಲಿಲ್ಲ. ಅಲ್ಲಿದ್ದ ದಾದಿಯನ್ನು ಕೇಳಿದಳು ನಿರ್ಮಲ,

"ಎಲ್ಲಮ್ಮಾ, ಮೋಹಿನೀ ?"

"ಲೇಬರ್ ವಾರ್ಡಿಗೆ ಕರೆದುಕೊಂಡು ಹೋಗಿದ್ದಾರೆ."

"ಹೆರಿಗೆಯಾಯಿತೇ ?"

ಗೊತ್ತಿಲ್ಲ."

"ನಿರ್ಮಲ ಲೇಬರ್ ವಾರ್ಡ್ ಕಡೆ ಹೊರಟಳು.

ಕಲ್ಲಿನ ಬೃಹದ್ ಕಟ್ಟಡ. ಇತ್ತೀಚೆಗೆ ಅದರ ಶತಮಾನೋತ್ಸವನ್ನು ಆಚರಿಸಿದ್ದಾರೆ. ಆ ಮಹೋತ್ಸವದ ಅಂಗವಾಗಿ ಬಹಳ ಶುದ್ಧೀಕರಣ ನಡೆದಿದೆಯಾಗಿ ಪತ್ರಿಕಾ ವಾರ್ತೆ ತಿಳಿಸಿತ್ತು. ಆದರೆ ಅದನ್ನು ಅಲ್ಲಿ ಗುರುತಿಸುವುದು ಕಷ್ಟ. ಲೇಬರ್ ವಾರ್ಡಿನವರೆಗೆ ಹೇಗೆ ಹಾದಿ ಸಾಗಿತೋ ಅವಳು ಅರಿಯಳು. ಚಿತ್ತಾಲೋಕವನ್ನು ಯಾವ ಯಾವ ಪ್ರಸಂಗ ಆವರಿಸಿತ್ತೋ ಅದೂ ಸಹ ತಿಳಿಯದು. ಕ್ರಮವಿಹೀನ ಆಲೋಚನೆಗಳ ಧಾಳಿಯಲ್ಲಿ ಮಂತ್ರಮುಗ್ಧಳಂತೆ ಬಾಗಿಲ ಬಳಿ ನಿಂತಾಗ ಕಿವಿಗೆ ಸ್ತ್ರೀ ಕಂಠಗಳ ಚೀತ್ಕಾರ ಕಿವಿಗೆ ಕಾದ ಎರಕ ಸುರಿದಂತೆ ಮೊಳಗಿತು. ಹಾಗೇ ಅಲ್ಲಿದ್ದ ಬೆಂಚಿನ ಮೇಲೆ ಕುಳಿತುಕೊಂಡಳು. ಹೃದಯ ಸಂಪುಟದಲ್ಲಿ ಅನುಕಂಪದ ಒರತೆ ಸಹಸ್ರ ಸ್ರೋತಗಳಾಗಿ ಹರಿಯಿತು. ಭವ್ಯ ಭವಿತವ್ಯದ ಉದ್ದಂಡ ವಲಯದಲ್ಲಿ ಚಿತ್ತ ಅಂಡಲೆಯ ತೊಡಗಿತು.

ಬಹಳ ಹೊತ್ತಿನನಂತರ ಮುಚ್ಚಿದ್ದ ಕದ ತೆರೆಯಿತು.

ಒಳಗಿದ್ದ ನರ್ಸ್ ಹೊರಬಂದು ಹೇಳಿದಳು,

"ಹೆಣ್ಣುಮಗು ಜನನವಾಗಿದೆ. ತಾಯಿ ಬಹಳ ಸುಸ್ತಾಗಿದ್ದಾಳೆ. ಈ ತಕ್ಷಣವೇ ಎರಡು ಸೀಸೆ ರಕ್ತ ಕೊಡದಿದ್ದರೆ ಬದುಕುವ ಸಂಭವ ಕಡಿಮೆ."

ನಿರ್ಮಲೆಗೆ ಒಮ್ಮೆಲೇ ಮೈಮೇಲೆ ಬಿಸಿ ನೀರು ಎರಚಿದಂತಾಯಿತು. ಹೃದಯ ಇದಕ್ಕಿದ್ದಂತೆಯೇ ವ್ಯಾಪ್ತಿಗೆ ಮೀರಿ ಮಿಡಿಯ ಹತ್ತಿತು. ಒಂದೇ ಬಾರಿಗೆ ಅಷ್ಟೊಂದು ಹಣವನ್ನಾದರೂ ಎಲ್ಲಿಂದ ಒದಗಿಸುವುದು, ತನ್ನ ಕೈಯಲ್ಲಿದ್ದುದು ಚಿಲ್ಲರೆ ಹಣ ಮಾತ್ರ. ಒಳ ಹೋಗಿ ಮೋಹಿನಿಯನ್ನು ನೋಡಿದಳು. ಮೇಜಿನ ಮೇಲೆ ಅತ್ಯಂತದುರ್ಬಲ ಶರೀರ ಬಳಲಿ ಮಲಗಿತ್ತು. ಹಣೆಯ ಮೇಲೆ ಕೈಯಿಟ್ಟು "ಮೋಹಿನೀ!" ಎಂದಳು ಮೆಲುದನಿಯಲ್ಲಿ.

ಮೋಹಿನಿ ಸ್ವಲ್ಪಹೊತ್ತು ಕಣ್ದೆರೆದು ಹಾಗೇ ಮುಚ್ಚಿಕೊಂಡಳು. ಅವಳಲ್ಲಿ ಮಾತಾಡುವ ಚೈತನ್ಯವೂ ಉಳಿದಿರಲಿಲ್ಲ.... ಇನ್ನು ಮನೆಗೆ ಹೋಗಿ ಬರುವುದಾಗಲೀ, ಬ್ಯಾಂಕಿಗೆ ಹೋಗುವುದಾಗಲೀ ಆಗದ ಮಾತು. ಮನೆಯಲ್ಲಿ ಯಾರಿಗೂ ಗೊತ್ತಿರದಿದ್ದುದರಿಂದ ಯಾರೂ ಬಂದಿರಲಿಲ್ಲ. ಪ್ರಫುಲ್ಲ "ರಾತ್ರಿಯೂಟ ತೆಗೆದುಕೊಂಡು ಒಮ್ಮೆಗೇ ಬರುವೆ" ಎಂದಿದ್ದ.

ಅವನು ಬರುವುದು ತುಂಬ ಹೊತ್ತಾಗುತ್ತದೆ. ಅದುವರೆಗೆ ತಡೆಯುವಂತಿಲ್ಲ. ಏನು ಮಾಡಬೇಕೋ ತಿಳಿಯಲಿಲ್ಲ. ಕಿಂಕುರ್ವಾಣತೆ ತುಂಬಿದ ಮನಸ್ಸು ಚಡಪಡಿಸಿತು. ಹಾಗೇ ಸ್ವಲ್ಪಹೊತ್ತು ಯೋಚಿಸಿ ಅತ್ಯಂತ ಕಳವಳ ಭರಿತವಾಣಿಯಲ್ಲಿ ಅಲ್ಲಿದ್ದ ಡಾಕ್ಟರಿಗಂದಳು,

"ನನ್ನ ರಕ್ತ ಹೊಂದುವುದಾದಲ್ಲಿ ನನ್ನಿಂದಲೇ ಒಂದು ಸೀಸೆ ತೆಗೆದುಕೊಳ್ಳಿ, ಡಾಕ್ಟರ್!"

"ನೀವೇ ಸಣ್ಣಗಿದ್ದೀರಿ....?"

"ಪರವಾಯಿಲ್ಲ; ಶಕ್ತಿ ಇದೆ."

ಡಾಕ್ಟರು ಅನುಮಾನಿಸಿದರು.

ಆದರೂ, ಹೆಚ್ಚು ಹೊತ್ತು ವಿಳಂಬ ಮಾಡುವಂತಿರಲಿಲ್ಲ; ರಕ್ತ ಪರೀಕ್ಷೆ ನಡೆಸಿದಾಗ ಅದು ಸರಿ ಹೊಂದಿಕೆಯಾಯಿತು.

"ದೇವರು ಅಷ್ಟಾದರೂ ಉಪಕಾರ ಮಾಡಿದನಲ್ಲಾ" ಎಂಬ ಸಮಾಧಾನ ಮನದಲ್ಲಿ ಮೂಡಿತು. ರಕ್ತ ತೆಗೆಯಲು ಒಪ್ಪಿಗೆ ನೀಡಿದಳು. ಒಂದು ಸೀಸೆ ರಕ್ತ ತೆಗೆದನಂತರ ಮೆಲ್ಲಗೆ ತಲೆ ಸುತ್ತುತ್ತಿರುವಂತೆ ಭಾಸವಾಯಿತು. ಪಲ್ಲಂಕದ ಮೇಲೆ ತೀರ ಸುಸ್ತಾದಂತೆ ಉಸಿರಾಡುತ್ತ ಮಲಗಿಕೊಂಡಳು. ಮೋಹಿನಿಯ ಸ್ಥಿತಿ, ಆರ್ಥಿಕ ಸಮಸ್ಯೆ, ಜೀವನ ಪರಿಸ್ಥಿತಿ ಮನಃಪ್ರಾಣಗಳನ್ನು ಕೀಟದಂತೆ ಕೊರೆಯುತಿದ್ದುವು. ಕ್ಷಣಕ್ಷಣಕ್ಕೂ ನೈರಾತ್ಮ್ಯಭಾವನೆ ಬೆಳೆಯುತಿದ್ದಂತೆ ಭಾಸವಾಯಿತು. ಹಾಗೆ ಅದೆಷ್ಟು ಹೊತ್ತು ಕಳೆಯಿತೋ.... ಮೈಯಲ್ಲಿ ನಸು ಕಂಪನದ ಅಲೆ ಹರಿದಾಡಿದಾಗಲೇ ಇತ್ತಗಮನ. ನಿಶ್ಶಕ್ತಿಯ ಪರಿಣಾಮದಿಂದ ಮುಖಬಿಂಬ ಮ್ಲಾನವಾಗಿ ತೊಟ್ಟು ಕಳಿದ ಹೂವಿನಂತೆ ಬಾಡಿತ್ತು.

ಪ್ರಫುಲ್ಲ ಒಳ ಹೆಜ್ಜೆಯಿಟ್ಟಾಗ ಹೊತ್ತು ಎಂಟರ ಅಂಚಿನಲ್ಲಿತ್ತು. ತೀರ ಬಳಲಿ ಮಲಗಿದ್ದ ಅವಳನ್ನು ನೋಡಿ ವಿಷಯ ತಿಳಿದು ಸಖೇದಾಶ್ಚರ್ಯದಿಂದ ನುಡಿದ "ನೀನಿರುವ ಸ್ಥಿತಿಯಲ್ಲಿ ರಕ್ತದಾನ ಮಾಡಿದರೆ ಹೇಗಿರಬೇಡ? ಅಷ್ಟೇಕೆ ಆತುರ ಪಟ್ಟೆ? ನಾನೀಗ ತಂದುಕೊಡುತ್ತಿರಲಿಲ್ಲವೇ?"

"ಅವಳ ಸ್ಥಿತಿ ನೋಡಿದರೆ ತಡೆಯುವಂತೆಯೇ ಇರಲಿಲ್ಲ. ಇನ್ನೂ ಒಂದು ಸೀಸೆ ಬೇಕಂತೆ, ನೀನು ಈಗಲೇ ಹೋಗಿ ತಂದುಕೊಡುವುದು ಒಳ್ಳೆಯದು."

"ತರುವೆ....ಆದರೆ ನಿನ್ನ ಕತೆಯೇನು? ನಿನಗೂ ಒಂದು ಸೀಸೆ ತರಲಿ?"

"ಬೇಡ.... " ಎಂದು ಮುಗುಳು ನಕ್ಕಳು ನಿರ್ಮಲ. ಕಂಠಸ್ವರವು ಕೋಮಲವಾಗಿ ಶಾಂತಭಾವದಿಂದ ಕೂಡಿತ್ತು. ಅವನು ಸ್ವಲ್ಪ ಹೊತ್ತು ಅಭಿಭೂತನಂತೆ ನಿಂತಿದ್ದು ಅನಂತರ ಅಂದ,

"ಇದು ಹುಚ್ಚು ಸಾಹಸ!"

"ಏನು ಮಾಡುವುದು? ಕೆಲವೊಮ್ಮೆ ಎಲ್ಲಕ್ಕೂ ತಲೆ ಮಣಿಯ ಬೇಕಾಗುತ್ತೆ."

"ಈಗ ನಿನಗೇನಾದರೂ ಬೇಕೆ?"

"ಏನೂ ಬೇಡ. ನೀನು ಹೋಗಿ ಇನ್ನೊಂದು ಸೀಸೆ ರಕ್ತ ತೆಗೆದು ಕೊಂಡು ಬಾ. ನಾನು ಮೋಹಿನಿಯ ಬಳಿಯಲ್ಲಿರುವೆ." ಎನ್ನುತ್ತ ಎದ್ದು ಕುಳಿತಳು ಅವಳು. ಆರ್ದ್ರಮುದ್ರಿತ ನಯನಗಳಲ್ಲಿ ಮಿಂಚಿನಂತಹ ಹೊಳಪು ಕಾಣಿಸಿತು. ಪ್ರಫುಲ್ಲ ಕ್ಷಣಕಾಲ ಬೆರಗಾಗಿ ನಿಂತು ವಿಕ್ಷುಬ್ಧ ಚಿತ್ತನಾಗಿ ನುಡಿದ "ನೀನು ಈಗಲೇ ಏಳುವುದು ಬೇಡ. ನಾನು ಹೋಗುವಾಗ ನೋಡಿ ಕೊಂಡೇ ಹೋಗುವೆ. ಯೋಚನೆ ಬೇಡ, ಅವಳಿಗಾಗಿ ತಂದ ಊಟವಿದೆ. ಅದನ್ನು ಉಂಡು ವಿಶ್ರಾಂತಿ ತೆಗೆದುಕೊ."

"ಪರವಾಯಿಲ್ಲ, ಒಮ್ಮೆ ನೋಡಿಕೊಂಡು ಬರುವೆ."

ಇಬ್ಬರೂ ಲೇಬರ್ ವಾರ್ಡಿಗೆ ಹೋದರು. ಅಶಕ್ತ ಶರೀರಕ್ಕೆ ಉದ್ದನೆಯ ನಳಿಕೆಯ ಮೂಲಕ ರಕ್ತ ಸಂಯೋಜನೆ ನಡೆಯುತಿತ್ತು. ಮುಖಮಂಡಲ ದಲ್ಲಿ ನಿಶ್ಶಕ್ತಿಯ ಕಪ್ಪು ಕವಿದಿತ್ತು. ನಯನಗಳು ನಿಮೀಲಿತವಾಗಿದ್ದುವು. ಅವಳ ಸ್ಥಿತಿಯನ್ನು ನೋಡಿದೊಡನೆಯೇ ದೇಹದಾದ್ಯಂತ ನಸುಕಂಪನದ ಅಲೆ ಹರಿದಾಡಿ ಹೋಯಿತು. ಹೊರಗಡೆ ಬಂದು, ಬೆಂಚಿನಮೇಲೆ ಆಸೀನಳಾದಳು. ಅತ್ಯಂತ ಅಶಕ್ತ ಶರೀರದಲ್ಲಿ ಅಂತಃಸತ್ವವೆಲ್ಲ ದ್ರವಿತ ಮಂಜಿನಂತೆ ಅನೇಕ ಸ್ರೋತಗಳಾಗಿ ಹರಿಯತೊಡಗಿತು. ಆಕ್ಷಣ ಅವನು ಅವಸರವರವಾಗಿ ಹೆಜ್ಜೆ ಹಾಕುತ್ತ ಮೆಟ್ಟಲಿಳಿದು ನಿಶಾ ಕಾಲಿಮೆಯಲ್ಲಿ ಕರಗಿಹೋದ.

ಅತ್ತಲೇ ನಿಟ್ಟಿಸುತಿದ್ದ ನಯನದ್ವಯಗಳು ವಿನೂತನ ಆಶಾದೀಪ್ತಿ ಯಿಂದ ಬೆಳಗಿದುವು.

ಕಾರಿಡಾರಿನಲ್ಲಿ ದಾದಿಯರ ಮತ್ತು ಆಯಾಗಳ ಚಲನವಲನಗಳ ಪದಘಾತ,ಮಾತುಕತೆಗಳ ಮರ್ಮರ ಕಿವಿಗಳ ಮೇಲೆ ಆಗಾಗ ಬೀಳುತ್ತಲಿತ್ತು.

ಎಲ್ಲಾದರೂ ಹಾಸಿಗೆ ದೊರೆತರೆ ಮಲಗಬಹುದಾಗಿತ್ತು. ಎಂಬ ಯೋಚನೆ ಯಿಂದ ಮನಸ್ಸು ಸುತ್ತಮುತ್ತ ಹರಿದಾಡಿತು. ಅಕ್ಷತೆಯಿಟ್ಟು ಕರೆದಂತೆ ಅದೇ ವೇಳೆಗೆ ದಾದಿಯೊಬ್ಬಳು ಪಕ್ಕದ ವಾರ್ಡಿನ ಕಡೆಗೆ ಹೋಗುವ ಹಾದಿಯಲ್ಲಿ ಎದುರಾದಳು.

"ಹೇಗಿದ್ದಾಳೆ ಮೋಹಿನಿ ?" ಉದ್ವಿಗ್ನತೆಯಿಂದ ಕೇಳಿದಳು ನಿರ್ಮಲ.

"ಈಗ ಚೇತರಿಸಿಕೊಳ್ಳುತ್ತಿದ್ದಾಳೆ; ಗಾಬರಿಯೇನೂ ಇಲ್ಲ."

ಆ ಮಾತು ಮನಃಕುಟ್ಮಲವನ್ನು ಅರಳಿಸಿತು. ಸರಾಗವಾಗಿ ಉಸಿರಾಡುತ್ತ ಕೇಳಿದಳು ನಿರ್ಮಲ,

"ನನಗೆ ತುಂಬ ಆಯಾಸ. ಮನೆಗೆ ಹೋಗುವಂತೆಯೂ ಇಲ್ಲ. ಎಲ್ಲಾದರೂ ಅವಕಾಶ ಕೊಟ್ಟಿದ್ದರೆ ಇಲ್ಲೇ ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳ ಬಹುದಾಗಿತ್ತು."

"ಬನ್ನಿ; ಮೋಹಿನಿಯ ಮಂಚವೇ ಇದೆಯಲ್ಲಾ; ಅವಳನ್ನು ಕರೆತರುವ ತನಕ ಅಲ್ಲೇ ವಿಶ್ರಾಂತಿ ತೆಗೆದುಕೊಳ್ಳಬಹುದು."

ಅದು ಸೂಕ್ತವೆನಿಸಿತು ನಿರ್ಮಲೆಗೆ. ಅವಳ ಹಿಂದೆಯೇ ಹೋದಳು. ಪ್ರಫುಲ್ಲ ಇನ್ನೂ ಬಂದಿರಲಿಲ್ಲ. ಅವನಿಗಾಗಿ ನಿರೀಕ್ಷಿಸುವಷ್ಟು ಚೇತನ ಉತ್ಸುಕ ವಾಗಿರಲಿಲ್ಲವಾದ್ದರಿಂದ ಪಲ್ಲಂಕದ ಮೇಲೆ ಅಡ್ಡಾದಳು. ಶಾಲೆಯಿಂದ ನೇರ ವಾಗಿ ಬಂದುದರಿಂದ ಮನೆಯಲ್ಲಿ ಇನ್ನೆಷ್ಟು ಗಾಬರಿಯಾಗಿದೆಯೋ. ಮೇಲಾಗಿ ಪ್ರಫುಲ್ಲನೂ ಹಿಂದಿರುಗದಿರುವುದರಿಂದ ಖಂಡಿತ ಅಮ್ಮ ನಿದ್ದೆ ಮಾಡುವುದಿಲ್ಲ ಎಂಬ ಚಿಂತೆ ಮನೋವ್ಯಾಪ್ತವಾಗಿತ್ತು. ಅದೇ ಯೋಚನೆಯಲ್ಲಿ ಕಣ್ಮುಚ್ಚಿದುದೇ ತಡ ಪಲ್ಲಂಕದ ಬಳಿ ಪಾದ ಸಪ್ಪಳ ಕೇಳಿ ಬಂತು. ತಟ್ಟನೆ ಕಣ್ತೆರೆದಳು. ನೋಡಿದರೆ, ಪಲ್ಲಂಕದ ಬಳಿ ತಾಯಿ! ನಿರ್ಮಲ ಬಾಯಿ ಬಿಡುವುದ ರೊಳಗಾಗಿ ಅವಳು ಭಯಭೀತಿಯಿಂದ ಚೀರಿದಳು, "ನಿರ್ಮಲ.... ನೀನಿಲ್ಲಿ ? ಏಕೆ ಮಲಗಿದ್ದಿ ?.... ಏನಾಯ್ತು ?"

"ಅಷ್ಟೊಂದು ಗಾಬರಿಯಾಗುವ ಕಾರಣವಿಲ್ಲ. ನಾನು ಸರಿಯಾಗಿರುವೆ." ಎಂದ ನಿರ್ಮಲ ಎಲ್ಲವನ್ನೂ ವಿವರವಾಗಿ ತಿಳಿಸಿ "ದೇವರು ದೊಡ್ಡವನು ಮೋಹಿನಿ ಬದುಕಿಕೊಂಡಳು." ಎಂದಳು. ಧ್ವನಿಯಲ್ಲಿ ಸಮಾಧಾನದ ಝರಿ ಹರಿದು ಬಂತು.

ಜಾನಕಿ ಸ್ವಲ್ಪ ಹೊತ್ತು ಸುಮ್ಮನಿದ್ದು ಅನಂತರ ಹೇಳಿದಳು "ನಾನಂತೂ ತುಂಬ ಗಾಬರಿಯಾಗಿದ್ದೆ...."

ಅಲ್ಲಿಂದ ಮುಂದೆ ಏನೇನು ಹೇಳಬೇಕೆಂದು ಉದ್ದೇಶಿಸಿದ್ದಳೋ ಅದೆಲ್ಲ ಚಿತ್ತವಿಕಾರದಿಂದ ಲುಪ್ತವಾಗಿ ಹೋಗಿತ್ತು. ವಿಷಯ ತಿಳಿದ ನಂತರ ಎದೆಯ ಭಾರ ಅರ್ಧ ಇಳಿದಿದ್ದರೂ ಜೀವ ನಿಶ್ಶಕ್ತಿಯಿಂದ ಉಸಿರಾಡುತಿದ್ದಂತೆ ಭಾಸವಾಯಿತು. ಜಂಗಾಬಲವೇ ಬಿದ್ದು ಹೋದಂತೆ ಕಾಲುಗಳು ಬಳುಕಿದುವು. ಪಕ್ಕದಲ್ಲಿದ್ದ ಬೆಂಚಿನಮೇಲೆ ಕುಳಿತುಕೊಂಡಳು. ಭಯ ಭೀತಿಯಿಂದ ಬಳಲಿದ ಮನಃಪ್ರಾಣಗಳು ವಿಶ್ರಾಂತಿಯನ್ನು ಬಯಸಿದ್ದುವು.

ನಿರ್ಮಲ ಮಾತಾಡಲಿಲ್ಲ. ಚಿತ್ತಭಿತ್ತಿಯಮೇಲೆ ಧಾರುಣೀ ಸುಳಿದಳಿದಳು.... ಅವಳ ತಾಯಿಗೂ ಯಾರಾದರೂ ಸಮಯವರಿತು ಕಾರುಣ್ಯದಿಂದ ಉಪಕರಿಸಿದ್ದರೆ ಆ ಮಗು ತಬ್ಬಲಿಯಾಗುತ್ತಿರಲಿಲ್ಲ.... ಎಂದು ಅಂತರಂಗ ಕೂಗಿ ಹೇಳಿತು. ಒಡನೆ ಹೃದಯದ ಹೊಂಗಿಂಡಿಯಲ್ಲಿ ಅಶ್ರುಬಿಂದುಗಳು ಸಂಜನಿಸಿ ಮುಖಬಿಂಬದಲ್ಲಿ ಶಾಂತಿವಾರಿಯಂತೆ ತಟತಟನೆ ತೊಟ್ಟಿಕ್ಕಿದುವು. ಅವಳ ಮ್ಲಾನವದನವನ್ನು ನಿಟ್ಟಿಸುತ್ತ ಹಣೆಯಮೇಲೆ ಕೈಯಿಟ್ಟು "ಏಕೆ, ಒಂದು ರೀತಿ ಮಂಕಾದೆಯಲ್ಲ ? ತುಂಬ ಆಯಾಸವೆ ?" ಎಂದಳು ಜನನಿ.

"ಇಲ್ಲ.... ಏನೋ ಯೋಚನೆ ಬಂತು ಅಷ್ಟೆ."

ಸಾಲಾದ ಮಂಚಗಳಲ್ಲಿ ಅನೇಕ ತಾಯಂದಿರು ನಿದ್ರಾದೇವಿಯ ಮಡಿಲಲ್ಲಿ ಹಾಯಾಗಿ ಮಲಗಿದ್ದರು. ಅತ್ತ ಹರಿಸಿದ ದೃಷ್ಟಿ ಸ್ವಚ್ಛಂದವಾಗಿ ಹರಿದಾಡಿ ಹಿಮ್ಮರಳಿದಾಗ ಮಗಳ ಮ್ಲಾನ ಮುಖ ದೃಷ್ಟಿಗೆ ಬಿತ್ತು. ಕುಂಕುಮ ಗೌರ ಕಾಂತಿ ಬಿಳಿಚಿಕೊಂಡಂತೆ ಕಾಣಿಸುತಿತ್ತು. ಅವಳು ಶಾಂತ ನಿಸ್ಪಂದ ಭಾವದಿಂದ ಮಲಗಿದ್ದಳು. ಅರ್ಧ ನಿಮೀಲಿತ ನೇತ್ರಗಳಲ್ಲಿ ನಿಸ್ಸಂಜ್ಞತೆ ಕಾಣಿಸುತಿತ್ತು. ವೃದ್ಧೆ ಸ್ವಲ್ಪ ಹೊತ್ತು ಸುಮ್ಮನೆ ಕುಳಿತುಕೊಂಡಳು. ಅವಳ ಮಸ್ತಿಷ್ಕಕ್ಕೆ ವಿಶೇಷ ಭಾರವನ್ನು ಭರಿಸುವ ಚೈತನ್ಯ ಉಡುಗಿತ್ತು. ಜಡವನ್ನೂ ಜಡಗೊಳಿಸುವಂತೆ ಶಾಂತ ನಿಶ್ಚಲತೆಯಿಂದ ಮೂರ್ತಿಮತ್ತಾದಳು.

ಅದೇ ವೇಳೆಗೆ ಪ್ರಫುಲ್ಲ ಒಳ ಹೆಜ್ಜೆಯಿಟ್ಟ. ಮುಖಭಾವ ಪ್ರಸನ್ನವಾಗಿತ್ತು. ಪಲ್ಲಂಕದ ಬಳಿಗೆ ಬರುತ್ತಲೂ ಅವನೇ ಹೇಳಿದ "ರಕ್ತದ ಸೀಸೆ ತಂದುಕೊಟ್ಟೆ. ಮೋಹಿನಿ ಈಗ ಚೇತರಿಸಿಕೊಂಡಿದ್ದಾರೆ."

ಎಲ್ಲರ ಮುಖದಮೇಲೂ ಸಮಾಧಾನದ ಅಲೆ ಹರಿದಾಡಿ ಹೋಯಿತು.

"ನೀವಿಬ್ಬರೂ ಮನೆಗೆ ಹೋಗಿ. ನಾನು ಬೆಳಿಗ್ಗೆ ಬರುವೆ." ಎಂದಳು ನಿರ್ಮಲ. ಮನೋಮಂದಿರದಲ್ಲಿ ಅದಾವ ಪವಿತ್ರ ಊರ್ಮಿ ಸಂಚಾಲನೆಗೊಳ್ಳುತಿತ್ತೋ ಅದು ಅಕ್ಷರ ಅಕ್ಷರದಲ್ಲಿಯೂ ಸ್ರವಿಸಿತು.

ಜಾನಕಿ ಒಂದು ಘಳಿಗೆ ನಿರುತ್ತರಳಾದಳು. ಮನೆಯಲ್ಲಿ ಆರಾಮವಾಗಿ ನಿದ್ರಿಸುವುದಂತೂ ಆಗದ ಮಾತು. ಮತ್ತೇಕೆ ಇಲ್ಲೇ ಇರಬಾರದು ? ಎಂಬ ಪ್ರಶ್ನೆ ಚಿತ್ತಫಲಕವನ್ನು ಆವರಿಸಿತ್ತು. ಯೋಚಿಸುವುದರೊಳಗಾಗಿ ಪ್ರಫುಲ್ಲ ಕೇಳಿದ "ಹಾಗಾದರೆ ನಾವು ಹೋಣವೇ ?"

"ಹೋಗಿ...." ನಿರ್ಮಲ ಸಮಾಧಾನದಿಂದ ತಲೆಯಾಡಿಸಿದಳು.

"ನಾನೂ ಇಲ್ಲೇ ಇರುವೆ. ನೀನು ಹೋಗಪ್ಪ."

"ನೀವೇಕಿರಬೇಕು ? ಇಲ್ಲಿ ಎಲ್ಲ ಸರಿಯಾಗಿದೆ. ಹೋಗಿ." ಮತ್ತೆ ಒತ್ತಾಯಿಸಿದಳು ಅವಳು.

ಅವರಿಬ್ಬರೂ ಹೊರಟರು. ಜಾನಕಿಯ ಒಡಲ ಬಳ್ಳಿ ಕರುಣಕಾತರತೆಯಿಂದ ಮಿಡಿಯುತಿತ್ತು. ಹೋಗಲಾರದೆ ಹೋದುದನ್ನು ನೋಡುತ್ತ ನಿರ್ಮಲ ಪಲ್ಲಂಕದಮೇಲೆ ಮತ್ತೆ ಅಡ್ಡಾದಳು. ಚಿತ್ತ ಭವ್ಯ ಭವಿತವ್ಯದಲ್ಲಿ ಅಂಡಲೆದು ಬಾಳಿನ ರಂಗಕ್ಕೆವಿನೂತನರೂಪವನ್ನು ಕೊಡಲು ಹವಣಿಸುತಿತ್ತು. ಆದರೆ ಯಾವರೀತಿ ಎಂಬುದು ಮಾತ್ರ ಆತ್ಮಗತವಾಗುತ್ತಲೇ ಇಲ್ಲ. ಯೋಚನೆಯ ಅಂತರಾಳದಲ್ಲಿ ಮೀನಿನಂತೆ ಚಲಿಸುತ್ತಿದ್ದ ಜಾಗ್ರತ ಚಿತ್ತ ಪ್ರವೃತ್ತಿಗೆ ನಿದ್ರಾದೇವಿಯು ದೂರವಾಗುತ್ತಿದ್ದುದು ಬಹಳ ಹೊತ್ತು ತಿಳಿಯಲಿಲ್ಲವೇನೋ....ಅನಂತರ ಅನಿರೀಕ್ಷಿತವಾಗಿ ಗಡಿಯಾರದ ಕಡೆ ದೃಷ್ಟಿ ಹೊರಳಿದಾಗ ಹೊತ್ತು ಬ್ರಾಹ್ಮೀ ಮುಹೂರ್ತದಲ್ಲಿ ವಿರಮಿಸಿದ್ದುದು ತಿಳಿದು ಬಂದು "ಓ ನಾನು ನಿದ್ದೆಮಾಡಬೇಕಿತ್ತು ! ಯೋಚನೆಯಲ್ಲಿ ಮುಳುಗಿದುದು ತಪ್ಪಾಯಿತು" ಎಂದು ಉದ್ಗಾರ ತೆಗೆದಳು.

ಅನಂತರ,

ಅವಳಿಗೆ ನಿದ್ದೆ ಬಂದಾಗ ವಾಯುಮಂಡಲದಲ್ಲಿ ಶೈತ್ಯ ಸಂಚರಿಸುತಿತ್ತು. ಸ್ವಪ್ನಲೋಕದಲ್ಲಿ ಮುಳುಗಿ ಸ್ವಚ್ಛಂದಚ್ಛಂದವಾಗಿ ವಿಹರಿಸಿದ ಹೃದಯ ಹಂಸೆ ಅನುರಾಗ ಸಮುದ್ರದಲ್ಲಿ ಮುಳುಗಿಹೋಯಿತು.

೧೪

.... ಅದೊಂದು ಚಿತ್ತಾಕರ್ಷಿತವಾದ ಸುಂದರ ಶೀತಲ ಉಷಃಕಾಲ.

.... ಮೂಡಣದಲ್ಲಿ ಅರುಣೋದಯವಾದಾಗ ಆನಂದ ರಕ್ತಿಯ ಸ್ರೋತಸ್ವಿನಿ ನಿರರ್ಗಳವಾಗಿ ಹರಿಯತೊಡಗಿತು.

.... ಭೂರಮೆ ಅರುಣಕಿರಣಗಳ ಸಂಸ್ರವದಿಂದ ಸ್ವರ್ಣಮೋಹಿನಿಯಂತೆ ವಿಜೃಂಭಿಸುತಿದ್ದಾಳೆ.

ಸಹಸ್ರಸಹಸ್ರ ಪಕ್ಷಿಗಳ ಕೊರಳುಲಿಯು ಭ್ರಮಂತಭ್ರಮರಗಳ ಸುರಮ್ಯ ಝೇಂಕಾರದೊಂದಿಗೆ ಕರ್ಣಮನೋಹರವಾಗಿ ಹೊಮ್ಮುತಿತ್ತು. ಕಿಟಕಿಯ ಬಳಿ ನಿಂತ ನಿರ್ಮಲ ಹೊರಜಗತ್ತಿನಲ್ಲಿ ನೆಟ್ಟ ನೋಟವನ್ನು ಚಲಿಸಲಿಲ್ಲ. ರಾತ್ರಿಯ ಪೂರ್ಣ ವಿಶ್ರಾಂತಿ ಬೆಳಗಿನ ಸುಂದರ ವಾತಾವರಣ ತನುಮನಗಳಿಗೆ ಪುಷ್ಟಿ ನೀಡಿತ್ತು. ಆಗತಾನೇ ಸ್ನಾನಮಾಡಿ ಮಡಿಯುಟ್ಟಿದ್ದಾಳೆ. ಮುಖಬಿಂಬದಲ್ಲಿ ಉದಯರಾಗವನ್ನು ಪ್ರತಿಬಿಂಬಿಸುವ ಹೊಸಕಳೆ ಪ್ರಧಾನವಾಗಿತ್ತು.

ಒಳಗಿನ ಮೇಜಿನ ಮೇಲೆ ಅಡುಗೆಯಾಕೆ ಬಸಿಬಟ್ಟಲುಗಳನ್ನು ಜೋಡಿಸುತ್ತಿದ್ದ ಜಣಕ್ ಕಣಕ್ ಸದ್ದು ಕೇಳಿ ಬರುತಿತ್ತು. ಇದುವರೆಗೂ ಯಾರ ಪ್ರತೀಕ್ಷೆಯಲ್ಲಿದ್ದಳೋ ಆತ ಇನ್ನೂ ಪ್ರಾತಃರ್ವಿಧಿಯನ್ನು ಮುಗಿಸಿರಲಿಲ್ಲ. ಅಂದಿನ ಧಫ್ತರಗಳನ್ನು ಜೋಡಿಸಿ, ಮನೆಯನ್ನು ಓರಣಗೊಳಿಸಿ, ದಿನಪತ್ರಿಕೆಗಳನ್ನು ಜೋಡಿಸಿಟ್ಟು ಮೇಜಿನ ಬಳಿಗೆ ಬಂದಾಗ ಅಮರನಾಥನ ಸವಾರಿ ಚಿತ್ತೈಸಿತು. ಇಬ್ಬರೂ ಕುಳಿತರು. ಬಸಿಬಟ್ಟಲುಗಳಿಗೆ ಕೈ ಹಚ್ಚುವುದರೊಳಗಾಗಿ ಮಗುವಿನ ರೋದನ....!

ತಟ್ಟನೆ ಕಣ್ತೆರೆದಳು ನಿರ್ಮಲ.

ನಿಜವಾಗಿಯೂ ಕರ್ಣಪಟಲಗಳಮೇಲೆ ಪ್ರತಿಧ್ವನಿಸುತಿತ್ತು ಆ ಶಿಶುರೋದನ! ಸುತ್ತಮುತ್ತ ನೋಟ ಹೊರಳಿಸಿ ಇದು ಆಸ್ಪತ್ರೆ ಎಂಬುದನ್ನು ಅರಿತಾಗ ತುಟಿಗಳಲ್ಲಿ ಮುಗುಳ್ನಗು ಮೂಡಿ ಮಾಯವಾಯಿತು. ಸ್ವಪ್ನವಿಶೇಷದ ಆನಂದಾವೇಗ ನರನರಗಳಲ್ಲಿ ವಿನೂತನ ಶಕ್ತಿಯ ಝರಿಯಂತೆ ಹರಿದಾಡುತಿತ್ತು. ಹೊತ್ತು ಆರರ ಗಡಿಯನ್ನು ದಾಟಿದೆ. ಬಾಲರವಿ ಅದೇತಾನೇ ಮೇಲೇಳುತಿದ್ದಾನೆ. ಅರುಣಕಿರಣಗಳು ಮುಖಮೈಗಳನ್ನು ಮೃದುವಾಗಿ ಮುದ್ದಿಡುತ್ತಿವೆ.

ಮಾರುತಮಂಡಲದ ಮಧುರ ಶೈತ್ಯ ಮನೋಜ್ಞವಾಗಿ ಆತ್ಮರಂಗವನ್ನು ಮುಟ್ಟುತಿತ್ತು. ತಟ್ಟನೆ ಎದ್ದು ಪ್ರಾತಃರ್ವಿಧಿಯನ್ನು ಮುಗಿಸಿ ಮೋಹಿನಿಯ ಬಳಿಗೆ ಹೋದಳು. ರಕ್ತ ಸಂಯೋಜನೆ ಮುಗಿದಿತ್ತು. ಆಕೆ ಸುಖನಿದ್ರೆಯಲ್ಲಿ ಮೈಮರೆತಿದ್ದಳು. ಅಲ್ಲಿಂದ ಮಗುವಿದ್ದಲ್ಲಿಗೆ ಹೋಗಿ ನೋಡಿಕೊಂಡು ಹೊರ ಬರುವ ಸಮಯಕ್ಕೆ ಸರಿಯಾಗಿ ಪ್ರಫುಲ್ಲ ಎದುರಾದ.

"ಹೇಗಿದ್ದಿ ? ತುಂಬ ಆಯಾಸವೇ"

"ಇಲ್ಲ; ಸುಮಾರಾಗಿದೆ, ಪರವಾಯಿಲ್ಲ"

"ಒಳ್ಳೆಯದಾಯಿತು ಬಿಡು." ಎನ್ನುತ್ತ ಮುಗುಳುನಕ್ಕು ನುಡಿದ "ಅಮ್ಮನಿಗಲ್ಲಿ ನಿನ್ನದೇ ಚಿಂತೆ !"

"ಪಾಪ, ಹೆಂಗರುಳು." ಎಂದುಕೊಂಡಳು ನಿರ್ಮಲ. ದೈನ್ಯ ನೋಟ ಅವನನ್ನು ಸಂದಿಸಿತು. ಅನಂತರ ಮೋಹಿನಿಗೆ ಸಲ್ಲಿಸಬೇಕಾಗಿದ್ದ ಸೇವೆಯನ್ನು ಸಲ್ಲಿಸಿ ಇಬ್ಬರೂ ಗೃಹಾಭಿಮುಖವಾಗಿ ಹೊರಟರು. ನಿರ್ಮಲೆಯ ಚಿದಾಕಾಶ ವನ್ನೆಲ್ಲ ಸ್ವಪ್ನರೇಖೆಯ ಸ್ವರ್ಮಂದಾಕಿನಿ ಆವರಿಸಿತ್ತು. ಅದರಲ್ಲೇ ತೀವ್ರ ತನ್ಮಯಳಾಗಿ ಮುಂದುವರಿದಳು. ಅಮರನಾಥ ಹೃದಯಸ್ಥಿತನಾಗಿದ್ದ. ಉರುಳುವ ಕ್ಷಣ ಕ್ಷಣಗಳು ಆನಂದಾತಿರೇಖದ ಪಾಲು....

ಆ ಅನನ್ಯ ಅಪೂರ್ವ ಸಡಗರವನ್ನು ಗಮನಿಸಿ, ಪ್ರಫುಲ್ಲ ಔತ್ಸುಕ್ಯದಿಂದ ಪ್ರಶ್ನಿಸಿದ.

"ಏನು ವಿಶೇಷ ? ಏನೋ ಒಂದು ರೀತಿಯಾಗಿದ್ದಿ ?"

ಎಲ್ಲೋ ಅಂಬರ ವಿಹಾರಿಯಾಗಿದ್ದ ಚಿತ್ತ ಪ್ರಶ್ನೆಯ ಕೊಕ್ಕೆಗೆ ಸಿಕ್ಕಿ ಸರ್ರನೆ ಕೆಳಗಿಳಿಯಿತು. ಆ ಪ್ರಶ್ನೆಯನ್ನು ನಿರೀಕ್ಷಿಸಿರಲಿಲ್ಲವಾದ್ದರಿಂದ ಸಿದ್ಧ ಉತ್ತರವೂ ಇರಲಿಲ್ಲ. ಒಂದೆರಡು ಕ್ಷಣ ಯೋಚಿಸಿ ಅತ್ಯಂತ ಸಮಂಜಸವಾಗಿ ಸಮಯೋಚಿತ ಉತ್ತರ ನೀಡಿದಳು,

"ಎಷ್ಟು ವರ್ಷಗಳ ಮೇಲೆ ನಮ್ಮ ಮನೆಗೆ ಮಗು ಬಂದಿದೆ !"

ಪ್ರಫುಲ್ಲ 'ಹೌದು' ಎಂಬಂತೆ ತಲೆದೂಗಿದ.

ನಿರ್ಮಲ ತನ್ನ ಬೆನ್ನನ್ನು ತಾನೇ ತಟ್ಟಿಕೊಳ್ಳುವಷ್ಟು ಉತ್ಸುಕಳಾದಳು. ಹಿಮ್ಮಡಿಯಿಂದ ಕುತ್ತಿಗೆಯವರೆಗೂ ಆಚ್ಛಾದಿತವಾದ ಸುನೀಲ ಪತ್ತಲಾವ ರಣದಲ್ಲಿ ಹೊಚ್ಚ ಹೊಸ ಖಳೆಯನ್ನು ಸೂಸುತಿದ್ದ ಅವಳ ಮುಖಬಿಂಬ ನೂರ್ಮಡಿ ರಮಣೀಯವಾಗಿ ಕಾಣಿಸುತಿತ್ತು.

ರಸ್ತೆಯಲ್ಲಿ ದಾರಿಗರು ಅವಿರಳವಾಗಿ ಕಾಣಿಸುತಿದ್ದರು. ವಾಹನಾದಿಗಳು ಸದ್ದುಗದ್ದಲ ಹೂಡಿದ್ದವು. ಅರುಣಕಿರಣಗಳ ಮದಧಾರೆಯಲ್ಲಿ ಜಗತ್ತು ಕ್ಷಣ ಕ್ಷಣಕ್ಕೂ ವರ್ಣಮಯವಾಗುತಿತ್ತು. ಹಾದಿಯ ನೇರಕ್ಕೆ ದೃಷ್ಟಿಯನ್ನು ಹರಿಸಿ ಪ್ರಫುಲ್ಲ ಅಂದ,

"ನನಗಿಲ್ಲಿ ಒಳ್ಳೆಯ ಕೆಲಸ ಸಿಗುವುದು ಕನಸಿನ ಮಾತು. ನನ್ನ ಗೆಳೆಯ ಬೊಂಬಾಯಿಯಲ್ಲಿದ್ದಾನೆ. ನಾನೂ ಸಹ ಅಲ್ಲಿಗೆ ಹೋಗುವುದೆಂದು ನಿರ್ಧರಿಸಿರುವೆ."

"ಕೆಳದರ್ಜೆ ನೌಕರರ ಸಂಪು ಏನಾಗುತ್ತೋ ನೋಡೋಣ. ಅವರ ವಾದೋಪವಾದ-ಪರಿಷ್ಕರಣ-ವಿತರಣೆ-ಸ್ಥಳಾಂತರ ಇವುಗಳ ಜಂಝಾಟದಲ್ಲಿ ನಿನಗೊಂದು ಒಳ್ಳೆಯ ಅವಕಾಶ ದೊರೆತರೂ ದೊರೆಯಬಹುದು."

"ನನಗೆ ಆ ನಂಬುಗೆಯೇ ಇಲ್ಲ."

"ನಂಬುಗೆಯನ್ನು ಕಳೆದುಕೊಂಡಮೇಲೆ ಏನು ಉಳಿದೀತು ಹೇಳು?"

ಇಂದಿನ ಪರಿಸ್ಥಿತಿಯಲ್ಲಿ ನನಗಿಲ್ಲಿ ಉಳಿಯಲು ಮನಸ್ಸು ಬರುವುದಿಲ್ಲ."

"ಹಾಗೆಂದರೆ ಹೇಗೆ? ಯೋಚಿಸಿ ನೋಡು, ಪ್ರಸನ್ನ ಎಂದೂ ಸಹಕರಿಸುವವನಲ್ಲ; ನೀನೂ ಹೋದರೆ ಹೇಗೆ? ಅಮ್ಮನಿಗೆ ಎಷ್ಟು ನೋವಾಗಬೇಡ? ಅದನ್ನೆಲ್ಲಾ ಮಕ್ಕಳು ಗಮನಿಸಬೇಡವೆ?"

"ಹಾಗಾದರೆ ಏನು ಮಾಡು ಅನ್ನುತ್ತಿ?"

"ನಾನು ಹೀಗೇ ಎಂದು ಹೇಳುವುದಕ್ಕಾಗುವುದಿಲ್ಲ. ನಿನಗೆ ದೇವರು ಮಾರ್ಗ ತೋರಿದಲ್ಲಿ ಮುನ್ನಡೆ. ಧರ್ಮಕರ್ಮವನ್ನು ಯಾವ ಕಾರಣಕ್ಕೂ ಬಿಟ್ಟುಕೊಡಬಾರದು ಎನ್ನುವುದು ನನ್ನ ಅಭಿಮತ."

"ಸರಿ....ಈಗಿನಿಂದಲೇ ನಾನು ಈ ಸಂಸಾರಕ್ಕೆ ಅಂಟಿಕೊಂಡಿದ್ದರೆ ಮುಂದೆ ನನ್ನ ಜೀವನವೂ ಸರಿಯಾದ ರೀತಿಯಲ್ಲಿ ರೂಪುಕೊಳ್ಳಬೇಕಲ್ಲ?"

"ಯೋಚಿಸಿ ನೋಡು. ಈ ಮನೆಯು ಉದ್ಧಾರವಾಗಬೇಕು."

"ಉದ್ಧಾರಕ್ಕೆ ಆರ್ಥಿಕ ಮೌಲ್ಯ ಮೂಲ ಎಂಬುದನ್ನು ನೀನು ಮರೆತು ಬಿಟ್ಟಂತೆ ಕಾಣಿಸುತ್ತದೆ."

ಪ್ರಫುಲ್ಲ ಮುಗುಳು ನಕ್ಕ. ನಿರ್ಮಲೆಯ ತುಟಿಗಳಲ್ಲೂ ಪ್ರತಿಹಾಸ ಮೂಡಿತು. ಅನಂತರ ಇಬ್ಬರೂ ಸ್ವಲ್ಪ ಹೊತ್ತು ಮಾತಾಡಲಿಲ್ಲ. ಹಾದಿ

ಮೌನಭಾರದಿಂದ ಸಾಗಿದರೂ ತರ್ಕವಿತರ್ಕ ಮಸ್ತಿಷ್ಕದಲ್ಲಿ ಗೊಂದಲ ಹೂಡಿತ್ತು. ರಸ್ತೆಯಂಚಿನ ಹಸುರು ಸಕಲ ಜೀವಕೋಟಿಯ ಪದಾಘಾತಕ್ಕೆ ಸಿಕ್ಕಿ ನುಚ್ಚುನುರಿಯಾಗಿ ಹುಡಿಮಣ್ಣಿನಲ್ಲಿ ಬೆರೆತಿದ್ದರೂ ಬದುಕುವ ಅಭಿಲಾಷೆ ಬೇರಿನಲ್ಲಿ ಹಸುರು ಹಸುರಾಗಿ ಚಿಗುರಿತ್ತು. ಅರುಣನ ಅರುಣಿಮೆಯಲ್ಲಿ ಮರುಳಿನ ಕಣಗಳು ನವರತ್ನಗಳ ಹುಡಿಯಂತೆ ವಿವಿಧವರ್ಣಗಳಲ್ಲಿ ಮಿಂಚುತಿದ್ದುವು. ಅರ್ವಾಚೀನ ಧರ್ಮ ಸಾಲು ಮನೆಗಳ ರೂಪುರೇಷೆಗಳಲ್ಲಿ ಗೋಚರಿಸುತಿತ್ತು. ಹೆದ್ದಾರಿಯನ್ನು ನಿರ್ವಿಘ್ನವಾಗಿ ಕಳೆದು ವಾಮಮಾರ್ಗಕ್ಕೆ ಕಾಲಿಡುವವರೆಗೂ ಜನ ಅವಿರಳವಾಗಿ ಕಾಣಿಸುತಿದ್ದರು. ಎಲ್ಲಿಯೂ ಹೆಚ್ಚಿನ ಗದ್ದಲ-ಗಲಾಟೆ ಮೂಡಿರಲಿಲ್ಲ.

ಅದುವರೆಗೂ ಸುಮ್ಮನಿದ್ದ ನಿರ್ಮಲ ತಾನಾಗಿ ಮೌನ ಮುರಿದಳು,

"ಮುಖ್ಯವಾಗಿ ವಿಮಲೆಯ ಜೀವನ ರೂಪುಗೊಳ್ಳಬೇಕು. ಭುಜಕ್ಕೆ ಭುಜ ಕೊಡಬೇಕಾದವರು ಹುಡುಗರು. ನೀವೇ ದೂರ ಇದ್ದುಬಿಟ್ಟರೆ ಯಾರು ನೋಡಬೇಕು, ಹೇಳು ?"

"ಈಗಷ್ಟೆ ಅವಳು ಬಿ.ಎ., ಮುಗಿಸಿದ್ದಾಳೆ. ಎರಡು ವರ್ಷ ಕೆಲಸ ಮಾಡಲಿ, ಆತುರವೇಕೆ ?"

"ನನಗೂ ಹಾಗೆನಿಸುತ್ತೆ. ಆದರೂ ವಿಳಂಬ ಸರಿಯಲ್ಲ...."

ಆ ವಿಚಾರದೋಹನ ಮನದಾಳಕ್ಕಿಳಿದರೂ ಮುಹೂರ್ತ ಕೂಡಿಬಂದಾಗ ತಾನಾಗಿಯೇ ಆಗುತ್ತೆ ಎಂಬ ಮನೋಭಾವ ಹೆಡೆ ಎತ್ತಿತು. ಪ್ರಫುಲ್ಲ ಅಂತಃಸ್ಫುರಿತ ವಿಚಾರಧಾರೆಯಲ್ಲಿ ತೀವ್ರ ನಿಮಗ್ನನಾಗಿ ಪ್ರಶ್ನಿಸಿದ,

"ವಿಮಲೆಯ ಅಭಿಪ್ರಾಯವೇನು ? ಅವಳು ಈಗಲೇ ತಯಾರಿದ್ದಾಳೆಯೆ ?"

"ಅವಳಿನ್ನೂ ಯೋಚಿಸಿದಂತಿಲ್ಲ."

"ಸರಿ.... ನಿನ್ನ ವಿಚಾರವೇನು ? ಏನು ಯೋಚಿಸಿದ್ದಿ ?"

"ವಿಮಲೆಯದಾಗುವವರೆಗೆ ಆ ಪ್ರಶ್ನೆ ಏಳುವುದಿಲ್ಲ."

ಪ್ರಫುಲ್ಲ ಸುಮ್ಮನಾದ.

ಅವಳ ಅದ್ಭುತ ನಿಷ್ಠೆ ಎದೆಯಾಳಕ್ಕಿಳಿಯಿತು. "ನಿನ್ನಂತಹವಳು

ಇರುವುದರಿಂದಲೇ ನಮಗೆ ದೂರ ಹೋಗುವಂತಹ ಎದೆಗಾರಿಕೆ ಮೂಡಿದೆ" ಎಂದು ತನಗೆ ತಾನೇ ಹೇಳಿಕೊಂಡ. ಆದರೂ ಹೃದಯ ಬಿಚ್ಚಿ ನುಡಿಯನ್ನು ಹೊರಹಾಕಲು ಮನಸ್ಸು ಹಿಂಜರಿಯಿತು. ಪ್ರಸನ್ನಮುಖಿಯಾಗಿ ಅವಳೆಡೆಗೆ ನೋಟ ಹೊರಳಿಸಿದ. ಆ ದೃಢ ನಿಶ್ಚಯ ಫಲಕ ಹಣೆಯಮೇಲೆ ಕಾಣಿಸುತಿತ್ತು. ಗಂಭೀರ-ಗುರುತರಭಾವ ಕಣ್ಣುಗಳಲ್ಲಿ ಜ್ವಲಿಸುತಿತ್ತು.

"ಹೋಗಲಿ, ಇನ್ನೊಮ್ಮೆ ಮಾತಾಡೋಣ" ಎಂದ.

ಆ ವೇಳೆಗೆ ಇಬ್ಬರೂ ಮನೆಯ ಮೆಟ್ಟಲು ಹತ್ತುತಿದ್ದರು. ತಲೆ ಬಾಗಿಲನ್ನು ತೆರೆದ ತಾಯಿ ಮೋಹಿನಿಯ ಕ್ಷೇಮ ಸಮಾಚಾರವನ್ನು ವಿಚಾರಿಸಿಕೊಂಡನಂತರ ಸಮಾಧಾನದಿಂದ ಮಗಳೆಡೆಗೆ ಗಮನವನ್ನು ಹರಿಯಬಿಟ್ಟಳು,

"ರಾತ್ರಿಯನ್ನು ಹೇಗೆ ಕಳೆದೆಯಮ್ಮ ? ನಿದ್ದೆಯಾದರೂ ಸರಿಯಾಗಿ ಬಂತೇ? ನನಗಂತೂ ತುಂಬ ಚಿಂತೆಯಾಗಿತ್ತು...."ನುಡಿಯಲ್ಲಿ ಅನುಕಂಪ ಹರಿದಾಗ ಗಂಟಲಿನ ಹಸಿ ಒಣಗಿ ಹೋದಂತಿತ್ತು.

"ಬಿಡಿ, ಅದೇನು ವಿಶೇಷವಲ್ಲ." ನಿರ್ಮಲ ಅಲ್ಲಿಗೆ ಮಂಗಳ ಹಾಡಿದಳು. ಅನುಭಾವ ಪೂರ್ಣ ಅಭಿನಯ ಆಕೆಯ ಅಂಗಭಂಗಿಯಲ್ಲಿತ್ತು. ಹಸನ್ಮುಖದಿಂದ ಹುಬ್ಬೆತ್ತಿ ನೋಡಿದ ಅವಳ ವಿಮಲ ವಿಶಾಲ ನೇತ್ರಗಳ ಶೋಭೆಗೆ ಆ ನೇತ್ರಗಳ ಶೋಭೆಯೇ ಉಪಮಾನವಾಗುವಂತಿತ್ತು. ಎಣೆಯಿಲ್ಲದ ಲವಲವಿಕೆ ಆರೋಗ್ಯಭಾಗ್ಯವನ್ನು ಸಾರಿ ಹೇಳುವಂತಿತ್ತು. ಜನನಿ ಕ್ಷಣಕಾಲ ಸ್ತಬ್ಧಳಾಗಿ ನಿಟ್ಟಿಸಿದಳೇನೋ....ನಿರ್ಮಲ ಎಲ್ಲವನ್ನೂ ಸ್ವಲ್ಪದರಲ್ಲಿ, ಅತೀಸಂಕ್ಷಿಪ್ತವಾಗಿ ಹೇಳಿ ಮುಗಿಸಿ, ವಿಮಲೆಯೊಂದಿಗೆ ದಿನಚರಿಯನ್ನು ಮಿಂಚಿನಂತೆ ಮುಗಿಸಿ ಶಾಲೆಗಭಿಮುಖವಾಗಿ ಹೊರಟಳು. ಆ ದೂರದ ಹಾದಿಯನ್ನು ಕಳೆದು ಶಾಲೆಯನ್ನು ಮುಟ್ಟದಾಗ ಹೊತ್ತು ಮೀರಿರಲಿಲ್ಲ. ಅನುಕ್ರಮವಾಗಿ ಪಾಠ ಪ್ರವಚನಗಳಿಗೆ ಮಕ್ಕಳು ಕಾದಿದ್ದರು. ಕೊಠಡಿಗೆ ಪದಾರ್ಪಣೆ ಮಾಡುತ್ತಲೂ ಒಂದೇ ಬಾರಿಗೆ ಬಾಲವಾಣಿಗಳು ಮೊಳಗಿದುವು "ಗುಡ್ ಮಾರ್ನಿಂಗ್ ಮಿಸ್!"

"ಗುಡ್ ಮಾರ್ನಿಂಗ್ ಚಿಲ್ಡ್ರರ್ !"

ಧಾರುಣಿ ಎದುರಿಗೇ ಕುಳಿತಿದ್ದಾಳೆ. ತನುಮನಗಳನ್ನೆಲ್ಲಾ ಅವಳಿಗೇ ಧಾರೆಯೆರೆದಂತೆ ಅತ್ತಲೇ ಕೇಂದ್ರೀಕೃತವಾಗಿವೆ. ತನ್ನೆಲ್ಲಾ ಪ್ರೀತಿ-ವಿಶ್ವಾಸಗಳನ್ನು ಆ ಮಾತೃಹೀನ ಮಗುವಿಗ ಅರ್ಪಿಸಿ ಬಿಡುವಷ್ಟು ಉತ್ಸುಕತೆ ನರ

ನಾಡಿಗಳಲ್ಲಿ ಹರಿದಾಡಿ ಮನಃಪೂರ್ತಿ ಪಾಠ ಪ್ರವಚನ ನಡೆಯಿತು. ಎಲ್ಲಾ ಮಕ್ಕಳೂ ಪಾಠ ಮುಗಿದೊಡನೆ ಅಂಗಳಕ್ಕೆ ಚಿಗರಿಗಳಂತೆ ಜಿಗಿದು ಹೋದರು. ಧಾರುಣಿಯು ಮಾತ್ರ ಅಲ್ಲೇ ನಿಂತುದುದನ್ನು ನೋಡಿ ನಲ್ಮೆಯ ದನಿ ಹೊರ ಬಿತ್ತು.

"ಧಾರುಣೀ.... !"

"........"

ಅವಳ ಬಳಿಗೆ ಹೋಗಿ ಮೃದು ಮಧುರವಾಗಿ ಗಲ್ಲವನ್ನು ಹಿಡಿದು ಮುದ್ದಿಸಿದಳು ನಿರ್ಮಲ. ಒಡನೆ ಹೃದಯಕುಂಡಲಿನಿ ಬಿಸಿಲಟ್ಟದ ಮಂಜಿನಂತೆ ಕರಗಿತು. ಅವಳು ಇತ್ತಲೇ ದೃಷ್ಟಿಯನ್ನು ನೆಟ್ಟರೂ ಮಾತಾಡಲಿಲ್ಲ. ತುಟಿಗಳಲ್ಲಿ ಮೃದು ಮಂದಹಾಸ ಮಿನುಗಿತು. ಹಾಲ್ಗೆನ್ನೆಯ ಹೊಳಪಿನಲ್ಲಿ ನಸು ಲಜ್ಜೆಯ ರಂಗು ಬೆರೆತು ಸಮ್ಮೋಹನಾಕಾರ ತಳೆಯಿತು. ತಂಗಾಳಿಯ ಚಾಮರದಿಂದ ಅಲುಗಾಡುವ ಅಲೆಗೂದಲು ಹಣೆಯಮೇಲೆ ಕವಿದಿದ್ದುವು. ಅರಳುಗಂಗಳಲ್ಲಿ ಮಿನುಗುವ ಜೀವ ಜ್ಯೋತಿ ಆಕರ್ಷಣೀಯವಾಗಿತ್ತು. ತಲೆಯನ್ನು ನೇವರಿಸಿ ಪ್ರೀತಿಯುಕ್ತವಾಣಿಯಲ್ಲಿ ಕೇಳಿದಳು.

"ನೀನು ಮನೆಗೆ ಹೋಗುವುದಿಲ್ಲವೇ ?"

"ಒಮ್ಮೊಮ್ಮೆ ಹೋಗುವೆ ..."

ರಜೆ ದಿನಗಳಲ್ಲಿ....?"

"ನಮ್ಮ ದೊಡ್ಡಮ್ಮ ಇದ್ದಾರೆ. ಅವರ ಮನೆಗೆ ಹೋಗಿಬರುವೆ."

"ಅಂದರೆ ?"

"ನನ್ನ ತಾಯಿಯ ಅಕ್ಕ."

ಇದ್ದಕ್ಕಿದ್ದಂತೆಯೇ ಬಾಲಕಿಯ ಕಣ್ಣುಗಳಲ್ಲಿ ಸಣ್ಣಗೆ ನೀರಾಡಿ ಮುಖಬಿಂಬ ಕಾಂತಿವಿಹೀನವಾಯಿತು. ಅದನ್ನು ನೋಡುತ್ತಲೂ ನಿರ್ಮಲೆಯ ಒಡಲು ಸಂಕಟದಿಂದ ತುಂಬಿತು-ಜೀವನದ ನಗ್ನಸ್ವರೂಪ ದರ್ಶನ ಮಾಡಿದಂತೆ ಅವಳನ್ನು ಅಪ್ಪಿಕೊಂಡು ಅತ್ಯಂತ ಸ್ನೇಹಪೂರ್ಣವಾಗಿ ನುಡಿದಳು.

"ಮನಸ್ಸಿಗೆ ಹಚ್ಚಿಕೊಳ್ಳಬೇಡ ಮಗೂ ! ಈ ಜಗತ್ತು ಬಹಳ ವಿಶಾಲವಾಗಿದೆ. ಎಲ್ಲಾದರೂ ಉಸಿರಾಡಬಹುದು ಅದಕ್ಕೇನಂತೆ. ನೀನು ತೀರ ಕ್ಷೈಕೂಸಲ್ಲ. ಇನ್ನು ಮುಂದೆ ಹೇಗಾದರೂ ಕಳೆಯುತ್ತೆ."

ಆದರೆ ಆ ವಿಚಾರ ಸರಣಿ ಎಷ್ಟರಮಟ್ಟಿಗೆ ಅವಳಿಗೆ ಅರ್ಥವಾಯಿತು ಎಂಬುದನ್ನು ಊಹಿಸುವುದು ಕಷ್ಟ. ಮುಗ್ಧ ಮನಸ್ಸು ಅಪ್ಪೊಂದು ಅನುತಾಪ ದಗ್ಧವಾಗಿತ್ತು. ಅದ್ಭುತ ಶೋಕ ವ್ಯಾಕುಲ ವಿಶ್ವವನ್ನು ಯಾವರೀತಿ ಸಂತೈಸ ಬೇಕೋ ಅರ್ಥವಾಗುತ್ತಿಲ್ಲ, ಎನಿಸಿದಾಗ ಮುಖಭಾವ ಸಪ್ಪಗಾಯಿತು. ಅತ್ಯಂತ ಆತ್ಮೀಯತೆಯಿಂದ ಬೇರೆ ಮಾತು ತೆಗೆದು ವಿಷಯವನ್ನು ಮರೆಸಿದಳು ನಿರ್ಮಲ. ಅಷ್ಟರಲ್ಲಿ ಶಾಲೆಯ ಗಂಟೆ ಬಾರಿಸಿತು.

ಢನ್. ಢನ್. ಢನ್. ಢನ್. ಢನ್. ಢನ್.

ಶಾಲೆಯ ಆವರಣದಲ್ಲಿ ಕಲೆತು ಗಂಟೆ ಬಾರಿಸುವುದನ್ನೇ ಕಾಯುತಿದ್ದ ಮಕ್ಕಳು ತಮ್ಮತಮ್ಮ ತರಗತಿಗಳಿಗೆ ಓಡಿದರು. ನಿರ್ಮಲ ಧಾರುಣಿಯ ಕೈ ಹಿಡಿದುಕೊಂಡು ಹೊರಟಳು.

೧೫

ಮೋಹಿನಿ ಹಾಗೂ ಹೀಗೂ ಆಸ್ಪತ್ರೆಯ ಖರ್ಚನ್ನು ಪೂರೈಸಿಕೊಂಡರೂ ಮನೆಯ ಖರ್ಚನ್ನು ಕಿಂಚಿತ್ತೂ ಗಮನಿಸಲಿಲ್ಲ ಅಥವಾ ಲೆಕ್ಕಿಸುವಷ್ಟು ಸೌಜನ ವನ್ನು ತೋರಲಿಲ್ಲ. ದಿನದಿನಕ್ಕೂ ಖರ್ಚುಗಳ ಕೋಠಿ ಬೆಳೆದಷ್ಟೂ ಮನಸ್ಸಿಗೆ ಕೊನೆಗಾಣದ ಅಶಾಂತಿ; ಭರಿಸಲಾಗದ ಸಂಕಷ್ಟ.

ಕಾಲಕ್ರಮೇಣ ಬಂಧಿತ ನೌಕರರು ಬಿಡುಗಡೆ ಹೊಂದಿದರು—ಅವರಲ್ಲಿ ಪ್ರಸನ್ನನೂ ಒಬ್ಬ. ಐದಾರು ಮಾಸಗಳ ತುರಂಗವಾಸ ಆತನಲ್ಲಿ ಯಾವ ಪರಿ ವರ್ತನೆಯನ್ನೂ ಉಂಟುಮಾಡಿರಲಿಲ್ಲ. ಮನೆಗೆ ಬಂದಮೇಲೆ ಮಗಳ ಮುಖಾವ ಲೋಕನದಿಂದ ಸೀಮಾತೀತವಾದ ಅನುರಾಗ ಕಟ್ಟೊಡೆದ ನದಿಯಂತೆ ಹರಿದು ಬಂತು. ಎರಡೂ ಕೈಗಳಿಂದ ಮಗುವನ್ನು ಎದೆಗಪ್ಪಿಕೊಂಡ. ವಿಮಲ ಆಶ್ಚರ್ಯ ವಿಸ್ತೃತ ಕಣ್ಣುಗಳಿಂದ ನೋಡಿದಳು. ಆತನ ಪಾಷಾಣ ಸದೃಶ ಹೃದಯದಲ್ಲಿ ಅಂತಹ ಪ್ರೇಮಾನುರಾಗ ಇದೆ ಎಂಬುದನ್ನು ಇದುವರೆಗೂ ಕಂಡು ಕೊಂಡಿರಲಿಲ್ಲ. ಆತನ ಆನಂದಭಾವಾನುವರ್ತಿಯಾದ ಅಭಿನೇಯ ಗೀತ ರೂಪಕದಂತೆ ಪ್ರದರ್ಶಿತವಾಯಿತು. ಪ್ರೇಮಪೂರ್ಣ ಕಂಠಸ್ವರ ರಾಗರಹಿತ ಗೇಯದಂತೆ ನಿರರ್ಗಳವಾಗಿ ಹರಿಯುತಿತ್ತು. ಒಮ್ಮೆಗೇ ಹಲವಾರು ಬಾರಿ

ಮುದ್ರಿಟ್ಟುಕೊಂಡ. ಆ ಸವ ಚಿತ್ತಾತ್ತರದಿಂದ ಮೈ ಪುಳಕಗೊಂಡರೂ ಮನಸ್ಸು ಉತ್ಸುಕತೋರಲಿಲ್ಲ. ಗಂಭೀರ ಭಾವದಿಂದ ತನ್ನ ದಿನಚರಿಯಲ್ಲಿ ತೊಡಗಿದಳು.

"ನೀನೂ ಪಿತೃಹೀನ ಮಗು. ಅವನು ಆ ಪ್ರೀತಿಯಲ್ಲಿ ಒಂದುಪಾಲು ನಿನಗೂ ದಾನಮಾಡಬಹುದಾಗಿತ್ತು." ಎಂದು ಯಾವುದೋ ಅಶರೀರವಾಣಿ ಕಿವಿಯ ಸನಿಹದಲ್ಲಿಯೇ ಕೂಗಿ ಹೇಳಿದಂತಾಯಿತು. ರೋಮರೋಮಗಳೂ ಇಪ್ಪಕ್ಕಿದ್ದಂತೆಯೇ ಉದ್ಭಿನ್ನವಾದುವು. ಹೃದಯ ಕುಂಡಲಿನಿಯಲ್ಲಿ ತುಂಬಿ ಬಂದ ಅನುತಾಪ ನೂರಾರು ಶ್ರೋತಗಳಾಗಿ ಹೊರ ಹರಿದು ಹೋಗಲು ಹವಣಿಸು ತ್ತಿತ್ತು. ಆದರೂ ಪ್ರಯತ್ನಪೂರ್ವಕವಾಗಿ ತನ್ನನ್ನು ತಾನೇ ನಿಗ್ರಹಿಸಿಕೊಂಡಳು ವಿಮಲ.

ಅನಂತರ ಅವನೇ ಉತ್ಸಾಹದಿಂದ ಕೇಳಿದ "ಏನು ವಿಮಲಾದೇವಿಯವರು, ಬಹಳ ಗಂಭೀರವಾಗಿದ್ದೀರಿ ?"

"ನಿನ್ನ ಗಮನ ಇತ್ತ ಹರಿದುದೂ ಸಹ ವಿಶೇಷವೇ !" ಎಂದಳು ಅವಳು.

ಅವನು ಮಂದಹಾಸ ತಳೆದು ಸುಮ್ಮನಾದ. ಗಮನ ಪುನಃ ಮಗಳೆಡೆಗೆ ಹರಿಯಿತು,

ಸದಾ ಸ್ಪಂದಿಸುವ ಎಳೆಕಂಠ; ತುಟಿಗಳಲ್ಲಿ ಹರಿಯುವ ಅಮಾಯಕ ನಗು; ಅಂಗಭಂಗಿಯಲ್ಲಿ ಹೊಮ್ಮುವ ಭಾವ ನಿರೂಪಣೆ; ಅರಳೆಯನ್ನಣಕಿಸುವ ಮಿದು ಮೈ; ರೇಷಿಮೆಯಂತಹ ಕರ್ರನೆಯ ಕುರುಳು, ಶುಭ್ರ ಶೀತೋದಕದಂತೆ ವಸರುವ ಆಶ್ರುಬಿಂದು....ಒಂದೊಂದೂ ಸತ್ಕಲ್ಪದಂತೆ ತೋರುತಿದ್ದುವು. ಹಸಿದವನಿಗೆ ಕ್ಷೀರಾನ್ನವನ್ನು ತೋರಿದಂತೆ ನಿರ್ವಿಕಲ್ಪನಾಗಿ ಜೀವನಗಂಗೆಯಲ್ಲಿ ಮುಳುಗಿಹೋದ.

ಅನುಕ್ರಮವಾಗಿ ದಂಪತಿಗಳಿಬ್ಬರೂ ತಮ್ಮದೇ ಆದ ಉದ್ಯೋಗದಲ್ಲಿ ನೂತನ ಬಡ್ತಿಯೊಂದಿಗೆ ಪುನಃ ಪ್ರತಿಷ್ಠಿತರಾದರು. ಈ ಮೊದಲೇ ತಮ್ಮ ಕುಟೀರಕ್ಕೆ ವೃಥಾ ಬಾಡಿಗೆಯನ್ನು ಕೊಡುವ ತೊಂದರೆ ತಪ್ಪಿಸಲು ಬಿಟ್ಟು ಕೊಟ್ಟಿದ್ದುದರಿಂದ ಅದೇ ಕಿಷ್ಕಿಂಧಾಪುರಿಯಲ್ಲಿ ತಳವೂರಿ ಉಸಿರಾಡುವ ಗಾಳಿಗೂ ತೀವ್ರ ಸಂಚಕಾರ ಒದಗಿ ಬಂತು. ಪ್ರಸನ್ನ ತಮ್ಮ ಖರ್ಚನ್ನು ಸ್ವತಃ ಪೂರೈಸುವಷ್ಟು ಉದಾರತೆಯನ್ನು ತೋರಿದರೂ ಹೆಜ್ಜೆ ಹೆಜ್ಜೆಯಲ್ಲೂ ಕೃಪಣತೆ ತನ್ನಿರುವನ್ನು ಸಾರಿ ಹೇಳುತಿತ್ತು.

"ಇಲ್ಲಿಂದ ಬೇರೆ ಮನೆಗೆ ಹೋದರೆ ಪ್ರತಿಯೊಂದನ್ನೂ ಹೊಸದಾಗಿ ಮಾಡಿಕೊಳ್ಳಬೇಕು. ಬಾಡಿಗೆಗಿಂತ ಅಡ್ವಾನ್ಸ್ ಕೊಡುವುದೇ ಕಷ್ಟ. ನಾವೀಗ ಉಳಿತಾಯ ಮಾಡಲೇಬೇಕು."

ಹಾಡಿದ್ದೇ ಹಾಡುವ ಆ ಮಂತ್ರ 'ಬೇಗನೆ ಮನೆ ಸಿಕ್ಕಿದರೆ ಸಾಕು' ಎಂಬ ಆಶಯವನ್ನು ಎಲ್ಲರಿಗೂ ಮನಃಪೂರ್ತಿ ಮೂಡಿಸುತಿತ್ತು. ಜಾನಕಿ ಸಂಕಟಭರಿತ ಮನಃಕುಂಡದಲ್ಲಿ ಅನುರಾಗವನ್ನು ತುಂಬಿಕೊಂಡೇ ಕೆಲಸ ಕಾರ್ಯ ನಿರ್ವಹಿಸುವಳು.

ಇಂದು ಆಫೀಸಿನಿಂದ ಬರಬರುತ್ತಲೇ ಪ್ರಸನ್ನ ಉತ್ಸಾಹದಿಂದ ಅಂದ,

"ಆಫೀಸಿಗೆ ಹತ್ತಿರವಾಗಿಯೇ ಮನೆ ಸಿಕ್ಕಿದೆ. ಮಗು ನೋಡಿಕೊಳ್ಳು ವುದಕ್ಕೆ ಒಬ್ಬ ಆಯಾ ಗೊತ್ತುಮಾಡಿದ್ದೇನೆ. ಒಂದನೆಯ ತಾರೀಖೇ ಅಲ್ಲಿಗೆ ಹೋಗಬಹುದಾಗಿತ್ತು. ಅದರಲ್ಲಿ ಸಣ್ಣ ಪುಟ್ಟ ರಿಪೇರಿ ಇದೆ. ಸುಣ್ಣ ಹೊಡೆಸಬೇಕು. ಅದೆಲ್ಲ ಮುಗಿದನಂತರ ಅಲ್ಲಿ ಸಂಸಾರ ಹೂಡುವೆ. ಈ ಇಕ್ಕಟ್ಟು ಸಾಕಾಗಿ ಬಿಟ್ಟಿದೆ!"

"ಆ ದಿನ ಬೇಗನೆ ಬಂದರೆ ಸಾಕು" ಎಂದುಕೊಂಡಳು ವಿಮಲ.

ಮರುದಿನ ಮಕ್ಕಳ ಟ್ಯೂಶನ್ ಮುಗಿಸಿ ನಿರ್ಮಲ ಹೊರಬರುತಿದ್ದಾಗ ಅಮರನಾಥ ಮೆಟ್ಟಿಲು ಹತ್ತುತಿದ್ದುದು ಗೋಚರಿಸಿತು. ಇಬ್ಬರ ಮುಖ ಬಿಂಬವೂ ಅರಳು ಮೊಗ್ಗೆಯಾದುವು. ಆತ್ಮಾನಂದ ತುಂಬಿದ ಕಣ್ಣುಗಳಿಂದ ನಿಟ್ಟಿಸುತ್ತಾ ಅಮರನಾಥ ಹೇಳಿದ,

"ನಿನ್ನೆಯೆ ಬಂದೆ. ನೀವು ಸಿಗಲಿಲ್ಲ."

"ನಿನ್ನೆ ಇಲ್ಲಿಗೆ ಬಂದಿದ್ದಿರಾ ?"

"ಬಂದಿದ್ದೆ. ನೀವು ಸ್ವಲ್ಪ ಮುಂಚಿತವಾಗಿ ಹೊರಟಿರಿ ಅನಿಸುತ್ತೆ."

"ಹೌದು; ಕೊನೆಯ ಪಿರೀಯಡ್ ಇರಲಿಲ್ಲ."

"ಈಗ ಮೊದಲ ಪೀರಿಯಡ್ ಇದೆಯೆ?"

"ಇಲ್ಲ.. ಮೂರನೆ ಪೀರಿಯಡ್."

"ಬನ್ನಿ ಅಷ್ಟರೊಳಗಾಗಿ ಬರುವ."

ಸುತ್ತಮುತ್ತ ನೋಡಿ ಮೆಟ್ಟಿಲಿಳಿದಳು ನಿರ್ಮಲ.

ಸಹೋದ್ಯೋಗಿಗಳಾರೂ ದೃಷ್ಟಿಗೆ ಬೀಳಲಿಲ್ಲ. ಆದುದರಿಂದ ಮನಸ್ಸು

ಹಗುರವಾಯಿತು. ವಿನಯ-ವಿಧೇಯತೆಗಳ ವಶೀಭೂತಳಾಗಿ ಆತನನ್ನು ಅನುಸರಿಸಿದಳು. ಹೃದಯ ಬನದಲ್ಲಿ ಹೇಮೋಜ್ವಲ ಅನುರಾಗ ಶತದಳ ಪುಷ್ಪದಂತೆ ಉತ್ಫುಲ್ಲವಾಯಿತು. ಉತ್ಸಾಹಹೀನತೆ-ಉದಾಸೀನತೆ-ಅಧೈರ್ಯ ಗಳಿಂದ ಕೃಶಿಸಿ ಹೋಗುತ್ತಿರುವ ಸ್ತ್ರೀಜಾತಿಯಲ್ಲಿ ತಾನು ತೀರ ವಿಭಿನ್ನಳಾಗಿ ಜನ್ಮ ತಾಳಿದಂತೆ ಭಾಸವಾಯಿತು. ನವೋಜ್ವಲವಾದ ದೂರಗಮ್ಯದೆಡೆಗೆ ನವ ಕಾಂತಿಯಿಂದ ಕೂಡಿದ ಹೊಸ ಪಥದಲ್ಲಿ ಸಾಗುವ ಅಭಿಶಸ್ತ ಹೆಜ್ಜೆ....ಜೀವನ ಯಜ್ಞದ ಮಹಾಕ್ರಾಂತಿಗೆ ನಾಂದಿಯಾಗುವುದಾದರೆ ಎಂತಹ ಆನಂದ.... ?

ತರಗತಿಗಳು ಆರಂಭವಾದುದರಿಂದ ಆವರಣದಲ್ಲಿ ಜನ ಸಂಚಾರವಿರಲಿಲ್ಲ. ಸದ್ದುಗದ್ದಲವೂ ಇರಲಿಲ್ಲ. ಮಂದ ಮಂದ ವಾಯುವಿನ ಲೀಲಾ ಖೇಲನದಿಂದ ಜಣ್ಣದ ಬಿದಿರು ಒಂದಕ್ಕೊಂದು ಮಸೆಯುವ ಶಬ್ದ ಕರ್ಣಪಟಲಗಳಿಗೆ ತಾಗು ತಿತ್ತು. ಅದರ ಸುತ್ತಲೂ ಕಲ್ಲಿನ ಕಟ್ಟೆಯನ್ನು ಕಟ್ಟಲಾಗಿತ್ತು. ಎದುರಿಗೆ ಅಶೋಕವೃಕ್ಷಗಳ ಸಾಲು. ಅವುಗಳ ತಟಸ್ಥಲದಲ್ಲಿ ಪುಷ್ಪದಳ-ಪುಷ್ಪರೇಣು ಹರಡಿಬಿದ್ದಿದ್ದು ವರ್ಣಮಯೀ ರಂಗೋಲಿಯನ್ನು ಚಿತ್ರಿಸಿದಂತಾಗಿತ್ತು. ಸುಮಧುರವಾದ ತಂಗಾಳಿಯನ್ನು ಆಸ್ವಾದಿಸುತ್ತ ಅಮರನಾಥ ಅಂದ,

"ನೀವು ಮೊದಲಿನಷ್ಟು ಲವಲವಿಕೆಯಾಗಿ ಕಾಣಿಸುತ್ತಿಲ್ಲ. ಬಹುಶಃ ನಿರ್ಲಕ್ಷ್ಯವಿರಬಹುದು ಅಥವಾ ಅವಿಶ್ರಾಂತಿ ಇರಬಹುದು. ಆ ಮಾತು ಹೇಳು ವುದಕ್ಕೆ ನನಗೆ ಬಹಳ ಸಂಕೋಚವೆನಿಸುತ್ತದೆ." ಮಾತು ಮುಗಿಸುವ ಮುನ್ನ ಮುಖ ವಿಷಣ್ಣಭಾವವನ್ನು ತಳೆಯಿತು, ದೈನ್ಯತೆಯಿಂದ ನಿಟ್ಟಿಸಿದ.

"ಹೆಚ್ಚೇನಿಲ್ಲ ...ದಿನಚರಿ ಮೊದಲಿನಂತೆಯೇ ಇದೆ."

"ನಿಮ್ಮ ಶರೀರಸ್ಥಿತಿ ಉತ್ತರಿಸುತ್ತದೆ; ನೀವು ಸ್ವಲ್ಪ ಬಡವಾಗಿದ್ದೀರಿ."

"ಅದಕ್ಕೇಕೆ ಅಷ್ಟು ಪ್ರಾಶಸ್ತ್ಯ ? ಏರಿಳಿತ ಎಲ್ಲರಿಗೂ ಇದ್ದದ್ದೆ."

"ಆದರೂ ಇಷ್ಟೊಂದು ನಿರ್ಲಕ್ಷ್ಯ ಸರಿಯಲ್ಲ."

ಕೈ ಗಡಿಯಾರದ ಕಡೆ ನೋಟವನ್ನು ಹೊರಳಿಸಿ "ಎರಡನೆಯ ಪೀರಿ ಯಡ್ಡಿಗೆ ಸ್ವಲ್ಪ ಮುಂಚಿತವಾಗಿಯೇ ಅಲ್ಲಿರಬೇಕು....ನಮ್ಮನ್ನು ಯಾರಾದರೂ ನೋಡಿ ಏನೆಂದುಕೊಳ್ಳುವರೋ ಈಚೀಚೆಗೆ ನನಗೆ ಬಹಳ ಸಂಕೋಚ ವಾಗುತ್ತೆ...."

"ಈ ವಿಶಾಲವಾದ ಜಗತ್ತಿನಲ್ಲಿ ಒಬ್ಬರ ಕ್ಷೇಮವನ್ನು ಇನ್ನೊಬ್ಬರು

ತಿಳಿದುಕೊಳ್ಳಬೇಕೆನಿಸಿದರೆ ಆ ಅಂದುಕೊಳ್ಳುವಿಕೆಯ ಹಿನ್ನೆಲೆಯ ಚರಿತ್ರೆಗೆ ಅಷ್ಟು ಪ್ರಾಧಾನ್ಯತೆ ಏಕೆ ಕೊಡಬೇಕು ಹೇಳಿ ?"

ಪ್ರಶ್ನೆಯ ಯಥಾರ್ಥತೆಯನ್ನು ಕಂಡುಕೊಂಡರೂ ಎದುರಿಸುವಂತಹ ಧೈರ್ಯವಿರಲಿಲ್ಲವಾದುದರಿಂದ ಪ್ರಯತ್ನಿಸಿದರೂ ಉತ್ತರ ಹೊಳೆಯಲಿಲ್ಲ. ಚಿಂತಾಮಗ್ನಳಾಗಿ ಸ್ವಲ್ಪಹೊತ್ತು ಗಂಭೀರ ಮೌನತಾಳಿದಳು ಅವಳು.

"ಇವೆಲ್ಲದರ ಹಿಂದೆ ನಿಜಕ್ಕೂ ನಡೆಯುತ್ತಿರುವುದು–ಏನು ಎಂಬುದನ್ನು ತಿಳಿದುಕೊಂಡರೆ ಪಾಪಪುಣ್ಯಾದಿಗಳಾಗಲಿ, ಸಾಮಾಜಿಕ ಟೀಕೆ ಟಿಪ್ಪಣಿಗಳಿಗಾಗಲೀ ಭಯಪಡುವ-ತಲೆಬಾಗುವ ಅಗತ್ಯವಿಲ್ಲ....ಇದಕ್ಕೆಲ್ಲ ಏಕೆ ಅಷ್ಟೊಂದು ಚಿಂತೆ ?" ಅಮರನಾಥ ಒತ್ತಿಹೇಳಿದ.

"ನೀವು ಹೇಗೆಂದುಕೊಂಡರೂ ಆಗುತ್ತೆ; ಆದರೆ ಸ್ತ್ರೀ ಜಾತಿಯ ವಿಚಾರ...."

ಚಿಂತಿತನಂತೆ ಬಿಸಿಯುಸಿರು ಬಿಟ್ಟು ಅಮರನಾಥ ಪ್ರಶ್ನಿಸಿದ,

"ನೀವು ಅಷ್ಟೆಂದರೂ ಭಯದಿಂದ ಬಿಡುಗಡೆ ಹೊಂದಲಿಲ್ಲ, ನಾಳೆ ಹೇಗೂ ಭಾನುವಾರ. ಬೇರೆ ಎಲ್ಲಾದರೂ ಕೂಡೋಣವೇ ? ನಿಮ್ಮೊಂದಿಗೆ ಚರ್ಚಿಸಬೇಕಾದ ವಿಷಯ ಬಹಳವಿದೆ."

"ಯಾವ ವಿಚಾರದಲ್ಲಿ....?

"ಅದೆಲ್ಲಾ ಆಮೇಲೆ."

"ಅನವಶ್ಯಕವಾಗಿ ಏಕೆ ? ಅಂತಹ ಮಾತುಕತೆಯಾದರೂ ಏನಿದ್ದೀತು ? ಹೇಗೂ ನಡೆಸುವವ–ನಿರ್ಣೈಸುವವ ಬೇರೆ !"

ಅಮರನಾಥ ವಿಚಾರಪರನಾದರೂ ಆಶ್ಚರ್ಯ ತೃಷಿತಲೋಚನಗಳಿಂದ ನಿಟ್ಟಿಸಿದ. ಸ್ವಲ್ಪಹೊತ್ತು ಏನುತ್ತರ ಹೇಳಬೇಕೆಂಬುದು ಹೊಳೆಯಲಿಲ್ಲ. ಅನಂತರ ಗಂಭೀರಗತಿಯಲ್ಲಿ ಬಾಯ್ದೆರೆದ,

"ಹಾಗೆನ್ನುವುದಾದರೆ ನಾವೇಕೆ ಕಷ್ಟಪಡಬೇಕು ?"

ನಿರ್ಮಲ ಆ ಮಾತಿಗೆ ಉತ್ತರ ಹೇಳಲಿಲ್ಲ.

ಅಮರನಾಥ ವಿಸ್ಮಯದಿಂದ ಮುಂದುವರಿದ "ನನ್ನ ಹಣೆಯಲ್ಲಿ ಆನಂದ ಎಂಬುದು ಬರೆದಿದ್ದರೆ ಅದನ್ನು ನಿಮ್ಮ ಬಳಿ ಮಾತ್ರ ಪಡೆಯಬಲ್ಲೆ. ಅಷ್ಟು ಮಾತ್ರವಲ್ಲ; ನಿಮ್ಮ ಉಡಿಯಲ್ಲಿ ಸಾಯುವುದೂ ಸಂತೋಷವೇ."

ಅವಳ ಹವಳದ ಕುಡಿಯಂತಹ ತುಟಿಗಳಲ್ಲಿ ಕಿರುನಗೆ ಮೂಡಿ ಕೆನ್ನೆಗಳಲ್ಲಿ ಲಜ್ಜೆಗೆಂಪೊರೆಯಿತು. ಏನನ್ನೋ ಹೇಳಲು ಪ್ರಯತ್ನಿಸಿದರೂ ಮಾತುಗಳು ಹೊರಡದೆ ಸುಮ್ಮನಾದಳು.

"ಭಾವಾನುಬಂಧ ಉಚಿತಾನುಚಿತಗಳನ್ನು ಗಮನಿಸುವುದಿಲ್ಲ. ಇಲ್ಲಿ 'ಸಂಪ್ರದಾಯ' ಎಂಬುದು ತಲೆಹಾಕಬಾರದು."

ಅಮರನಾಥ ಮುಗುಳ್ನಗೆ ಬೀರಿದ. ಕಣ್ಣುಗಳಲ್ಲಿ ಪ್ರಜ್ವಲಿತ ಕಾಂತಿ ಆಶಾಭಾವನೆಯನ್ನು ಸ್ಫುರಿಸುತಿತ್ತು. ಆ ನಿಜವಾದ ಮೌನಪ್ರೇಮ ಅಂತರಂಗವನ್ನು ಪುಳಕಿತಗೊಳಿಸಿತು. ನಿರ್ಮಲ ತನ್ನನ್ನು ತಾನು ನಿಗ್ರಹಿಸಿಕೊಳ್ಳಲು ಪ್ರಯತ್ನಿಸಿದರೂ ಸಫಲಳಾಗದೆ ನುಡಿದಳು....ಆದರೆ ಏನು ಹೇಳಬೇಕೆಂದುಕೊಂಡಿದ್ದಳೋ ಅದು ಲಜ್ಜಾವೇಗದಿಂದ ಮರೆತುಹೋಗಿ ಮತ್ತೇನನ್ನೋ ಉಚ್ಚರಿಸಿದಳು,

"ಅಲ್ಲ....ಅದಲ್ಲ; ಅಮರನಾಥ ಬಾಬೂ!"

ಅಮರನಾಥ ನಕ್ಕುಬಿಟ್ಟ.

ಅವಳೂ ತನ್ನ ದನಿಯನ್ನು ಒಂದುಗೂಡಿಸಿದಳು. ಒಡನೆ ಕೆನ್ನೆಗಳು ಓಕುಳಿಯೆರೆಚಿದಂತೆ ರಂಗೇರಿದುವು. ಆ ರಸನಿಮಿಷದಲ್ಲಿನ ಸವಿಯನ್ನು ಮನಃಪೂರ್ತಿ ಸವಿದು ಸಂಭ್ರಮದಿಂದ ಅಮರನಾಥ ಪುನಃ ಅಂದ,

"ನಾಳೆ ಮಧ್ಯಾಹ್ನ ನಾನು ಮೈಸೂರಿಗೆ ಹಿಂದಿರುಗುವೆ. ಅದರೊಳಗೆ ನಾಳೆ ಬೆಳಿಗ್ಗೆ ಎಲ್ಲಾದರೂ ಪುನರಪಿ ಭೇಟಿಯಾಗೋಣವೇ?"

"ಬೆಳಿಗ್ಗೆ....?"

"ಹೌದು. ಹೀಗೇ ಬಂದು ಬಿಡಿ. ಅನಂತರ ಎಲ್ಲಾದರೂ ಹೋಗೋಣ ಆಗಬಹುದೇ?"

ನಿರ್ಮಲ ಮಾತಾಡಲಿಲ್ಲ. ಮುಖಭಾವ ಅಷ್ಟೊಂದು ಆಶಾದಾಯಕವಾಗಿರದುದನ್ನು ನೋಡಿ ಭುಜದ ಮೇಲೆ ಕೈಯಿಟ್ಟು "ಅಷ್ಟೊಂದು ಸಂಕೋಚವೇಕೆ?....ನನ್ನಲ್ಲಿ ನಂಬುಗೆ ಇಲ್ಲವೇ?"

"ಹಾಗಂತಲ್ಲ."

"ಸಾಮಾಜಿಕ ಭಯ?"

"ಅಲ್ಪಸ್ವಲ್ಪ ಇರಬೇಕಷ್ಟೆ?"

"ವ್ಯರ್ಥ....! ವೃಥಾ ಕಳವಳ, ಮನಃಕ್ಲೇಶ...."

"ಹಾಗೆಂದರೆ ಸಾಮಾಜಿಕ ವಲಯವನ್ನು ದಾಟಿ ಅಶೃಂಖಲೆಯಾಗಿ ಹೋಗುವುದಾದರೂ ಎಲ್ಲಿಗೆ ?"

"ಹೋಗಲೇಬೇಕು ಎಂಬುದೇನೂ ಇಲ್ಲ. ಲಕ್ಷಿಸದಿದ್ದರೆ ಒಳ್ಳೆಯದು."

"ಆ ವಿಚಾರದಲ್ಲಿ ನನಗೆ ಧೈರ್ಯವೇ ಇಲ್ಲ."

"ಬೆಳಿಗ್ಗೆ ಬನ್ನಿ; ನಾನೆಲ್ಲಾ ಹೇಳುವೆ."

ಪರಸ್ಪರ ಪ್ರೀತ್ಯಾದರದಿಂದ ಇಬ್ಬರೂ ಬೀಳ್ಕೊಂಡರು.

ಅದೇ ವೇಳೆಗೆ ಶಾಲೆಯ ಗಂಟೆ ಭಾರಿಸಿತು.

ಠಣ್. ಠಣ್. ಠಣ್. ಠಣ್. ಠಣ್.

೧೬

... ಜನಾಕೀರ್ಣ ಲೋಕಾಲಯದಲ್ಲಿ ಮಿಂಚುಳ್ಳಿಯ ಸಂಭ್ರಮವೋ ಸಂಭ್ರಮ !

....ಮಿ ಮಿ ಮಿ ಮಿ ಮಿ ಮಿ ಮಿ ಮಿ !

ಶಾಲೆಯ ಉದ್ಯಾನದ ಸುಂದರ ಹಾದಿಗೆ ಕಾಲಿಟ್ಟಾಗ ತರುಣಾರುಣ ಬಾನೇರುತಿದ್ದ. ಉದ್ಯಾನದ ಪಚ್ಚಸಮುದ್ರ ನೆರಳು-ಬೆಳಕುಗಳ ಜೋಡಣೆಯಲ್ಲಿ ಚಿತ್ರವಿಚಿತ್ರವಾಗಿ ವಿಜೃಂಭಿಸುತಿತ್ತು. ಮನದಲೆಯಲ್ಲಿ ಹಿಂದಿನ ದಿನದ ಅಮರ ನಾಥನೊಡನೆ ಭೇಟಿಯ ಅಪೂರ್ವ ಅನುಭವ ತನುಮನಗಳನ್ನು ಸ್ವರ್ಗದ ಮೆಟ್ಟಿಲಿನವರೆಗೂ ಒಯ್ದಿದ್ದುವು. ಅದೇ ವಿಚಾರದ ಹುಚ್ಚುಹೊಳೆಯಲ್ಲಿ ಮುಳು ಗೇಳುತ್ತಾ ಮೈಮರೆತಿರುವಾಗ ಸರ್ವಮಾನ್ಯವಾದ ಈ ಜಗತ್ತು ಅತ್ಯಂತ ಮಧು ಮಯವಾಗಿ, ಭಾವ ಸಮುದ್ರವಾಗಿ ತೋರಿತು.

"ಗುಡ್‌ಮಾರ್ನಿಂಗ್ ಮಿಸ್ !"

"........"

"ಮಿಸ್, ಇಂದು...."

"........"

ಧಾರುಣಿ ಕೊರಳೆತ್ತಿ ನೋಡಿದಳು, ಕಣ್ಣುಗಳಲ್ಲಿ ಅಚ್ಚರಿಯ ನೆರೆಯುಕ್ಕಿ

ಬಂತು. ನಿರ್ಮಲ ಮ್ರೇಡಂ ಎಂದೂ ತನ್ನ ಕರೆಗೆ ಕಿವಿಗೊಡದಿದ್ದುದೇ ಇಲ್ಲ. ಇಂದಿನ ರೀತಿ ತೀರ ವಿಚಿತ್ರವಾಗಿ ತೋರಿತು. ಇನ್ನು ಕರೆಯುವುದು ವಿಹಿತ ವಲ್ಲವೆಂದುಕೊಂಡ ಕ್ಷಣದಲ್ಲೇ ನಿರ್ಮಲಳ ದೃಷ್ಟಿ ಅನಿರೀಕ್ಷಿತವಾಗಿ ಇತ್ತ ಹರಿ ಯಿತು. ಧಾರುಣಿಯ ಮುಖವನ್ನು ನೋಡುತ್ತಲೂ ತುಟಿಗಳಲ್ಲಿ ಮುಗುಳುನಗೆ ಮೂಡಿತು. ಒಡನೆ ಸಾಸಂದದಿಂದ ಸಮಯೋಚಿತವಾಗಿ "ಏನಮ್ಮಾ?" ಎಂದಳು ಸುಖ ಮೇಖಲೆಯಾಗಿ.

"ಆಗ ಕರೆದೆ ನೀವು ಮಾತಾಡಲಿಲ್ಲ!" ಕಣ್ಣರಳಿಸಿದಳು ಬಾಲಕಿ.

"ಬಹುಶಃ ಕೇಳಿಸಲಿಲ್ಲ."

"ಎರಡು ಸಾರಿ ಕರೆದೆ!"

"ಹೌದಾ ? ಎಲ್ಲೋ ಯೋಜನೆಯಲ್ಲಿದ್ದೆ; ಕೇಳಿಸಿಕೊಳ್ಳಲಿಲ್ಲ." ಎಂದ ನಿರ್ಮಲ ಪುನಃ ಕೇಳಿದಳು "ಹೇಗಿದ್ದಿ? ಏನು ಸಮಾಚಾರ ? ಏತಕ್ಕೆ ಕರೆದೆ ?"

"ನಾನು ಸಾಯಂಕಾಲ ಮನೆಗೆ ಹೋಗುವೆ. ಬೇಗ್ಗೆ ಟ್ಯೂಶನ್ನಿಗೆ ಬರು ವುದಿಲ್ಲ. ಮಿಸ್ !"

"ನಾಳೆ ಏನು ವಿಶೇಷ ಮನೆಯಲ್ಲಿ ?"

"ಚಿಕ್ಕಮ್ಮನ ಮಗುವಿಗೆ ನಾಮಕರಣ !"

ನುಡಿ ಹೊಮ್ಮಿದಾಗ ತುಟಿಗಳಲ್ಲಿ ಮಿನುಗಿದ ಎಳೆನಗು, ಮುಖದಲ್ಲಿ ಹೊಮ್ಮಿದ ಭಾವಧಾರೆ ದರ್ಶನೀಯವಾಗಿತ್ತು. ಗಲ್ಲವನ್ನು ಮುದ್ದಿಟ್ಟು ಕೇಳಿದಳು ನಿರ್ಮಲ,

"ನಿನಗೆ ಹೊಸ ಪಾಪ ಬಂದುದು ತುಂಬ ಇಷ್ಟ ಅಲ್ಲವೇ ?"

"ಹೌದು ಮಿಸ್ !"

"ನಿನ್ನ ಚಿಕ್ಕಮ್ಮನಿಗೆ ಇದು ಎಷ್ಟನೆಯ ಮಗು ?"

"ನಾಲ್ಕನೆಯದು."

"ಹ್ಞಾ.... ಹೋಗಿಬಾ."

"ಆಯಿತು."

"ನಾಡಿದ್ದು ಬರುತ್ತೀತಾನೆ ?"

"ಹೌದು."

"ಆಗಬಹುದು ಮಗೂ, ಮನೆಯಲ್ಲಿ ಮಕ್ಕಳೊಂದಿಗೆ ಚೆನ್ನಾಗಿ ಹೊತ್ತು

ಕಳೆದು ಹಿಂದಿರುಗು. ಏನಿದ್ದರೂ ಮನಸ್ಸಿಗೆ ಹಚ್ಚಿಕೊಳ್ಳಬಾರದು." ನುಡಿ ಅತ್ಯಂತ ನಲ್ಮೆಯಿಂದ ಹೊರಬಿತ್ತು.

"ಥ್ಯಾಂಕ್ಯೂ.... ಮೇಡಂ!"

ಹುಡುಗಿ ಅವಸರವಾಗಿ ನುಡಿದು, ಅಲ್ಲಿಂದ ಚಿಗರಿಯಂತೆ ಜಿಗಿದು ಹೋಗಿ ಇತರ ಮಕ್ಕಳೊಡನೆ ಬೆರೆತುಕೊಂಡಳು. ನಿರ್ಮಲ ನಿಶ್ಚಲಗತಿ ಯಲ್ಲಿ ನಿಟ್ಟಿಸಿದಳು. ಚಿತ್ತಭಿತ್ತಿಯಮೇಲೆ ವಿನೂತನ ಪ್ರಕಾಶದಂತೆ ಹೊಳೆದ ಆ ಕ್ಷಣ ಭಂಗುರ ದೈಹಿಕ ಪ್ರಕ್ರಿಯೆಯನ್ನು ಒಂದೆರಡು ಘಳಿಗೆ ಸ್ತಬ್ಧಗೊಳಿಸಿ ದಂತೆ ಭಾಸವಾಯಿತು. ಅವಳ ಗೃಹ ಜೀವನದಲ್ಲಿ ಕೆಲವು ಅಶ್ರದ್ಧೇಯ ವಿಚಾರಗಳನ್ನು ಕೇಳಿದ್ದುಂಟು. ಆದರೂ ಆ ಬಾಲಕಿಯಲ್ಲಿ ಅದೆಂತಹ ನಿತಾಂತ ಶ್ರದ್ಧೆ! ಹೃದಯಹಾರೀ ಆಶಾಂಕುರ! ಒಂದೆರಡು ಕ್ಷಣ ಹಾಗೇ ನೋಡುವುದರೊಳಗಾಗಿ ಯಾವುದೋ ಅನಿರ್ವಚನೀಯವಾದ ಅಭಾವ ಅಂತ ಸ್ಥಲವನ್ನು ಸ್ಪರ್ಶಿಸಿದಂತಾಯಿತು. ಒಡನೆ ಬಿಸಿಯುಸಿರು ಬಿಟ್ಟಳು ನಿರ್ಮಲ. ಅಂದು, ಶಾಲೆಯ ವ್ಯವಹಾರವನ್ನು ಮುಗಿಸಿ ಮನೆಗೆ ಪದಾರ್ಪಣೆ ಮಾಡಿದ ಸಮಯದಲ್ಲೇ ಪ್ರಫುಲ್ಲ ಒಳಹೆಜ್ಜೆಯಿಟ್ಟ. ನರನಾಡಿಗಳಲ್ಲಿ ನವೋತ್ಸಾಹದ ಝುರಿ ಹರಿದಾಡುತಿದ್ದು ಮುಖಮಂಡಲದಲ್ಲಿ ವಿನೂತನ ಖಳೆ ಆಚ್ಛಾದಿತವಾ ಗಿತ್ತು. ಅತ್ಯಂತ ಹಸನ್ಮುಖಿಯಾಗಿ ಕಂಡು ಬಂದ.

"ಏನಪ್ಪಾ, ವಿಶೇಷ?" ಹಾಸ್ಯ ಪ್ರಧಾನವಾಗಿ ಹುಬ್ಬೇರಿಸಿದಳು ನಿರ್ಮಲ.

"ಬೊಂಬಾಯಿಯಲ್ಲಿ ಒಳ್ಳೆ ಕೆಲಸ ಕೊಡಿಸುವುದಾಗಿ ಬರೆದಿದ್ದಾನೆ ಕೃಷ್ಣಮೂರ್ತಿ!"

ಮೈಯೆಲ್ಲಾ ಮನಸ್ಸಾಗಿ ಬಿತ್ತರಿಸಿದ ಪ್ರಫುಲ್ಲ. ಅರಳು ಗಣ್ಣುಗಳು ಜ್ವಲಂತ ಉಲ್ಕೆಗಳಂತೆ ಹೊಳೆದುವು.

"ಹಾಗಾದರೆ ಹೊರಟೇ ಬಿಡುತ್ತಿ ಅನ್ನು!"

"ಕೆಲಸ ಸಿಗುವುದಾದರೆ ಯಾರಿಗೆ ಬೇಡ? ಇಲ್ಲಿ ಇನ್ನೂ ಎಷ್ಟು ಕಾಲ ಈ ಗುಮಾಸ್ತಗಿರಿ?"

"ಅದು ಸರಿಯೆ."

ಅದೇ ವೇಳೆಗೆ ಅಲ್ಲಿಗೆ ಆಗಮಿಸಿದ ಸ್ವಾಮಿನಿ ತನ್ನ ಅಂತರಂಗವನ್ನು

ಅಸಮಾಧಾನದಿಂದ ತೋಡಿಕೊಂಡಳು,

‘‘ಈಗ ನೀನೂ ಹೊರಟು ಬಿಟ್ಟರೆ ಮನೆಯಲ್ಲಿ ಗಂಡು ಪ್ರಾಣಿಯೇ ಇಲ್ಲದಂತಾಗುತ್ತೆ. ಇಲ್ಲಿಯ ಎಲ್ಲಾ ಕಷ್ಟಸುಖಗಳನ್ನು ಯಾರು ನೋಡಬೇಕು ಹೇಳು? ಅಕ್ಕ ತಂಗಿಯರ ಸ್ಥಿತಿಗತಿ ಸರಿಹೊಂದಿಸಿದನಂತರ ಹೋದರೇನೋ ಒಂದು ರೀತಿ. ಅದೆಲ್ಲವನ್ನೂ ಸ್ವಲ್ಪ ಯೋಚಿಸಬಾರದೇ ?”

‘‘ಸರಿ, ಬಿಡಿ. ಅಲ್ಲಿಯತನಕ ಕಾಯುವುದೆಂದರೆ ನನ್ನಗತಿ ಗಂಗಮ್ಮನ ಪಾಲು.”

ಪ್ರಫುಲ್ಲ ತಲೆಯಾಡಿಸುತ್ತ ತುಂಟನಗೆ ಬೀರಿದ.

“ಹಾಗೆಂದರಾಗುತ್ತದೆಯೆ ? ಕುಲಪುತ್ರರಲ್ಲದೆ ಇದನ್ನೆಲ್ಲ ಇನ್ಯಾರ್ರು ಮಾಡಬೇಕು ?”

“ಕಾಲ ಪಕ್ವವಾದಾಗ ಕುಲಪುತ್ರರಿಲ್ಲದಿದ್ದರೂ ಕಾರ್ಯ ಕೈಗೂಡುತ್ತದೆ. ಇಲ್ಲದಿದ್ದಲ್ಲಿ ಕುಲಪುತ್ರರೇನು ಮಾಡಿಯಾರು ?”

“ಬಿಡು, ಬಿಡು. ಇದೆಲ್ಲಾ ಜಾರಿಕೊಳ್ಳಲು ದಾರಿ !”

ನಿರ್ಮಲ ನಡುವೆ ಬಾಯಿ ಹಾಕಿದಳು “ಹೋಗಲಿ ಬಿಡಿ; ಏನೇನು ಆಗುತ್ತೋ ನೋಡೋಣ. ಅವನಿಗೆ ಒಳ್ಳೆಯ ಕೆಲಸ ಸಿಗುವುದೂ ಸಹ ಮುಖ್ಯ.”

‘‘ಇಲ್ಲೇ ನೋಡಿಕೊಂಡಿದ್ದರೆ ಒಳ್ಳೆಯದಿತ್ತು. ಇವನು ಅಷ್ಟುದೂರ ಹೋದರೆ ಇಲ್ಲಿ ದಿಕ್ಕು ತಪ್ಪಿದಂತಾಗುತ್ತೆ....ಪ್ರಸನ್ನ ಇದ್ದರೂ ಇಲ್ಲದಂತಿರುತ್ತಾನೆ; ಅದೇ ಬಂದಿರುವ ಕಷ್ಟ.” ಕಳವಳಭರಿತ ಧ್ವನಿಯಲ್ಲಿ ನುಡಿದಳು ಅವಳು.

ಏನೋ ಒಂದು ರೀತಿಯಲ್ಲಿ ಭಾವನಾಮಯಿಯಾಗಿ ಬಿತ್ತರಿಸಿದಳು ನಿರ್ಮಲ ‘‘ಯಾರಿಲ್ಲದಿದ್ದರೂ ದೇವರಿರುತ್ತಾನೆ !”

ಆ ಮಾತು ಕೇಳಿ ಜಾನಕಿ ಸುಮ್ಮನಾದಳು. ಹೃದಯ ಸುಖದುಃಖಗಳ ಗಣಿಯಾಗಿತ್ತು. ತಲೆಯನ್ನು ಹಲವಾರು ವಿಚಾರಧಾರೆಗಳು ಒಮ್ಮೆಗೇ ಮುತ್ತಿದುವು. ಅಂತರ್ನಿಹಿತ ಅಸ್ತಿತ್ವ ಮೇರೆ ಮೀರಿ ಹರಿಯತೊಡಗಿತು. ಯಾಂತ್ರಿಕವಾಗಿ ದಿನಚರಿಯಲ್ಲಿ ತೊಡಗಿದಳು. ದಿನವಹಿ ಇಂತಹ ಸಮಸ್ಯೆಗಳು ಭುಗಿಲೇಳುತ್ತಲೇ ಇರುತವೆ. ಅವುಗಳಿಗೆ ತಲೆಗೊಟ್ಟು ಚಿಂತಾಪಾರಾ

ಯಣತೆಯಲ್ಲಿ ಮುಳುಗಿ ಕೆಲಸಕಾರ್ಯಗಳನ್ನು ತೊರೆದು ಬಿಡಲು ಎಂದಾದರೂ ಸಾಧ್ಯವೇ? ಒಂದಲ್ಲ ಒಂದುರೀತಿಯಲ್ಲಿ ಕರ್ಮ ಸವೆಯಲೇಬೇಕು. ಅಂತಲೇ ಯಾವುಯಾವುದೋ ಕೆಲಸಗಳು ಎಲ್ಲಾ ಘಳಿಗೆಯಲ್ಲೂ ಕೈಗೂಡುತ್ತಲೇ ಇರುತ್ತವೆ. ಅವುಗಳಿಗೆ ಕೊನೆ ಮೊದಲೇ ಇಲ್ಲ. ಕಾಲೇಜಿನಿಂದ ನೇರವಾಗಿ ಗೆಳತಿಯ ಮನೆಗೆ ಹೋಗಿದ್ದ ವಿಮಲ ಇನ್ನೂ ಮನೆಗೆ ಹಿಂದಿರುಗಿರಲಿಲ್ಲ. ನಿರ್ಮಲ ಮತ್ತು ಪ್ರಫುಲ್ಲ ಅದೇ ವಿಚಾರ ಸಂಕೀರ್ಣದಲ್ಲಿ ಮುಳುಗಿದ್ದರೇನೋ. ಆದರೆ ಆ ಮಾತಾಮಯಿಯ ಜೀವ ನಾನಾ ಪ್ರಕಾರಗಳಲ್ಲಿ ಹೊಯ್ದಾಡುತಿತ್ತು. ಉಚಿತಾನುಚಿತಗಳ ಮೌಲ್ಯ ಕರತಲಾಮಲಕವಾದರೂ ಕಲಿತ ಜೀವಗಳಲ್ಲಿ ಸಾಮರಸ್ಯ ಮೂಡುತ್ತಿಲ್ಲವೇಕೆ ಎಂಬುದು ಅರ್ಥವಾಗದ ವಿಷಯ. ಯಾವುದು ತನಗೆ ವ್ಯರ್ಥವೋ ಅದು ಇತರರಿಗೂ ವ್ಯರ್ಥವಾಗಬೇಕೆಂಬುದೇನೂ ಇಲ್ಲ. ಹಾಗೆಂದು ನಿರ್ವಿಣ್ಣ ಭಾವದಿಂದ ಕುಳಿತಿರುವುದಾದರೂ ಹೇಗೆ? ಎದೆಯಾಳದಲ್ಲಿ ಮೂಡಿದ ಕಸಿವಿಸಿ ಕರುಳಿನ ಮೇಲೆ ಕತ್ತಿಯಲುಗಿನಂತೆ ಹರಿದಾಡಿದರೂ ನಿರ್ಲಿಪ್ತತೆ ಮೂಡುವುದು ಅಸಾಧ್ಯ. ಅವಳ ಜೀವನವಾಹಿನಿ ಬಾಲ್ಯದಿಂದಲೂ ಇಂಥ ನಾನಾ ಕಟು ಸಮಸ್ಯೆಗಳ ಕಲ್ಲುರಾಶಿಯ ಕೊರಕಲಿನಲ್ಲಿ ಸಾಹಸಪೂರ್ವಕವಾಗಿ ಹರಿದು ಬಂದಿದೆ. ಮುಂದೆಯೂ ಯಥಾಕ್ರಮ ಹರಿಯುವುದೇ ಅದರ ವೈಶಿಷ್ಟ್ಯ. ಚಿಕ್ಕಂದಿನಲ್ಲಿ ಅವಳ ತಾಯಿ ಅಂತಹ ವಿದ್ಯೆಯಲ್ಲಿ ಮಗಳನ್ನು ಪಾರಂಗತಳನ್ನಾಗಿ ಮಾಡಿದ್ದಾಳೆ. ಹಿಂದೂಸ್ಥಾನದ ಸ್ತ್ರೀ ಶಿಕ್ಷಣದಲ್ಲಿನ ಸರ್ವಪ್ರಧಾನ ಅಂಶ ಅವಳಲ್ಲಿ ಅನುಕ್ರಮವಾಗಿ ಮೈಗೂಡಿಕೊಂಡಿತ್ತು. ಅಂತಲೇ ಆಕೆ ಲುಪ್ತ ಪ್ರಾಯದಲ್ಲೂ ಸಂಧ್ಯಾಂಗನೆಯಂತೆ ಕಂಗೊಳಿಸುತ್ತಾಳೆ. ನೋಡಿದರೆ ಸಾಧಾರಣ ವಸನಧಾರಿಣಿ, ನಾಗರಿಕತೆಯ ವಾಸನೆಯೂ ಇಲ್ಲ, ವಿದ್ಯಾಬುದ್ಧಿಯ ಅದ್ಭುತ ಮೇಧಸ್ಸೂ ಕಾಣದು, ಆದರೆ ಆ ಎಲ್ಲಕ್ಕೂ ಜೀವಮಾನ ಶೋಭೆ ಕಿರೀಟವಿಟ್ಟಿತ್ತು.

ಮರುದಿನ ಸಂಜೆಗಪ್ಪು ಕವಿಯುವುದರೊಳಗಾಗಿ ಮುಂಬಾಗಿಲಿನಲ್ಲಿ ಅನಿರೀಕ್ಷಿತ ವ್ಯಕಿಯೊಬ್ಬರು ಕಾಣಿಸಿಕೊಂಡು ಉಚ್ಚಸ್ವರದಲ್ಲಿ ಪ್ರಶ್ನಿಸಿದರು "ಮನೆಯಲ್ಲಿ ಜಾನಕಮ್ಮ ಇದ್ದಾರೆಯೇ?"

ಒಳಗಡೆ ಕುಳಿತಿದ್ದ ಪ್ರಫುಲ್ಲ ಹೊರ ತಲೆಹಾಕಿ ನೋಡಿದ. ವ್ಯಕ್ತಿಯ ಪರಿಚಯ ಮೂಡಲಿಲ್ಲ, ಒಂದೆರಡುಕ್ಷಣ ಅನುಮಾನಿಸುತ್ತ ನಿಂತ.

"ಏಕೆ....? ನನ್ನ ನೋಡಿ ಏನೆನ್ನಿಸುತ್ತೆ ನಿನಗೆ?"

"ಛೇ! ಛೇ! ಏನೂ ಇಲ್ಲ. ಒಳಗೆ ಬನ್ನಿ."

ವಯೋವೃದ್ಧ ಒಳ ಹೆಜ್ಜೆ ಇಟ್ಟ. ಮೈಮೇಲೆ ಸಾಧಾರಣ ಉಡುಪು, ಕಣ್ಣಿಗೆ ಕನ್ನಡಕ, ಬೋಳುತಲೆ ಇವುಗಳು ಆಳವಾದ ಅನುಭವಕ್ಕೆ ಸಾಕ್ಷೀಭೂತವಾಗಿದ್ದುವು. ಅವನನ್ನು ನೋಡಿ ಅಚ್ಚರಿಗೊಂಡರೂ ಗಂಭೀರ ಭಾವದಿಂದ ಸ್ವಾಗತ ನೀಡಿದ.

"ನೀನು ಜಾನಕಮ್ಮನ ಮಗನೇ?"

"ಹೌದು."

"ಒಂದು ಕಾಲದಲ್ಲಿ ನಾನೂ ರಾಮರಾಯನೂ ಅತ್ಯಂತ ಆತ್ಮೀಯ ಗೆಳೆಯರು. ಅವನು ಬೇಗನೆ ಹೋಗಿ ಬಿಟ್ಟದ್ದರಿಂದ ನಮ್ಮನಮ್ಮ ಸಂಬಂಧ ದೂರವಾಯಿತು ಅಷ್ಟೆ. ಏತನ್ಮಧ್ಯೆ ಒಮ್ಮೆಯಾದರೂ ಬಂದು ವಿಚಾರಿಸಿಕೊಂಡು ಹೋಗಬೇಕೆಂದು ಯೋಚಿಸಿದ್ದೆ. ಎಷ್ಟೋ ಬಾರಿ ಪ್ರಯತ್ನಿಸಿಯೂ ಇದ್ದೆ. ಆದರೆ ಯಾವುಯಾವುದೋ ಕಾರಣಗಳಿಂದ ಕೈಗೂಡಲೇ ಇಲ್ಲ. ಈಗ ಸಕಾರಣ ಮೂಡಿದ್ದರಿಂದ ಹುಡುಕಿಕೊಂಡು ಬಂದೆ....ನಿಮ್ಮ ತಾಯಿ ಚೆನ್ನಾಗಿದ್ದಾರೆಯೇ?"

"ಹೌದು, ಚೆನ್ನಾಗಿದ್ದಾರೆ; ಕರೆಯುತ್ತೇನೆ." ಎನ್ನುತ್ತ ಕುರ್ಚಿಯ ಕಡೆ ಕೈತೋರಿ "ಕುಳಿತು ಕೊಳ್ಳಿ." ಎಂದ.

"ನನ್ನ ಹೆಸರು ರಾಮಕೃಷ್ಣರಾಯ. ಬಳಕೆಯಲ್ಲಿರುವುದು ಆರ್. ಕೆ. ರಾವ್. ಅಂತ."

ಪ್ರಫುಲ್ಲ ಸೀದಾ ಒಳಹೋಗಿ ಸುದ್ದಿಯನ್ನು ತಿಳಿಸಿದೊಡನೆ ಜಾನಕಿ ಹೊರ ಬಂದಳು. ಬಹಳ ಕಾಲದನಂತರ ಆದ ಸಂದರ್ಶನ ಆನಂದಾಶ್ಚರ್ಯಗಳನ್ನು ಮನಸ್ಸಿಗೆ ಮೂಡಿಸಿತು. ನಯ–ವಿನಯಗಳ ವಶೀಭೂತಳಾಗಿ ಎರಡೂ ಕೈಗಳನ್ನು ಜೋಡಿಸಿ "ಚೆನ್ನಾಗಿದ್ದೀರಾ? ತುಂಬ ಅಪರೂಪ ದರ್ಶನ!" ಎಂದಳು. ತುಟಿಗಳಲ್ಲಿ ಮುಗುಳು ನಗೆ ಚೆಲ್ಲಿತು. ನಯನದ್ವಯಗಳಲ್ಲಿ ಸಾನಂದದ ಖಳೆ ಮೂಡಿ ಪ್ರಕಾಶವಾಯಿತು.

"ಎಲ್ಲಕ್ಕೂ ಸಮಯ ಕೂಡಿ ಬರಬೇಕಲ್ಲ?" ಎಂದ ರಾಮಕೃಷ್ಣರಾಯ ಪುನಃ ತಾನೇ ತಾನಾಗಿ ಮುಂದುವರಿದ "ಈಚೆಗೆ ಪರಸ್ಪರ ಭೇಟಿ ನಡೆಯ

ಲಿಲ್ಲ....ನಮ್ಮ ವಿಚಾರ ನಿಮಗೆ ತಿಳಿಯದು. ನಿಮ್ಮದು ನಮಗೆ ತಿಳಿಯದು. ನನ್ನ ಮಕ್ಕಳು ದೊಡ್ಡವರಾಗಿ ಉದ್ಯೋಗ ಹಿಡಿದಿದ್ದಾರೆ. ಹೆಣ್ಣುಮಕ್ಕಳಿಗೆ ಮದುವೆ ಮಾಡಿದ್ದೇನೆ, ಎಲ್ಲರೂ ಅವರವರ ಸಂಸಾರದಲ್ಲಿ ಸುಖವಾಗಿದ್ದಾರೆ. ನಾನು ನಿವೃತ್ತಿವೇತನ ಪಡೆಯುತಿದ್ದೇನೆ. ನನ್ನ ಹೆಂಡತಿ ಮಕ್ಕಳು ನನ ಗೊಂದು ಕೆಲಸ ಹಚ್ಚಿ ನಿಮ್ಮಲ್ಲಿಗೆ ಕಳುಹಿಸಿದ್ದಾರೆ. ಅದಕ್ಕೆಂತಲೇ ಈಕಡೆ ಬಂದೆ."

ಆ 'ಕೆಲಸ' ಏನೆಂಬುದನ್ನು ತಿಳಿಯಲು ಮನಸ್ಸು ಉತ್ಸುಕತೆಯಿಂದ ನಿರೀಕ್ಷಿಸಿತು. ಕಿವಿಗಳು ನಿಮಿರಿನಿಂತುವು. ಆದರೂ ಸಂಕೋಚದಿಂದ ತುಟಿ ಗಳು ಮಾತ್ರ ಬಿರಿಯಲಿಲ್ಲ.

"ನನ್ನ ಎರಡನೆಯ ಮಗ ರಾಧೇಶ್ಯಾಂ ನ್ಯಾಯಶಾಸ್ತ್ರ ಓದಿ ಇಲ್ಲೇ ಪ್ರಾಕ್ಟೀಸು ಮಾಡುತಿದ್ದಾನೆ. ಹಿರಿಯವನು ಬ್ಯಾಂಕಿನಲ್ಲಿ ಕೆಲಸ ಮಾಡು ತಿದ್ದಾನೆ. ಭಗವಂತ ನಮ್ಮ ಧರ್ಮಕರ್ಮ ನೋಡಿ ಕೈತುಂಬ ಆಶೀರ್ವಾದ ಮಾಡಿದ....ಆರ್ಥಿಕ ಸ್ಥಿತಿ ಉತ್ತಮವಾಗದಿದ್ದರೂ ಜೀವನಗತಿ ಕುಗ್ಗಲಿಲ್ಲ."

"ದೇವರು ದೊಡ್ಡವನು !"

"ನಾನೀಗ ಬಂದ ವಿಚಾರಕ್ಕೆ ರಾಮರಾಯ ಇದ್ದಿದ್ದರೆ ನಮಗೆ ಎಷ್ಟು ಸಂತೋಷವಾಗುತಿತ್ತೋ ಹೇಳುವಂತಿಲ್ಲ... ಎಲ್ಲಕ್ಕೂ ಪುಣ್ಯ ಬೇಕಲ್ಲ ?"

"........"

"ಎಲ್ಲಾ ಪೂರ್ವ ಕರ್ಮ....ಅಲ್ಲವೇ ತಾಯಿ ? ಏನಿದ್ದರೂ ಅನುಭವಿಸ ಬೇಕು."

"........"

ಮುದುಕನ ಕೊನೆಯಿಲ್ಲದ ಮಾತಿನ ಸರಣಿಯನ್ನು ಗಮನಿಸುತಿದ್ದ ಪ್ರಫುಲ್ಲ ವಿಚಾರ ಕುತೂಹಲಿಯಾಗಿ ಅಲ್ಲೇ ನಿಂತು ನಿರ್ನಿಮೇಷ ನಯನಗಳಿಂದ ನಿಟ್ಟಿಸತೊಡಗಿದ. ಮುಖಭಾವದಲ್ಲಿ ಔತ್ಸುಕ್ಯ ಒಡೆದು ಮೂಡಿತ್ತು.

"ಆಗೆಲ್ಲಾ ನಮಗೂ ನಿಮಗೂ ಎಷ್ಟೊಂದು ಸ್ನೇಹ ಸೌಹಾರ್ದ ಇತ್ತು ? ಆ ಒಂದು ವ್ಯಕ್ತಿ ಇಲ್ಲದೇನೇ ಎಲ್ಲಾ ಕಳೆದು ಹೋಯಿತು ನೋಡಿ...."

ಅವನು ಆ ಹಳೆಯ ವಿಚಾರಗಳನ್ನು ಕುರಿತು ಅದೆಷ್ಟು ಹೊತ್ತು ಮಾತಾಡಿದನೋ....ವಿಷಯಗಳು ಮುಗಿದರೂ ಮಾತಿನ ಚಟ ಮುಗಿದಂತೆ

ತೋರಲಿಲ್ಲ. ಅದಕ್ಕೆ ಯಾವ ರೀತಿ ಮಂಗಳ ಹಾಡಬೇಕೋ ತಿಳಿಯದೆ ಸುಮ್ಮನಾದಳು ಜಾನಕಿ.

ವೃದ್ಧ ಮಹಾಶಯ ಯಾವುದೋ ವಿಚಾರವನ್ನು ಮನದಲ್ಲಿ ಮೆಲುಕು ಹಾಕುತ್ತ ಅಂದ,

"ನಾನು ಹೀಗೆ ಅನಿರೀಕ್ಷಿತವಾಗಿ ಬಂದು ಕುಳಿತುದು ನಿಮಗೆ ತೊಂದರೆ ಎನ್ನಿಸಿದೆಯೋ ಏನೋ....ಆದರೆ ನನಗೆ ಹೀಗೆ ಕಾಣಿಸಿಕೊಳ್ಳುವುದರಲ್ಲೇ ಶೋಭೆ ಇದೆ ಎನ್ನಿಸುತ್ತೆ. ನೀವು ಏನೆನ್ನುವಿರಿ ?"

ಜಾನಕಿ ಆತನ ಅಭಿಪ್ರಾಯವನ್ನು ಬೆಂಬಲಿಸುವಂತೆ ನುಡಿದಳು,

"ಅಂತಹ ಆಡಂಬರ ಎಲ್ಲಾ ಏಕೆ? ಹೀಗಿರುವುದೇ ಚೆನ್ನ !"

"ನಾನು ಹೊರಡುವಾಗ ರಾಧೇಶ್ಯಾಂ ಹಾಗೇ ಅಂದ; ನನ್ನ ಪತ್ನಿಗೂ ಅದೇ ಇಷ್ಟವಾಗಿತ್ತು....ಎಲ್ಲರ ಅಭಿಪ್ರಾಯವನ್ನು ಮೀರಿ ನಾನು ಹಳೆಯ ಸ್ನೇಹಿತನಾಗಿಯೇ ನಿಮ್ಮಲ್ಲಿಗೆ ಬಂದಿರುವೆ. ನಿಮ್ಮ ಮನಸ್ಸಿನಲ್ಲಿ ಯಾವ ಅಭಿಪ್ರಾಯವಿತ್ತೋ ಅದನ್ನು ತಿಳಿದುಕೊಂಡೇ ಬಂದಿದ್ದರೆ ಚೆನ್ನಾಗಿತ್ತು. ಆದರೆ ನನ್ನದು ಸ್ವಲ್ಪ ಒರಟು ಸಂಪ್ರದಾಯ. ಅದು ಈಗ ಹೋಗುವುದಾದರೂ ಹೇಗೆ? ನನಗೆ ನವವಿಧಾನ ಆಡಂಬರ ಒಂದೂ ತಿಳಿಯುವುದಿಲ್ಲ. ನೀವು ಇದನ್ನೆಲ್ಲ ಮನಸ್ಸಿಗೆ ಹಚ್ಚಿಕೊಳ್ಳಬಾರದು...." ವಾಗ್ಧಾರೆ ಪೂರ್ಣಗೊಂಡಾಗ ಆತನ ರೂಕ್ಷ ತುಟಿಗಳ ಮೇಲೆ ಮಂದಹಾಸ ಮಿನುಗುತಿತ್ತು.

"ಇಲ್ಲ....ಇಲ್ಲ." ಎಂದಳು ಜಾನಕಿ. ಹಳೆಯ ಸ್ನೇಹಾನುರಾಗವನ್ನು ಸೂಸಿ.

ಅಷ್ಟಕ್ಕೆ ವಿಷಯ ಕೊನೆಗಾಣಲಿಲ್ಲ. ಹದಿನೈದು ವರ್ಷಗಳ ಜೀವನದ ಸಾರಾಸಾರವನ್ನೆಲ್ಲ ಒಮ್ಮೆಗೇ ಉಣಬಡಿಸುವಷ್ಟು ಉತ್ಸಾಹ ಆತನಲ್ಲಿ. ರಾಮುರಾಯನ ಕಾಲಾನಂತರ ತುಂಡುಗಡಿದ ಬಳಕೆಯನ್ನು ಪುನಃ ಚಿಗುರಿಸುವ ಉತ್ಸಾಹ, ಅಂದಿಂದಿಗೂ ಸಂಭವಿಸಿದ ವಿಷಯಗಳೆಲ್ಲ ತುದಿನಾಲಿಗೆಯ ಮೇಲೆಯೇ ಇವೆ. ಏತನ್ಮಧ್ಯೆ, ಒಮ್ಮೆಯಾದರೂ ಬಂದು ಹೋಗದಿರಲು ಕಾರಣ, ತನ್ನ ಸಂಸಾರವನ್ನು ವಿಷಚಕ್ರದಿಂದ ಉಳಿಸಿಕೊಂಡ ಬಗೆ, ಮೆಟ್ಟಿಲು ಮೆಟ್ಟಿಲಾಗಿ ಉತ್ತುಂಗಕ್ಕೇರಿದ ಬಗೆ, ಎಷ್ಟು ಹೇಳಿಕೊಂಡರೂ ಸಾಲದು; ವಿಷಯಗಳೂ ಮುಗಿಯವು; ಅನೇಕ ವೇಳೆ ಪುನರುಕ್ತಿಯ ಸುರಿಮಳೆಯೂ

ಸೂಸಿತು. ಹೊತ್ತು ಉರುಳಿದರೂ ಆತ ತಾನು ಬಂದ ಕಾರ್ಯನಿಮಿತ್ತವನ್ನು ಜ್ಞಾಪಿಸಿಕೊಂಡಂತೆ ತೋರಲಿಲ್ಲ. ಜಾನಕಿಯ ಚಿತ್ತ ಮೊದಲೇ ಶೋಕ ಭಾರವಾಗಿತ್ತೇನೋ. ಆ ವೃದ್ಧಮಹಾಶಯನ ಅನವಶ್ಯಕವಾದ ವಿವರಣೆ ಮತ್ತಷ್ಟು ಭಾರಗೊಳಿಸಿತು. ಎದೆಯಾಳದ ಕಸಿವಿಸಿಯನ್ನೆಲ್ಲಾ ತನ್ನಲ್ಲೇ ಹುಗಿದುಕೊಂಡು ಉತ್ಸಾಹ ಪ್ರದರ್ಶನ ಮಾಡಿದಳು.

ಅವನು ಆನಂದಭರಿತ ಕಂಠದಿಂದ ಮುಂದುವರಿದ "ನಾನು ನಿಮ್ಮಗಳ ಇಂದಿನ ಜಾಯಮಾನ ಕಂಡುಬಂದವನಲ್ಲ. ರಾಮರಾಯನ ಕಾಲದ ಗೆಳೆತನದ ಜಾಡನ್ನೇ ಹಿಡಿದು ಬಂದವ. ಇಲ್ಲದಿದ್ದಲ್ಲಿ ನನ್ನ ಹೆಂಡತಿ ಮಕ್ಕಳು ತಿಳಿಸಿದಂತೆ ನಿಮ್ಮನ್ನು ಹೇಳಿ ಕೇಳಿ, ಕಾಗದ ಬರೆದು ನವ್ಯ ಸಂಪ್ರದಾಯಕ್ಕೆ ಅನುಗುಣವಾಗಿ ಒಳ್ಳೆಯದು ಕೆಟ್ಟದ್ದು ವಿಮರ್ಶೆ ಮಾಡಿಕೊಂಡು ಬರುತಿದ್ದೆ: ನಿಮ್ಮ ಬಳಿಗೆ ಬರುವುದಕ್ಕೆ ನನಗೆ ಅವೊಂದೂ ಬೇಕಾಗಲಿಲ್ಲ. ಆಗ ಹೇಗೆ ಬರುತಿದ್ದೆನೋ ಈಗಲೂ ಹಾಗೆಯೇ ಬಂದಿರುವೆ. ಮುಂದೆಯೂ ಬರುವುದು ಹಾಗೆಯೇ ಅಂದುಕೊಳ್ಳಿ ! ಬಹಳ ದಿನಗಳಿಂದ ಈಕಡೆ ಬಂದಿರಲಿಲ್ಲ. ಸುತ್ತ ಮುತ್ತಿನ ಮನೆಗಳೆಲ್ಲ ವಿಕಟ ಭಂಗಿಯಲ್ಲಿ ಪರಿವರ್ತನೆ ಹೊಂದಿವೆ. ಈಗೀಗ ನನ್ನ ಕಣ್ಣು ಸ್ವಲ್ಪಸ್ವಲ್ಪ ಮಂಜು. ನನಗೆ ದಾರಿ ಹುಡುಕಿಕೊಳ್ಳುವುದು ಸ್ವಲ್ಪ ಕಷ್ಟವಾಯಿತು. ಆದರೂ ಹಾದಿ ತಪ್ಪಲಿಲ್ಲ. ಹಳೆಯ ನೆನಹಿನಲ್ಲೇ ನೇರವಾಗಿ ಬಂದೆ. ಆದರೆ 'ಮರೆವು' ಎಂದುಕೊಳ್ಳಬೇಡಿ."

"ಹೌದು ಉದ್ದಕ್ಕೂ ಹೊಸಮನೆಗಳನ್ನು ಕಟ್ಟಿದ್ದಾರೆ. ಈಗ ಮೊದಲಿನಂತಿಲ್ಲ ತುಂಬ ಪರಿವರ್ತನೆಯಾಗಿದೆ." ಜಾನಕಿ ಪ್ರಯತ್ನಪೂರ್ವಕವಾಗಿ ತನ್ನ ದನಿಯನ್ನು ಹರಿಯಬಿಟ್ಟಳು.

"ರಾಮರಾಯ ನಮ್ಮ ಮನೆಗೆ ಬಂದು ಕಷ್ಟಸುಖಗಳನ್ನೆಲ್ಲ ಹೇಳಿಕೊಳ್ಳುತಿದ್ದ. ಅವನಿಗೆ ಬಡ್ತಿ ಸಿಗುತ್ತೆ ಎಂಬ ಆಸೆ ಬಹಳವಾಗಿತ್ತು. ಅದೃಷ್ಟವಿರಲಿಲ್ಲ ಎನ್ನುವುದಕ್ಕಿಂತ ಸ್ವಾರ್ಥಿಗಳ ಕೈವಾಡ ಎನ್ನಬಹುದು. ಅವನು ಎಷ್ಟೆಷ್ಟು ಪ್ರಯತ್ನಿಸಿದನೋ ಒಂದೂ ಕೈಗೂಡಲಿಲ್ಲ."

"ಎಲ್ಲಾ ದೈವೇಚ್ಛೆ !"

"ಹಾಂ ! ಅದು ಹೇಳಿ, ದೈವೇಚ್ಛೆ ಇಲ್ಲದಿದ್ದರೆ ಯಾವುದೂ ಆಗುವುದಿಲ್ಲ."

ಜಾನಕಿ ಮಾತಾಡಲಿಲ್ಲ.

ಅವನು ತನ್ನದೇ ಆದ ಧಾಟಿಯಲ್ಲಿ ಮುಂದುವರಿದ "ನಾನೂ ರಾಮರಾಯನೂ ಒಂದೇ ಶಾಲೆಯಲ್ಲಿ ಓದಿದವರು. ಮುಂದೆ ಓದಲು ಅವನಿಗೆ ಆರ್ಥಿಕ ಅಡಚಣೆ ಬಂದುದರಿಂದ ಅಷ್ಟಕ್ಕೆ ಬಿಟ್ಟ, ನಾನಾದರೋ ಬುದ್ಧಿ ಓಡದೆ ಬಿಟ್ಟೆ!"

ಬಾಯ್ತೆರೆದು ಗಟ್ಟಿಯಾಗಿ ನಕ್ಕು ನುಡಿದ "ನಮ್ಮ ಜೀವನಕಾವ್ಯ ಅರ್ಥಹೀನವಾದರೂ ಛಂದೋಹೀನವಾಗಲಿಲ್ಲ."

"........"

ಜಾನಕಿಗೆ ಮೊದಮೊದಲು ಇದ್ದ ಉತ್ಸಾಹ ನದಿಯ ನೀರಿನಂತೆ ಹರಿದು ಹೋಯಿತು. ಯಾವರೀತಿ ತಡೆಗಟ್ಟಿ ಹಾಕಬೇಕೋ ತಿಳಿಯಲಿಲ್ಲ. ಏನೋ ಒಂದು ರೀತಿಯಲ್ಲಿ ಉತ್ಸ್ತಂಭಿತಳಾಗಿ ಮರದ ಬೊಂಬೆಯಂತೆ ನಿಂತು ವೃದ್ಧನ ವಾಕ್ಸರಣಿಯನ್ನು ಕೇಳುತಿದ್ದಳು. ಪ್ರಫುಲ್ಲ ವಿಚಿತ್ರ ಸಂಯಮದಿಂದ ಒಮ್ಮೆ ತಾಯಿಯನ್ನೂ ಇನ್ನೊಮ್ಮೆ ಅವನನ್ನೂ ನೋಡುತ್ತ ತನ್ನಲ್ಲೇ ವಿನೋದ ವಿಶೇಷವನ್ನು ಸವಿಯುತಿದ್ದ. ಮನಸ್ಸು ಉತ್ಸಾಹ ಜುಗುಪ್ಸೆಗಳ ಒಕ್ಕೂಟವಾಗಿದ್ದುವು.

"ಇನ್ನೊಂದು ಆಶ್ಚರ್ಯವೆಂದರೆ ಹದಿನೈದು ವರ್ಷದಿಂದ ನಮ್ಮ ಸ್ನೇಹ ಸಂಬಂಧ ಕಡಿದು ಹೋಗಿದ್ದರೂ ಬಾಡಿ ಬತ್ತಲಿಲ್ಲ; ಹೇಗಿತ್ತೋ ಹಾಗೆಯೇ ಇದೆ. ಅದೂ ಸಹ ಒಂದು ಪುಣ್ಯವಿಶೇಷ."

ಜಾನಕಿ ಮುಗುಳು ನಗೆಯೊಡನೆ ವಿಷಯವನ್ನು ಅನುಮೋದಿಸಿದಳು. ಎದೆಯಾಳದಲ್ಲಿ ಕಿಸಿಸಿಗೆಯ ಝರಿ ಸದ್ದಿಲ್ಲದೆ ಹರಿದಾಡುತಿತ್ತು.

ರಾಮಕೃಷ್ಣರಾಯ ಬಚ್ಚುಬಾಯಿಯನ್ನು ತೆರೆದು ನಗುತ್ತ ಅಂದ, "ನನ್ನ ಹೆಂಡತಿ ಮಕ್ಕಳು ಬಟ್ಟೆ ಬರೆ ಅಚ್ಚುಕಟ್ಟಾಗಿ ಹಾಕಿಕೊಂಡು ಹೋಗಿ ಎಂದು ಒತ್ತಾಯ ಪೂರ್ವಕವಾಗಿ ಹೇಳಿದ್ದರು."

"ಅಯ್ಯೊ, ಶಿವ! ನಾವೇನು ಅಷ್ಟೊಂದು ದೊಡ್ಡವರಲ್ಲ."

"ಆದರೂ, ಕಾಲ ಮಹಿಮೆ! ಅದಕ್ಕೆ ಎಲ್ಲರೂ ತಲೆಬಾಗುತ್ತಾರೆ. ನಮಗೆ ನಿಮಗೆ ಬೇಡ ಅಷ್ಟೆ."

ಸದ್ಯ ಮುದುಕಪ್ಪ ಹೋಗಿದ್ದರೆ ಚೆನ್ನಾಗಿತ್ತು. ಆ ಕಿಷ್ಕಿಂಧಾಪುರಿ ಯಲ್ಲಿ ಹೊಸಬರು ಮಂಡಿಸಿದರೆ ಮನೆಯವರ ಕಾರ್ಯಾಗಾರ ಸ್ತಬ್ಧಗೊಳ್ಳಲೇ

ಬೇಕು. ಇಂಥ ಅರ್ಥಹೀನ ವ್ಯವಹಾರ ಮೂಡಿತೆಂದರೆ ಮನಃಪ್ರಾಣಗಳನ್ನು ಕಿಂಕರ್ತವ್ಯಮೂಢತೆ ವ್ಯಾಪಿಸಿಬಿಡುತ್ತದೆ. ಪ್ರಫುಲ್ಲ ನೀರಿನಿಂದ ಹೊರತೆಗೆದ ಮೀನಿನಂತಾದರೂ ಅವರ ಮುಂದೆಯೇ ಹೊರ ಹೋಗಲು ಇಷ್ಟಪಡದೆ ಅಲ್ಲೇ ತಳವೂರಿದ.

"ನೀವು ನಮ್ಮನ್ನು ಸಂಪೂರ್ಣ ಮರೆತೇಬಿಟ್ಟಿದ್ದಿರೇನೋ ?"

"ಇಲ್ಲ....ಇಲ್ಲ. ಅದ್ಹೇಗೆ ಮರೆಯುವುದಕ್ಕಾಗುತ್ತೆ ? ಪರಸ್ಪರ ಭೇಟಿಯಾಗಲಿಲ್ಲ ಅಷ್ಟೆ."

ಅದೇ ಧಾಟಿಯಲ್ಲಿ ರಾಮಕೃಷ್ಣರಾಯ ಪುನಃ ಮುಂದುವರಿದ "ಹಿಂದಿನದೆಲ್ಲ ಜ್ಞಾಪಕವಿದೆಯಲ್ಲವೇ ತಾಯಿ ? ರಾಮರಾಯ 'ಸಸ್ಪೆಂಡ್' ಆಗಿದ್ದ ಕಾಲದಲ್ಲಿ ನಾನು ಎಷ್ಟು ಬಾರಿ ನಿಮ್ಮ ಮನೆಗೆ ಬರಲಿಲ್ಲ ? ನೀನಾಗ ಬಹಳ ಧೈರ್ಯಶಾಲಿನಿಯಾಗಿ ವರ್ತಿಸಿದೆ. ನಿನ್ನ ಧೈರ್ಯವೇ ಅವನನ್ನು ಕಾಪಾಡಿತು ಎನ್ನಬಹುದು. ಆಗ ನಾನು ನಿನ್ನನ್ನು ಉದಾಹರಣೆಯಾಗಿಟ್ಟು ಆತನಿಗೆ ಎಷ್ಟು ಬಾರಿ ಧೈರ್ಯ ಹೇಳಲಿಲ್ಲ ? ಅವನಿಗೆ ಅರ್ಧ ಧೈರ್ಯ ಮೂಡಿಸಿದವನು ನಾನೇ ! ಆತ ಸುಮ್ಮನೆ ಕಣ್ಣೀರು ಹಾಕುತ್ತ ಕುಳಿತುಬಿಡುತಿದ್ದ. ಆಗ ನಾವು ಧೈರ್ಯ ಹೇಳದಿದ್ದಲ್ಲಿ ಅವನು ಖಂಡಿತ ಆತ್ಮಹತ್ಯೆ ಮಾಡಿಕೊಳ್ಳುತಿದ್ದ. ಆಗಂತೂ ಕಾಪಾಡಿಕೊಂಡೆವು. ಆದರೆ ವಿಧಿ ಸುಮ್ಮನಿರಬೇಕಲ್ಲ ? ಪಾಪ, ಆಗ ಯಾರೋ ಮಾಡಿದ ತಪ್ಪಿಗೆ ಈತ ತಲೆಯೊಡ್ಡಬೇಕಾಗಿ ಬಂತು ಅಲ್ಲವೆ? ಕೊನೆಗೂ ಅದರ ನಿವಾರಣೆಗಾಗಿ ಎಷ್ಟು ಹೋರಾಡಬೇಕಾಗಿ ಬಂತು? ಪಾಪ....ಪಾಪ ! ಊರು ಕೊಳ್ಳೆ ಹೊಡೆದವರನ್ನು ಕಂಡರೂ ಕಾಣದಂತಿರುತ್ತೆ ಸರಕಾರ ! ನಮ್ಮಂತಹ ಬಡ ನೌಕರರು ಸಿಕ್ಕಿಬಿಟ್ಟರೆ ಬೆನ್ನು ಹತ್ತುತ್ತೆ. ಈ ಕಾಲವೇ ಹೀಗೆ, ತುಂಬ ಕೆಟ್ಟುಹೋಯಿತು. ನಿಷ್ಠಾವಂತರನ್ನು ಯಾರು ಕೇಳಬೇಕು ಹೇಳಿ ? ನಿಮ್ಮ ಹಿರಿಯ ಮಗನ ಹೆಸರೇನು ? ಆಗಲೇ ಮರೆತುಬಿಟ್ಟೆ....ಒಮ್ಮೊಮ್ಮೆ ಚೆನ್ನಾಗಿ ಜ್ಞಾಪಕವಿರುತ್ತೆ, ಒಮ್ಮೊಮ್ಮೆ ಹೀಗೆ ಮರೆತುಬಿಡುವೆ. ದಯವಿಟ್ಟು ಬೇಸರಿಸಬಾರದು....?"

"ಅವನ ಹೆಸರು ಪ್ರಸನ್ನ !"

"ಓ....ಈಗ ಜ್ಞಾಪಕಕ್ಕೆ ಬಂತು ನೋಡಿ. ರಾಮರಾಯ ಕಂಡು ಕೇಳಿದ್ದಕ್ಕೆಲ್ಲಾ ಅವನನ್ನು ನಮ್ಮ ಮನೆಗೆ ಕಳುಹಿಸುತಿದ್ದ. ನಾನೇ ಜಾತಕ, ಪಂಚಾಂಗ

ಎಲ್ಲವನ್ನೂ ನೋಡಿ ಹೇಳುತಿದ್ದೆ. ಹುಡುಗನಿಗೆ ಎಷ್ಟೋ ಬಾರಿ ಪಾಠವನ್ನೂ ಹೇಳಿದ್ದೀನಿ. ಆಗ ಅವನು ಜುಟ್ಟು ಬಿಟ್ಟುಕೊಂಡಿದ್ದ. ಈಗ ಹೇಗಿದ್ದಾನೋ.... ಅನಂತರ ಕಾಣಲೇ ಇಲ್ಲ."

ಆ ಮಾತು ಎಲ್ಲರ ಮುಖದಲ್ಲೂ ಎಳೆನಗು ಮೂಡಿಸಿತು.

"ಈಗ ಚೆನ್ನಾಗಿದ್ದಾನೆ. ಅಕೌಂಟೆಂಟ್ ಆಗಿ ಕೆಲಸ ಮಾಡುತಿದ್ದಾನೆ. ಮದುವೆಯಾಗಿ ಒಂದು ಮಗುವಿದೆ." ಜಾನಕಿ ವಿವರಣೆ ನೀಡಿದಳು.

"ಓ....ಬಹಳ ಸಂತೋಷ! ಆಗೆಲ್ಲಾ ಬಹಳ ತೀಟೆಮಾಡುತಿದ್ದ. ನಾನಂತೂ ಬುದ್ಧಿ ಹೇಳಿಹೇಳಿ ಸುಸ್ತಾಗುತಿದ್ದೆ. ಒಮ್ಮೆ ಅಪ್ಪ ಹೊಡೆದ ಅಂತ ಎಲ್ಲೋ ಹೋಗಿ ಬಿಟ್ಟಿದ್ದ ಹಾಗೇ ನೆನಪು....ಹೌದೇ ?"

"ಇರಬಹುದು ..ನನಗೂ ಸರಿಯಾಗಿ ಜ್ಞಾಪಕವಿಲ್ಲ."

"ನಿಮಗೆ ಒಟ್ಟು ಮೂರೋ ನಾಲ್ಕೋ ಮಕ್ಕಳು ?"

"ನಾಲ್ಕು. ಇಬ್ಬರು ಹೆಣ್ಣು ಮಕ್ಕಳು; ಇಬ್ಬರು ಗಂಡು ಮಕ್ಕಳು."

"ಮೊದಲ ಮಗಳಿಗೆ ಮದುವೆಯಾಗಿದೆಯೇ ?"

"ಇಲ್ಲ; ಕೆಲಸಮಾಡುತಿದ್ದಾಳೆ."

"ಒಂದುವೇಳೆ ರಾಮುರಾಯ ಇದ್ದಿದ್ದರೆ ಹೀಗಾಗುತಿತ್ತೆ ? ಲಕ್ಷಣವಾಗಿ ಸಂಸಾರ ಮಾಡಿಕೊಂಡಿರುತಿದ್ದಳು. ಅದಕ್ಕೂ ಪಡೆದುಕೊಂಡು ಬಂದಿರ ಬೇಕಲ್ಲ ?"

"........"

"ಅದಕ್ಕೇ ನಾನು ಇನ್ನೂ ಜೀವ ಹಿಡಿದಿದ್ದೀನಿ. ನಾವು ಚೆನ್ನಾಗಿರುವಾಗ ನಮ್ಮ ಮಕ್ಕಳು ಸಂಸಾರಸ್ಥರಾದರೇನೇ ನಿಶ್ಚಿಂತೆ ಅಲ್ಲವೆ ? ನಿಮಗೇನೆನಿಸುತ್ತೆ ಜಾನಕಮ್ಮ ? ಪಾಪ....ಪಾಪ, ನೀವು ಈಗ ಏನು ಹೇಳಬಲ್ಲಿರಿ ? ಕೈ ಮೊಟಕು ವಿದ್ಯೆ ಬುದ್ಧಿ ಕಲಿಯಲಿಲ್ಲ. ಈಗಿನ ಮಕ್ಕಳನ್ನು ಸಂಬಾಳಿಸುವುದೂ ಸುಲಭ ವೇನಲ್ಲ. ನಾಲ್ಕಕ್ಷರ ಕಲಿತು ಗಗನಕ್ಕೇರಿ ಬಿಟ್ಟಿರುತ್ತಾರೆ!"

ಜಾನಕಿ ಮುಗುಳು ನಕ್ಕಳು.

ಪ್ರಫುಲ್ಲ ಸಿರಿಸಿರಿ ಸಿಟ್ಟೈಸುತ್ತಲೇ ಇದ್ದ. ಏನು ಹೇಳಲೂ ತೋಚಲಿಲ್ಲ. ಒಮ್ಮೆ ಪುರಾಣ ಮುಗಿಸಿದ್ದರೆ ಸಾಕಾಗಿತ್ತು. ಅವನೊಂದಿಗೆ ಏನು ಮಾತಾಡ ಬೇಕೆಂಬುದೂ ಅರ್ಥವಾಗುತ್ತಿಲ್ಲ. ಏನೋ ಒಂದು ರೀತಿಯಲ್ಲಿ ಪೈಮುರಿತವ

ರಂತೆ ಅಭಿಭೂತರಂತೆ ನಿಂತಿರುವಾಗಲೇ ಹೊರಗಡೆಯಿಂದ ಬಂದ ವಿಮಲ ಪ್ರಸನ್ನತೆಯಿಂದ ಒಳಗಡೆ ಪದಾರ್ಪಣೆಮಾಡಿದಾಗ, ಒಳಗಡೆ ಹೊಸಬರು ಮಂಡಿಸಿರುವುದನ್ನು ಗಮನಿಸಿ ನಸು ಲಜ್ಜಾಭಾವದಿಂದ ಅಲ್ಲಿ ನಿಲ್ಲದೆ ಒಳಗಡೆ ಹೋದಳು. ಸಂಜೆಯ ಸೊಬಗು ಒಡೆದು ಮೂಡಿದಂತೆ ಅರುಣಾಯಿತ ಸುಂದರ ವಿಲೋಚನೆಯನ್ನು ಕಂಡು ಅತ್ಯಂತ ಆಸಕ್ತಿಯಿಂದ ವೃದ್ಧ ಮಹಾಶಯ ಕೇಳಿದ "ಯಾರು ಈ ಹುಡುಗಿ ?"

"ನನ್ನ ಕಿರಿಯ ಮಗಳು-ವಿಮಲ."

ಮರೆತುಹೋದ ವಿಷಯವನ್ನು ನೆನಪಿಸಿಕೊಂಡಂತೆ ತಟ್ಟನೆ ಕೇಳಿದ "ಓ....! ಇವಳೇಯೆ ? ನಾನು ನೋಡಿರಲಿಲ್ಲ. ನಮ್ಮ ಬೀದಿಯಲ್ಲಿರುವ ಹೇಮಾಂಗಿನಿಯ ಮನೆಗೆ ಬರುತ್ತಿರುತ್ತಾಳೆಂದು ಕೇಳಿದ್ದೆ."

"ಹೌದು... ಇಬ್ಬರೂ ಒಟ್ಟಿಗೆ ಓದಿದವರು."

"ಹಾಂ ! ಈಗ ನೆನಪಿಗೆ ಬಂತು. ಅದೇ ವಿಚಾರಕ್ಕಾಗಿಯೇ ನಾನು ಬಂದದ್ದು !"

ವಿಷಯ ಹೊರಹೊಮ್ಮಿದಾಗ ಕಣ್ಣುಗಳಲ್ಲಿ ಶ್ರದ್ಧಾಭಾವ ಮಿನುಗಿತು.

## ೧೭

ಪ್ರಫುಲ್ಲ ಸುಮ್ಮನೆ ಮಂತ್ರಮುಗ್ಧನಂತೆ ಕುಳಿತೇ ಇದ್ದ. ಚಿತ್ತ ಅತಿಥಿಯ ಎಣೆಯಿಲ್ಲದ ವಾಗ್ಧಾರೆಯಲ್ಲಿ ಮೀಯುವಾಗ ಕಣ್ಣುಗಳಲ್ಲಿ ಒಮ್ಮೆ ಅಶ್ರದ್ಧೆ ಒಮ್ಮೆ ಆಸಕ್ತಿ ಕಾಣಿಸುತಿತ್ತು. ರಾಮಕೃಷ್ಣರಾಯ ಹಣೆಯ ಮೇಲೆ ಮೂಡಿದ್ದ ಬೆವರಿನ ತುಂತುರುಗಳನ್ನು ಹೊದ್ದ ಉತ್ತರೀಯದಿಂದ ತೀಡಿಕೊಂಡು ತಾನು ಬಂದ ಕಾರ್ಯನಿಮಿತ್ತವನ್ನು ಸ್ಮರಣೆಗೆ ತಂದುಕೊಳ್ಳುತ್ತ ನುಡಿದ, "ಈಗೀಗ ನನಗೆ ಜ್ಞಾಪಕಶಕ್ತಿ ಕಡಿಮೆ. ಆದರೂ ಬುದ್ಧಿಬಲ ಕುಸಿಯಲಿಲ್ಲ ನೋಡಿ....ದಿನವೂ ಓದುವ ಹವ್ಯಾಸ ಇಟ್ಟುಕೊಂಡಿರುವುದರಿಂದ ತುಂಬ ಅನುಕೂಲವಾಗಿದೆ."

ಜಾನಕಿ ಒಳಗಡೆಯಿಂದ ಹಾಲು-ಹಣ್ಣುಗಳನ್ನು ತಂದು ಮುಂದಿಟ್ಟು ಆತಿಥ್ಯ ನೀಡಿದಳು.

"ಈ ಹೊತ್ತಿನಲ್ಲಿ ವೃಥಾ ತೊಂದರೆ ತೆಗೆದುಕೊಂಡಿರಿ" ಔಪಚಾರಿಕ

ವಾಗಿ ನುಡಿದ ರಾಮಕೃಷ್ಣರಾಯ.

"ಪರವಾಯಿಲ್ಲ. ತೆಗೆದುಕೊಳ್ಳಿ."

ವೃದ್ಧ ಮಹಾಶಯ ಬಿಸಿ ಬಟ್ಟಲುಗಳಿಗೆ ಕೈಹಚ್ಚಿ ಚೊಕ್ಕವಾಗಿ ಬರಿದು ಮಾಡಿದನಂತರ ಅಂದ,

"ನನ್ನ ಮಗ–ರಾಧೇಶ್ಯಾಂ ಬಲು ಬುದ್ಧಿವಂತ. ಅವನ ಪ್ರಾಕ್ಟೀಸ್ ಬಹಳ ಚೆನ್ನಾಗಿದೆ. ಅವನನ್ನು ಅಳಿಯನನ್ನಾಗಿ ಮಾಡಿಕೊಳ್ಳಲು ಎಷ್ಟೆಷ್ಟು ಮಂದಿ ಶ್ರೀಮಂತರು ಕಾದಿದ್ದಾರೆ ಎಂದರೆ ನೀವು ಬಹುಶಃ ನಂಬಲಾರಿರೇನೋ ಅಂತಹವನ ಕಣ್ಣು ನಿಮ್ಮ ಮಗಳ ಮೇಲೆ ಬಿದ್ದಿರುವುದು ನಿಮ್ಮ ಪುಣ್ಯವಿಶೇಷ ವೆಂದೇ ಹೇಳಬಹುದು!"

"ಸದ್ಯ, ಈಗಲಾದರೂ ವಿಷಯ ಹೊರಬಿತ್ತಲ್ಲ" ಎಂದುಕೊಂಡಳು ಜಾನಕಿ. ಮನಃಪ್ರಾಣಗಳು ಆನಂದಾಮೃತದಲ್ಲಿ ನಿಮಜ್ಜಿತವಾದುವು. ಗಂಭೀರ ಗತಿಯಲ್ಲಿ ಪ್ರಸನ್ನಮುಖಿಯಾದಳು.

"ನಾನು ಮನೆ ಬಿಡುವಾಗ ನನ್ನ ಹೆಂಡತಿ "ನೀವು ತುಂಬಾ ಮಾತಾಡುತ್ತೀರಿ. ವಿಷಯವನ್ನು ಸ್ವಲ್ಪದರಲ್ಲೇ ತಿಳಿಸಿ" ಎಂದಿದ್ದಳು. ನನಗದು ಇಷ್ಟವೇ ಇಲ್ಲ ನೋಡಿ. ನಾಲ್ಕು ಮಾತಾಡಿ ಕಲ್ಲಿನಂತೆ ಕೂಡುವುದರಲ್ಲಿ ಏನು ಪ್ರಯೋಜನ? ಇದ್ದುದನ್ನೆಲ್ಲಾ ವಿವರವಾಗಿ ಹೇಳಿಕೊಂಡರೆ ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳಬಹುದು, ಅಲ್ಲವೇ?"

"ಹೌದು....!"

ಪ್ರಫುಲ್ಲ ಒಳಗಿಂದೊಳಗೇ ಮುಸಿಮುಸಿ ನಕ್ಕ.

"ನನ್ನ ಮಕ್ಕಳೂ ಅಷ್ಟೆ; ಎಲ್ಲಕ್ಕೂ ಕತ್ತರಿ ಪ್ರಯೋಗ. ಹಾಗಿರಬೇಕು....ಹೀಗಿರಬಾರದು ಎನ್ನುತಿದ್ದರೆ ಯಾರಿಗಾದರೂ ಕಿರಿಕಿರಿ ಎನ್ನಿಸೀತು!"

ಪ್ರಫುಲ್ಲ ದಿನಪತ್ರಿಕೆಯೊಂದನ್ನು ಮುಖಕ್ಕೆ ಅಡ್ಡ ಹಿಡಿದುಕೊಂಡು ತನ್ನ ಹಾವ-ಭಾವಗಳನ್ನು ಮರೆಮಾಚಿದ. ಹಾಸ್ಯಪ್ರಧಾನವಾದ ಮೋಹನ ವೇಶ ತನುಮನಗಳನ್ನು ಆವರಿಸಿತ್ತು. ಅವರ ಮಾತುಕತೆಗಳಲ್ಲಿ ಪಾಲ್ಗೊಳ್ಳದೆ ಅತ್ತಲೇ ಮನಸಿಟ್ಟು ಕುಳಿತ.

ಹೊರಜಗತ್ತಿನಲ್ಲಿ ಗಗನದ ನೀಲಿಮೆಯನ್ನು ಕಗ್ಗಪ್ಪು ಆವರಿಸಿತ್ತು.

ವೃಕ್ಷಾವಳಿಗಳ ಹಸುರು ಸುನೀಲವಾಗುತಿತ್ತು.

"ಅದರಲ್ಲೇನು ವಿಪರ್ಯಾಸವೋ ನನಗಂತೂ ಅರ್ಥವಾಗುವುದಿಲ್ಲ. ಯಾವುದೇ ವಿಚಾರವನ್ನು ವಿವರವಾಗಿ ಹೇಳಿ ಕೇಳಿದರೇನೇ ಹಿತ....ನೀವು ಏನಂತೀರಿ?"

ಸದ್ಯ, ಮುಗಿಸಿದ್ದರೆ ಸಾಕಾಗಿತ್ತು. ಹ್ಞೂ ಎಂದರೂ ಕಷ್ಟ; ಇಲ್ಲ ಎಂದರೂ ಕಷ್ಟ...ಆದರೂ ಸಹ ಸಮಂಜಸವಾಗಿ ಎಂಬಂತೆ ಉತ್ತರಿಸಿದಳು ಜಾನಕಿ "ನಿಮ್ಮದು ಬಹಳ ದೊಡ್ಡ ಮನಸ್ಸು. ಅದಕ್ಕೇಕೆ ಆಕ್ಷೇಪಣೆ?"

"ನಿಮ್ಮ ಮಗಳು ನಮ್ಮ ಬೀದಿಯಲ್ಲಿರುವ ನರಸಿಂಹಯ್ಯನ ಮನೆಗೆ ಯಾವಾಗಲೂ ಬರುತ್ತಿರುತ್ತಾಳೆ. ಅದನ್ನು ಮೊದಲಿಂದ ನೋಡಿದ ನನ್ನ ಮಗನಿಗೆ ಇವಳ ಮೇಲೆ ಮನಸ್ಸಾಗಿದೆ. ಈಚೀಚೆಗೆ ವಿಷಯವೆಲ್ಲ ತಿಳಿದುಬಂತು. ಸಂಬಂಧ ಕೂಡಿಬಂದರೆ ಆಗಬಹುದು. ನಾನು ವಿಚಾರಿಸಿಕೊಂಡು ಬರುತ್ತೇನೆ ಎಂದು ಹೊರಟೆ. ನಮ್ಮ ಹಳೆಯ ಸ್ನೇಹ ಹೀಗೊಂದು ರೀತಿಯಲ್ಲಿ ಹೆಣೆದುಕೊಳ್ಳಲಿ ಎಂಬುದೊಂದು ನನ್ನ ಆಶಯ!"

"ದೇವರಿದ್ದಾನೆ!"

"ಅವನ ಮೇಲೆ ಭಾರ ಹಾಕಿಯೇ ನಾನು ಬಂದದ್ದು!"

ಅನಂತರ ಆ ವ್ಯವಹಾರಿಕವಾಗಿ ವೃದ್ಧಮಹಾಶಯ ಏನೂ ಮಾತಾಡಲಿಲ್ಲ. ಹಳೆಯ ವಿಚಾರಗಳನ್ನು ಇನ್ನೂ ಸವಿಸ್ತಾರವಾಗಿ ಹೇಳಿ ಎಲ್ಲರಿಗೂ 'ಸಾಕು' ಎನಿಸುವಷ್ಟು ಬೇಸರ ಹಿಡಿಸಿ ಕತ್ತಲು ಕವಿದ ಮೇಲೆ ಮನೆಯ ಕಡೆ ಹೊರಟ. ಪ್ರಫುಲ್ಲ ಹೆದ್ದಾರಿಯವರೆಗೂ ಹೋಗಿ ಕಳುಹಿಸಿ ಬಂದು ವಿಮಲೆಯನ್ನು ಕುರಿತು ಹಾಸ್ಯಭರಿತವಾಗಿ ಕಿಲಕಿಲ ನಗುತ್ತ ಅಂದ,

"ಒಳ್ಳೆ ನಿನ್ನ ಮಾವಯ್ಯ! ನಮಗೆಲ್ಲ ಸದಾ ತಲೆನೋವು ಇನ್ನು!"

"ಇಷ್ಟಕ್ಕೂ ನೀನು ಇಲ್ಲಿ ಇರುವುದೇ ಇಲ್ಲವಲ್ಲಾ?" ಹುಬ್ಬೇರಿಸಿದಳು ವಿಮಲ.

"ನಿಜ; ನಿಜ. ನಾನು ಆದಷ್ಟು ಬೇಗನೆ ಬೊಂಬಾಯಿಗೆ ಹೋಗುವುದು ಲೇಸು!"

ಎಲ್ಲರ ಮುಖದಲ್ಲೂ ನಗುವಿನ ಲಹರಿ ಉಕ್ಕಿಹರಿಯಿತು.

ಅನಂತರ ನಾಲ್ಕಾರು ವಾರಗಳವರೆಗೆ ಅವರಿಂದ ಮತ್ತಾವ ಸೂಚನೆಯೂ

ಬರಲಿಲ್ಲವಾದುದರಿಂದ ಮನಸ್ಸಿಗೆ ಕಿರಿಕಿರಿ-ಕಾತರ. ಪ್ರತಿಸಲ ಟಪ್ಪಾಲಿನವನು ಬಂದಾಗ ಅವನ ಕೈಕಡೆ ಚಲಿಸಿದ ನೋಟ ನಿರಾಸೆಯಿಂದ ಹಿಮ್ಮರಳುವುದು. ಬಾಗಿಲ ಬಳಿ ತಟ್ಟನೆ ಪಾದ ಸಪ್ಪಳ ಕೇಳಿಸಿದಾಗ ಕಿವಿಗಳು ನಿಮಿರಿ, ಕುತೂಹಲ ತೃಷಿತ ದೃಷ್ಟಿ ಅತ್ತ ಹೊರಳಿ ನಿರಾಸೆಗೊಳ್ಳುವುದು. ಭವ್ಯ ಭವಿತವ್ಯದ ಗಾಳಿಗೋಪುರದಂತೆ ಕಂಗೊಳಿಸುವುದು. ಅನಿರೀಕ್ಷಿತವಾಗಿ, ಅನಾವಶ್ಯಕವಾಗಿ ಆ ಮುದುಕಪ್ಪ ಇಲ್ಲದ ವಿಚಾರವನ್ನು ಹರಡಿ ಹೋದರೇ ? ಎಂಬ ಖೇದ ಮನವನ್ನು ಮುತ್ತಿ ಕೀಟದಂತೆ ಕಾಡುವುದು. ಎಷ್ಟೇ ಪ್ರಯತ್ನಿಸಿದರೂ ವಿಷಯವನ್ನು ಮನಸ್ಸಿನಿಂದ ಸುಲಭವಾಗಿ ತಳ್ಳಿಬಿಡುವುದೂ ಸಾಧ್ಯವಾಗುತ್ತಿಲ್ಲ.

ವಿಮಲ ಗೆಳತಿಯ ಮನೆಯ ಕಡೆ ಅನಂತರ ಹೋಗಿರಲಿಲ್ಲ. ಮುಖಬಿಂಬದಲ್ಲಿ ಹೊಳೆಯುವ ಅಪೂರ್ವ ಮಾಧುರ್ಯ ರಾಗಭಾವದ ತೀವ್ರ ಸುಳಿಯಲ್ಲಿ ಸಿಕ್ಕಿ, ಭಾವವಿಭಾವಗಳಲ್ಲಿ ತೊಳಲಿ ಅಧರೋಷ್ಟಗಳಲ್ಲಿ ಮಿನುಗುತಿದ್ದ ನಗುವಿನ ಸವಿಗೆ ಗ್ರಹಣ ಹಿಡಿಸಿತು. ತಂಗಿಯ ಗಂಭೀರ ಮುಖಶ್ರೀಯನ್ನು ದಿಟ್ಟಿಸುತ್ತ ನಿರ್ಮಲ ತನ್ನ ಅಭಿಪ್ರಾಯವನ್ನು ಹೊರ ಹಾಕಿದಳು,

"ಸಂಜೆಯಾಗುವುದರೊಳಗಾಗಿ ಯಾವುದಾದರೂ ಸುಭದ್ರ ಆಶ್ರಯವನ್ನು ಪಡೆಯಬೇಕೆಂಬುದು ಪ್ರಮಾಣಬದ್ಧ....ಅದು ಹೊಸದೇನೂ ಅಲ್ಲ; ಅಂತಹ ಕ್ಲಿಷ್ಟವೂ ಅಲ್ಲ. ಅದಕ್ಕೇಕೆ ಅಷ್ಟೊಂದು ಚಿಂತೆ? ಬಾಳು-ಬದುಕು ಪ್ರಫುಲ್ಲೋದ್ಯಾನದಂತೆ ಸುಂದರವಾಗಿರಲಿ ಎಂದು ಆಶಿಸುವುದು ಸ್ತ್ರೀ ಜಾತಿಯ ಸ್ವಭಾವ. ಇಷ್ಟಕ್ಕೂ ನೀನಾತನನ್ನು ನೋಡಿಯೂ ಇಲ್ಲ-ಕಾಮಿಸಿಯೂ ಇಲ್ಲ. ಮತ್ತೇಕೆ ಅದರ ಗೊಡವೆ?"

ಅವಳ ಮಾತು ಕೇಳಿ ಸ್ವಲ್ಪ ಹೊತ್ತು ಆಲೋಚನೆಯ ಸುಳಿಯಲ್ಲಿ ಸಿಕ್ಕಿ ಸುಮ್ಮನಿದ್ದು ಅನಂತರ ಹೇಳಿದಳು,

"ನಾನು ಸುಖವಾಗಿದ್ದೆ. ಆ ಮುದುಕಪ್ಪ ಬಂದು ಬಿರುಗಾಳಿ ಬೀಸಿ... ವಿನಾಕಾರಣ ಯೋಚಿಸಿ ತಲೆಕೆಡಿಸಿಕೊಳ್ಳಲು ಒಂದು ದಾರಿ ಮಾಡಿಟ್ಟು ಹೋದರು. ನೀನೆಂದಂತೆ ಜೀವನಕ್ಕೆ ಇದೇನು ಹೊಸದಲ್ಲವಾದರೂ ವಿಚಿತ್ರವಾಗಿದೆ."

"ನೋಡೋಣ, ಇಂದಿಗೇ ಕಾಲ ಮುಗಿದು ಹೋಗಲಿಲ್ಲವಲ್ಲಾ ? ಏಕೆ

ಅಷ್ಟು ಆತುರ ?"

"ಅಂದು ಅಪರಿಚಿತರಿಗೆ ಸರ್ವಭಾರವನ್ನು ಹೊರಿಸಲು ಸ್ವಲ್ಪವೂ ಅಂಜಲಿಲ್ಲ; ಸಂಕೋಚಿಸಲಿಲ್ಲ. ಆದರೆ ಇಂದಿನ ವಿಶೇಷವೆಂದರೆ ಏಕಾಂತರೂಪವನ್ನು ಹೊಂದಿದ ಆ ಯೋಜನೆಯ ಭಾರ ಭರಿಸುವುದೇ ಕಷ್ಟ. ಅಂದಿನ ಅನಿರೀಕ್ಷಿತ ಅನುಭವ ಇಂದಿನ ಯೋಜನೆಯ ಭಾರಕ್ಕಿಂತ ತೀರ ಭಿನ್ನವಾದುದು. ನಿನ್ನಂತೆ ಈ ಜೀವನಾರಣ್ಯದ ನಿರಾಶಾ ನಿಶೆಯಲ್ಲಿ ಒಂಟಿಯಾಗಿ ಅಲೆಯುವ ಧೈರ್ಯ ಸಾಹಸ ನನ್ನಲ್ಲಿಲ್ಲ."

"ಆಗಲಿ, ಒಂಟಿಯಾಗಿ ಅಲೆಯಬೇಕು ಎಂದೇನೂ ಇಲ್ಲವಲ್ಲ."

ವಿಮಲ ಮಾತಾಡಲಿಲ್ಲ. ಕಿಟಕಿಯಲ್ಲಿ ಮೊಗವಿಟ್ಟು ದೂರದಿಗಂತದಲ್ಲಿ ಹರಿದಾಡುವ ಮೇಘಮಾಲೆಯ ಛಿದ್ರೀಕೃತ ಚಿತ್ತಾರವನ್ನು ನೋಡುತ್ತ ನಿಂತುಬಿಟ್ಟಳು. ತಲೆಯಲ್ಲಿ ಕ್ರಮವಿಹೀನ ಆಲೋಚನಾತರಂಗಗಳು ಅಲೆಯಲೆಯಾಗಿ ಏಳುತಿದ್ದುವು. ಬೇಲಿ ಸಾಲಿನಲ್ಲಿದ್ದ ಮುಳ್ಳು ಕಂಟೆಯೊಂದು ಎಲೆಪುಷ್ಪರಹಿತವಾಗಿ ಜೀವಚ್ಛವದಂತೆ ನಿಂತು ತನಗೆ ಸಹಾನುಭೂತಿ ತೋರುವಂತೆ ಮೆಲ್ಲ ಮೆಲ್ಲನೆ ತಲೆದೂಗುತಿತ್ತು. ಭಾರವಾದ ಹೃದಯವನ್ನು ಹೊರಲಾರದೆ ಹೊತ್ತು ನಿಂತಳು.

ಸಂಧ್ಯಾ ಸೂರ್ಯನ ಸೌವರ್ಣಕಾಂತಿಯಲ್ಲಿ ನೀಲಾಕಾಶ ವರ್ಣರಂಜಿತವಾಗಿತ್ತು. ಮನಮೋಹನೀಯ ಶೋಭಾ ವೈಖರಿಯಲ್ಲಿ ನಿತ್ಯನೂತನ ಸೇವಾ ಸೌಜನ್ಯವುಳ್ಳ ವಿರಾಗಿಣಿಯಂತೆ ಕಾಣಿಸುವ ಆ ನೀಲ ನೀಲಸಾಗರಿ ಮನಸ್ಸಿನ ಚಿಂತಾಭಾರಕ್ಕೆ ಕೊಕ್ಕೆಯನ್ನು ಹಾಕಿದ್ದಳೇನೋ....ಒಂದೆರಡು ಘಳಿಗೆ ಚಿತ್ತಪ್ರವೃತ್ತಿ ಅಲ್ಲೇ ನಿಯುಕ್ತವಾಗಿತ್ತು.

ನಿರ್ಮಲ ಸ್ವಲ್ಪ ಹೊತ್ತು ಅದೇ ವಿಚಾರವಾಹಿನಿಯಲ್ಲಿ ಮುಳುಗಿದ್ದು, ಅನಂತರ ತರ್ಕಬದ್ಧವಾಗಿ ಹೇಳಿದಳು,

"ಮನುಷ್ಯನ ತಲೆಯಲ್ಲಿ ತುಂಬಿದ ಅಸ್ಥಿರವಾದ ವಿಚಾರಗಳ ಜಾಲದಲ್ಲಿ ಕೆಲವು ಸ್ಥಿರವಾದ ಜಾಗೃತ ಸತ್ಯಗಳು ಇಲ್ಲದೇ ಹೋಗಿದ್ದರೆ ಅಮಿತವಾದ ಅನರ್ಥಗಳಿಗೆ ಕಾರಣವಾಗಿ ವಿಶ್ವಜೀವನ ಇನ್ನಾವ ರೂಪ ತಳೆಯುತಿತ್ತೋ.... ಏನೋ, ಅದು ಊಹಾತೀತ !"

"ಹಾಗಾದರೆ....?" ಏನೋ ಒಂದು ರೀತಿಯಲ್ಲಿ ಸಂದೇಹಿಸುತ್ತ ಅಷ್ಟಕ್ಕೆ

ಸುಮ್ಮನಾದಳು ವಿಮಲ.

"ಯುಗ ಯುಗಾಂತರಗಳಿಂದ ಜನನಾರ್ಥಿ ಸುಮ್ಮನೆ ಹರಿದು ಬಂದಿದೆಯೇ? ನರನಾರಿಯರ ಮೋಹ ಚರಿತ್ರೆಯೇ ಜೀವನ ವಿಕಾಸಕ್ಕೆ ಬುನಾದಿ; ಸಂಸ್ಕೃತಿಯ ಮಾಧುರ್ಯವೇ ಸಚ್ಚರಿತ್ರೆಗೆ ನಾಂದಿ....ಯಾವ ವಿಷಯವೇ ಆಗಲಿ ಅಂತರ್ಯದ ತಿರುಳನ್ನು ಅರಿತುಕೊಳ್ಳುವ ಮೊದಲು ಗ್ಲಾನಿಯುಂಟಾಗುವುದು ಸಹಜ. ವಿಷಯ ನಿಜವಾಗಿಯೂ ವಾಸ್ತವತೆಯನ್ನು ತಲುಪಿದಾಗ ಪ್ರಬಲವಾದ ಸಾಮಾಜಿಕ ರೂಪುರೇಷೆಯ ಆತ್ಯಂತಿಕ ಸೌಂದರ್ಯವನ್ನು ನಾವು ಆತ್ಮೀಯತೆಯಿಂದ ಸ್ವಾಗತಿಸುತ್ತೇವೆ. ಆದ್ದರಿಂದ ಬುದ್ಧಿವಂತಿಕೆಯಿಂದಲೂ ಶಾಂತಿಯಿಂದಲೂ ಸಾಮಾಜಿಕ ಗಂಭೀರ ವಿಧಾನವನ್ನು ಅರಗಿಸಿಕೊಳ್ಳುವುದರಲ್ಲೇ ಔನ್ನತ್ಯವಿದೆ."

ವಿಮಲ ಮಾತಾಡಲಿಲ್ಲ. ಅಂತರಂಗ ಕೂಗಿ ಹೇಳಿತು ...ನಾನು ದುಃಖಿಸುತ್ತಿಲ್ಲ. ಯಾರ ಹೃದಯದಲ್ಲಿ ನನ್ನನ್ನು ಸಮರ್ಪಿಸಿಕೊಳ್ಳಬಯಸಿದೆನೋ ಆ ವ್ಯಕ್ತಿಯ ಮೌಲ್ಯವನ್ನು ಮೊದಲೇ ಅರಿತುಕೊಳ್ಳದೆ ಹೋದುದು ಮೂರ್ಖತನ..!

"ನಿನ್ನ ಗೆಳತಿ-ಹೇಮಾಂಗಿನಿ ಬೆಂಗಳೂರಿಗೆ ವಾಪಾಸ್ ಬರುವುದೆಂದು?"

"ಅವಳು ಬಂದಿದ್ದರೆ ವಿಚಾರ ವಿನಿಮಯ ನಡೆಸುವುದು ಸುಲಭವಾಗುತಿತ್ತು. ಈಗ ಅವಳಿಲ್ಲವಾದುದರಿಂದಲೇ ತೊಂದರೆ....ಬರುವುದು ಇನ್ನೂ ಒಂದೆರಡುವಾರವಾದರೂ ಆಗಬಹುದೇನೋ...."

"ವಿಮಲಾ, ಜೀವನದಲ್ಲಿ ಹೆಜ್ಜೆಗೆ ಇಂತಹ ಪ್ರಸಂಗಗಳು ಅದೆಷ್ಟು ಬಾರಿ ಬರುತ್ತವೆಯೋ ದೇವರಿಗೇ ಗೊತ್ತು. ಇನ್ನೆಷ್ಟು ಬಾರಿ ಕಣ್ಣೀರು ಸುರಿಸಬೇಕೋ. ಇದೆಲ್ಲಾ ಒಮ್ಮೆಗೇ ಮುಗಿಯುವ ವಿಷಯವೆ? ಒಂದಕ್ಕೊಂದು ಸಾಮರಸ್ಯ ಮೂಡಿಬರಬೇಕಾದರೆ ಯಾವ ಜನ್ಮದ ಪ್ರತಿಫಲ ಉದಾರೂಢವಾಗಬೇಕೋ . ಈಗಲೇ ಮನಸ್ಸಿಗೆ ಹಚ್ಚಿಕೊಂಡು ಚಿಂತಿಸುವುದರಿಂದ ಪ್ರಯೋಜನವೇನೂ ಆಗಲಾರದು. ನೋಡೋಣ, ಆತುರ-ಆತಂಕ-ಆಲೋಚನೆ ಎಲ್ಲಾ ಈಗಲೇ ಏಕೆ? ಏನೇ ಇರಲಿ. ನಿನ್ನ ಜೀವನದಲ್ಲಿ ಯಾವ ಕಹಿ ಪ್ರಸಂಗವೂ ಬಾರದಿರಲಿ ಎಂದು ಹಾರೈಸುವೆ." ಎಂದಳು ವಿಮಲ. ನುಡಿ ಎದೆಯಾಳದಿಂದ ಹರಿದು ಬಂದಾಗ

ಮುಖಮಂಡಲದಲ್ಲಿ ಪ್ರಶಾಂತಭಾವ ನೆಲೆಸಿತ್ತು.

"ಆದರೆ ಒಂದು ಮಾತು...."

"ಏನು ಹೇಳು, ವಿಮಲೂ."

"ನಾವು ಬಯಸುವುದೊಂದಾದರೆ ಆಗುವುದೊಂದು. ನಮ್ಮ ಹಣೆಯಲ್ಲಿ ಏನು ಬರೆದಿದೆಯೋ ಅದು ಆಗಿಯೇ ತೀರುತ್ತದೆ. ಅಂತಲೇ ನಾನು ಅತೀತ ಯುಗಧರ್ಮವನ್ನರಿತರೂ ನಾನೇ ನಾನಾಗಿ ಈ ವಿಚಾರದಲ್ಲಿ ಹೆಜ್ಜೆಯನ್ನು ಮುಂದಿಡಲಾರೆ. Arranged marriage-ನಲ್ಲಿ ನನಗೆ ಹೆಚ್ಚಿನ ಶ್ರದ್ಧಾ ಭಕ್ತಿ ಇದೆ."

"ಅದು ಒಳ್ಳೆಯದು."

ನಿರ್ಮಲ ಮನಃಪೂರ್ವಕವಾಗಿ ಅನುಮೋದಿಸಿದರೂ ತನ್ನಂತರಂಗ ವನ್ನೇ ಪರೀಕ್ಷಿಸಿಕೊಂಡಂತೆ ಒಂದೆರಡು ಕ್ಷಣ ಪುಳಕಿತಳಾದಳೇನೋ....ಮರು ಕ್ಷಣದಲ್ಲಿ ಅವಾಸ್ತವಿಕತೆಯೊಡನೆ ಸಂಧಿಮಾಡಿಕೊಂಡು ಜೀವನದ ಮೌಲ್ಯ ವನ್ನೇ ನಷ್ಟಪಡಿಸಿಕೊಳ್ಳುತ್ತಿರುವೆನಲ್ಲಾ ಎನಿಸದಿರಲಿಲ್ಲ. ಸ್ವಲ್ಪ ಹೊತ್ತು ತನ್ನಲ್ಲಿ ತಾನೇ ಚಿಂತಿಸಿ, ವಿಚಾರ ತರಂಗಗಳನ್ನು ಅಲ್ಲಿಂದಲ್ಲೇ ಹತ್ತಿಕ್ಕಿ ತನ್ನ ಅಭಿಪ್ರಾಯವನ್ನು ಹೊರಹಾಕಿದಳು "ಮಾನವ ಸಮಾಜಬದ್ಧವಾದ ಎಲ್ಲಾ ಸೂತ್ರಸಾರಗಳೂ ಸಂಸ್ಕೃತವಾಗಿಲ್ಲ. ಅಂದಮೇಲೆ ಆಚರಣೆಯಲ್ಲಿ ಹಿತ-ಮಿತ ಗಳನ್ನು ಅರಿತುಕೊಳ್ಳುವುದು ಲೇಸು."

"ಅದು ನನಗೂ ಗೊತ್ತು. ಆದರೂ...."

ನಿರ್ಮಲ ನಡುವೆ ಬಾಯಿ ಹಾಕಿದಳು "ಬದುಕಿನ ಸಾರವನ್ನು ಅರಿತ ವರಿಗೆ ಹೇಳುವಂತಾದ್ದು ಏನೂ ಇಲ್ಲ. ಆದರೂ ನಾವು ಎಲ್ಲದರಲ್ಲೂ ಬದ್ಧರಾಗ ಬೇಕೆಂಬುದೇನೂ ಇಲ್ಲ ಅಲ್ಲವೆ ?"

"ನಿಜ ಆ ದಿಟ್ಟತನವೊಂದಿದ್ದರೆ ಸಾಕು....ಅದರಿಂದ ಎಲ್ಲವೂ ಸುಲಲಿತ ವಾದೀತು. ಆದರೂ ಕೆಲವೊಮ್ಮೆ ಭಯ....ರಾತ್ರಿ ಕಂಡ ಬಾವಿಗೆ ಹಗಲು ಹಾರಬಾರದು ಎಂಬ ಚಿಂತೆ."

ಮುಗುಳು ನಕ್ಕಳು ನಿರ್ಮಲ.

"ನನಗೆ ಇಷ್ಟು ದಿನ ಯಾವ ಚಿಂತೆಯೂ ಇರಲಿಲ್ಲ. ಜೀವನ ವಿಕಾಸ ಕ್ಕಾಗಿ ಮದುವೆಯಾಗಲೇಬೇಕು ಎಂಬುದು ಸರಿಯೆ. ಆದರೆ ಅದನ್ನು ಅರ್ಥ

ಮಾಡಿಕೊಳ್ಳುವುದರೊಳಗಾಗಿ-ಅದರ ಸ್ವರೂಪವನ್ನು ಕಂಡುಕೊಳ್ಳುವುದರೊಳಗಾಗಿ ಆ ವಿಚಾರ ಮನಸ್ಸಿನಮೇಲೆ ಮೂಡಿತು ಎಂದರೆ ಏನೋ ಒಂದು ರೀತಿಯ ಭಯ." ಎಂದರೂ ಅವಳ ತುಟಿಗಳಲ್ಲಿ ಸರಳವೂ ಸ್ವಚ್ಛವೂ ಆದ ಅಮಾಯಕ ನಗು ಮೂಡಿತು.

ಅದೇ ವೇಳೆಗೆ ಅಲ್ಲಿ ಹಠಾತ್ತಾಗಿ ಪ್ರತ್ಯಕ್ಷನಾದ ಪ್ರಸನ್ನ ಆನಂದಭರಿತ ವಾಣಿಯಲ್ಲಿ ಬಿತ್ತರಿಸಿದ,

"ನಿನ್ನೆ ರಾಧೇಶ್ಯಾಂ ಸಿಕ್ಕಿದ್ದ! ನನ್ನೊಂದಿಗೆ ಬಹಳ ಹೊತ್ತು ಕಳೆದ. ಹುಡುಗ ತುಂಬ ನಾಜೂಕಾಗಿದ್ದಾನೆ. ಲಗ್ನಫಲ ಕೂಡಿ ಬಂದರೆ ವಿಮಲ ನಿಜವಾಗಿಯೂ ಪುಣ್ಯವಂತೆ!"

ಆ ಮಾತು ಕೇಳಿ ಮನಃಪ್ರಾಣಗಳು ಮುಗಿಲೆತ್ತರಕ್ಕೆ ಒಮ್ಮೆಲೇ ಚಿಮ್ಮಿದುವು.

೧೮

... ಪೂರ್ವದಿಗ್ದೇಶದ ರಂಗಮಂಚದಮೇಲೆ ಉದಿತೋದಿತ ಸುಂದರ ಪ್ರಾತಃಸೂರ್ಯ ನಳನಳಿಸುತ್ತಿದ್ದ.

... ಸ್ವರ್ಣಧಾರೆಯಲ್ಲಿ ಮಿಂದು ಪುನೀತವಾದ ಜಗತ್ತು ಸಂಭ್ರಮದಿಂದ ವಿಜೃಂಭಿಸುತಿತ್ತು.

ಅಪರಾಜಿತಾ ಪುಷ್ಪಗಳ ದಳಗಳು ಅರಳಿದ್ದುವು. ಅರೆಬಿರಿದ ಗುಲಾಬಿ ಮೊಗ್ಗುಗಳು ಕಂಡುಬರುತಿದ್ದುವು; ಪುಷ್ಪರಹಿತವಾದ ಸೇವಂತಿಗೆ ಗಿಡಗಳು ಹಸುರು ಕಕ್ಕುತ್ತಿದ್ದುವು. ನಿರ್ಮಲ ಪ್ರಾಕಾರದ ಬಾಗಿಲನ್ನು ತೆರೆದು ಒಳ ಹೋದಾಗಲೇ ದೃಷ್ಟಿಯನ್ನು ಪುಷ್ಪರಾಜಿಯ ಮೇಲೆ ಹರಿಸಿದಳು. ಆನಂದವನ್ನೂ ಆನಂದಿತಗೊಳಿಸುವಂತಹ ಆ ಸುಂದರ ಹೂದೋಟ ಮನಃಪ್ರಾಣಗಳನ್ನು ಉತ್ಸುಕಗೊಳಿಸಿದುವು. ಎವೆಯಿಕ್ಕದೆ ನೋಡುತ್ತಾ ತರಗತಿಯ ಕಡೆ ಹೋದಾಗ ಪಾಠಕ್ಕೆ ಬರಬೇಕಾದ ಮಕ್ಕಳಿನ್ನೂ ಬಂದಿರಲಿಲ್ಲ. ವರಾಂಡದ ಮೆಟ್ಟಲಿನ ಬಳಿ ತನ್ನ ಸಹಪಾಠಿಯೊಡನೆ ಒಡಲ ದುಃಖವನ್ನು ತೋಡಿಕೊಂಡಿದ್ದ ಕಮಲ ದೃಷ್ಟಿಗೆ ಬಿದ್ದಳು.

"ಏನಾಯಿತು ಕಮಲೂ? ಏಕೆ ಅಳುತಿದ್ದಿ?"

ಅವಳು ಉಕ್ಕಿಬಂದ ದುಃಖದಿಂದ ಉತ್ತರಿಸಲಾಗದೆ ಮುಸುಮುಸು ಅಳಹತ್ತಿದಳು. ಕಣ್ಣುಗಳಲ್ಲಿ ಕಂಬನಿ ಧಾರಾಕಾರವಾಗಿ ಇಳಿಯುತಿತ್ತು. ಸ್ವಲ್ಪ ಹೊತ್ತಿನನಂತರ ಕಂಬನಿಯನ್ನು ತೀಡಿಕೊಂಡು ನುಡಿದಳು "ನನಗೀಜೀವನ ಸಾಕಾಗಿಬಿಟ್ಟದೆ."

"ಏನು ವಿಷಯ ಹೇಳಬಾರದೇ?"

"........"

"ಅವಳ ಗಂಡ ಕುಡುಕೊಂಡು ಹೊಡೆಯೋದು ಬಡಿಯೋದು ಮಾಡುತ್ತಾನ್ರವ್ವ! ಅವಳು ಅಷ್ಟು ದುಡಿದರೂ ನೆಮ್ಮದಿಯಿಂದ ಗಂಜಿ ಕುಡಿಯುವಂತಿಲ್ಲ." ಎಂದಳು ಲಿಂಗವ್ವ; ದನಿ ಅತ್ಯಂತ ಮರುಕದಿಂದ ಕೂಡಿತ್ತು.

"ಅವನನ್ನು ಎಷ್ಟುಬಾರಿ ಕೇಳಲಿಲ್ಲ? ಈಗ ಕುಡಿಯುವ್ರದಿಲ್ಲ ಎಂದೇ ಹೇಳುತ್ತಾನೆ."

"ಹೇಳುವುದಕ್ಕೇನು? ದುಡಿದಿದ್ದೆಲ್ಲಾ ಕುಡಿಯುವುದಕ್ಕೆ ಸರಿ. ಮೇಲಾಗಿ ಹೆಂಡತಿ–ಮಕ್ಕಳಿಗೆ ಹೊಡೆತ ಬಡಿತ."

ಅವರೆಲ್ಲಾ ಅಲ್ಲಿಯ ಪರಿಚಾರಕರೇ ಅವನ ದುಶ್ಚಟವನ್ನು ಎಲ್ಲರೂ ಬಲ್ಲರು. ಅಂತಲೇ ಅವನಿಗೆ ಅನೇಕವೇಳೆ 'ಛೀಮಾರಿ' ಹಾಕಿಯೂ ಆಗಿತ್ತು. ಕೆಲಸ ಬಿಡಿಸಿದರೆ ಹೊಟ್ಟೆಗಿಲ್ಲದೆ ಸಾಯುವ ಪ್ರಸಂಗ ಬರುತ್ತದೆ. ಆದರಿಂದಾಗಿ ಇದುವರೆಗೆ ಮೌನವಿನಯದ ಪ್ರಸಾದ ಲಭಿಸಿತ್ತು. ಕೇಳಿದಾಗಲೆಲ್ಲ ಕುಡಿಯುವುದನ್ನು ಬಿಟ್ಟಿರುವುದಾಗಿ ಹೇಳುತ್ತಲೇ ಬಂದಿದ್ದ. ಆದರೂ ಅವನು ಬಿಟ್ಟಿಲ್ಲವೆಂಬುದು ಎಲ್ಲರಿಗೂ ಮನವರಿಕೆಯಾಗಿತ್ತು. ಅವಳ ದುಃಖವನ್ನು ನೋಡಿ ಕಾರುಣ್ಯಪೂರ್ಣ ಧ್ವನಿಯಲ್ಲಿ ಪ್ರಶ್ನಿಸಿದಳು ನಿರ್ಮಲ,

"ಏನು ಹೇಳು, ಕಮಲೂ?"

"ದಿನವೂ ಇದ್ದದ್ದೆ. ಹೊಡೆತ ತಿಂದೂತಿಂದೂ ನನಗಂತೂ ಸಾಕಾಗಿಬಿಟ್ಟದೆ. ಇನ್ನು ನನ್ನಿಂದ ಸಾಧ್ಯವಿಲ್ಲ. ಮಕ್ಕಳನ್ನು ಬಾವಿಗೆ ಹಾಕಿ ನಾನೂ ಬಿದ್ದು ಸಾಯುವೆ!" ಎನ್ನುತ್ತ ದುಃಖಾತಿರೇಕವನ್ನು ತಡೆಯಲಾಗದೆ ಬಿಕ್ಕಿಬಿಕ್ಕಿ ಅಳತೊಡಗಿದಳು. ಕಣ್ಣುಗಳಲ್ಲಿ ಕಂಬನಿಗಳು ಚಿಲುಮೆಯಂತೆ ಹರಿದುವು. ಅಸ್ತವ್ಯಸ್ತ ಉಡುಪು, ಬಾಚದ ಕೂದಲು, ಉಕ್ಕಿ ಬರುವ ದುಃಖ,

ತಾಯ್ತನದ ಹೊಣೆ ಒಂದೊಂದೂ ಸ್ತ್ರೀಜೀವನದ ದುಃಖಾಂತ ಚಿತ್ತಾರವನ್ನು ಕರುಳು ಹರಿಯುವಂತೆ ಪ್ರದರ್ಶಿಸಿದುವು. ಪ್ರಥಮ ನೋಟಕ್ಕೆ ನಿರ್ಮಲೆಯ ಮನಸ್ಸು ಬಿಸಿಲಟ್ಟಿದ ಮಂಜಿನಂತಾಯಿತು. ರುದ್ಧಕಂಠದಿಂದ ಪ್ರಶ್ನಿಸಿದಳು,

"ಅವನಿಲ್ಲಿಗೆ ಬಂದಿದ್ದಾನೆಯೇ ?"

"ಬೆಳಿಗ್ಗೆ ಹೊರಹೋದವನು ನಾನು ಮನೆ ಬಿಡುವವರೆಗೂ ಬಂದಿರಲಿಲ್ಲ....ಇಲ್ಲಿಗೆ ಬಂದಿದ್ದಾನೋ ಇಲ್ಲವೋ ನನಗೆ ತಿಳಿಯದು."

"ಕುಡಿಯದಿರುವಾಗ ಸರಿಯಾಗಿರುತ್ತಾನೆಯೆ ?" ಅತ್ಯಂತ ನೈರಾಶ್ಯಪೂರ್ಣ ದನಿಯಲ್ಲಿ ಪ್ರಶ್ನಿಸಿದಳು ನಿರ್ಮಲ.

"ಸದಾ ಒಂದೇ ರೀತಿ....ಕೈಯಲ್ಲಿ ಕಾಸು ಉಳಿಸುವುದಿಲ್ಲ. ಮಡಿಕೆಯೊಳಗೆ, ಎಲ್ಲಿ ಕದ್ದಿಟ್ಟರೂ ಬಿಡುವುದಿಲ್ಲ. ಮಕ್ಕಳಿಗೆ ಗಂಜಿ ಇದ್ದರೆ ಇತ್ತು; ಇಲ್ಲದಿದ್ದರೆ ಇಲ್ಲ. ಈ ಗೋಳು ದೇವರಿಗೇ ಗೊತ್ತು."

ಸಮಸ್ಯೆ ಗುಂಗೀಹುಳದಂತೆ ಮನವನ್ನು ಕೊರೆಯುತಿತ್ತು. ಚಿಂತಾಭಾರದಿಂದ ಶರೀರ ಪ್ರಕೃತಿ ಜಡವಾದಂತೆ ತೋರಿತು. ನಿರ್ಮಲ ತನ್ನಲ್ಲೇ 'ಪಾಪ' ಎಂದುಕೊಂಡಳು.

ಅದೇ ಸಮಯಕ್ಕೆ ಡಾ॥ ಹಿಲ್ಡಾ ಆಗಮಿಸಿದಳು. ಅಲ್ಲಿ ಪ್ರತ್ಯಕ್ಷವಾಗಿದ್ದ ದುಃಖಭರಿತ ಚಿತ್ರ ವಿಷಯವನ್ನು ಅನಾಯಾಸವಾಗಿ ಕಿವಿಗೆ ಮುಟ್ಟಿಸಿತು. ಒಡನೆ ಅಸಮಾಧಾನದಿಂದ ಮುಖ ಕೆಂಪುಕೆಂಪಾಯಿತು. ಅಲ್ಲಿನ ಮಾಲಿಯಾದ ಲಿಂಗಯ್ಯನಿಗೆ ಅವನನ್ನು ಕರೆತರಲು ಹೇಳಿ, ಕಮಲೆಯನ್ನು ಪ್ರಶ್ನಿಸಿದಳು.

"ರಾಮಯ್ಯ ದಿನವೂ ಕುಡಿಯುತ್ತಾನೆಯೇ ?"

"ಹೌದು....ತಾಯಿ !"

"ಇಬ್ಬರೂ ದುಡಿಯುತಿದ್ದೀರಿ. ಖರ್ಚುವೆಚ್ಚಗಳನ್ನು ಸರಿಯಾದ ರೀತಿಯಲ್ಲಿ ಹೊಂದಿಸಿಕೊಂಡು ಉಳಿತಾಯ ಮಾಡಿಕೊಂಡಲ್ಲಿ ಎಷ್ಟು ಒಳ್ಳೆಯದು ...ಅಷ್ಟು ತಿಳಿದುಕೊಳ್ಳದಿದ್ದರೆ ಕಷ್ಟ."

ಎಷ್ಟಿದ್ದರೂ ಕುಡಿಯುವುದಕ್ಕೇ ಸಾಲದು, ಏನು ಮಾಡಲಿ?" ಬಿಕಿದಳು ಕಮಲ.

ಆ ಕರುಣಾಯಿತ ಚಿತ್ತಾರ ಎಲ್ಲರಿಗೂ ಅಸಮಾಧಾನದ ಕಹಿಯನ್ನೂಡಿಸಿತು.

ಇಂಥ ನತದೃಷ್ಟ ಮಂದಿಯನ್ನು ಆಕರ್ಷಿಸುವ ಆ ಸರಾಯಿಯ ಅಂಗಡಿ ಬಹಳ ದೂರವೇನೂ ಇರಲಿಲ್ಲ. ರಾಜಮಾರ್ಗದ ಮಗ್ಗುಲಲ್ಲೇ ಮಿಲಿಟರಿ ಹೋಟೆಲೊಂದರ ಸುಖಾಶ್ರಯದಲ್ಲಿ ಬೆಳೆದುಕೊಂಡಿತ್ತು. ಅದಕ್ಕೆ ಬೇಕಾದ ಬಗೆಬಗೆಯ ವ್ಯಂಜನಗಳನ್ನು ಅಲ್ಲಿ ಕೊಂಡು ಇಲ್ಲಿ ಕುಡಿಯುವ ಮಂದಿ ಒಂದೆರಡು ಬಗೆಯವರೇನೂ ಅಲ್ಲ. ದೇಶಿಯರು ಭಾಗಶಃ ಇದ್ದರೆ ತಮಿಳರೂ, ತೆಲುಗರೂ, ಒರಿಯಾಗಳೂ ಕೂಡುತ್ತಾರೆ. ಚೀನಾ-ಚಿಟಗಾಂ ಸಾಹೇಬರುಗಳಿಗೂ ಕೊರತೆಯಿಲ್ಲ. ಮಾಪಿಳ್ಳೈಗಳೂ, ಅರಬ್ಬೀಗಳೂ ಸೇರಿರುತ್ತಾರೆ. ನಾನಾ ಭಾಷೆಗಳಲ್ಲಿ ಹೊಮ್ಮುವ ಮಾತುಕತೆ-ಬೈಗುಳ-ಕೂಗಾಟ ಇವುಗಳ ಶಬ್ದ ಭಂಡಾರವನ್ನು ಕಲೆ ಹಾಕಿದ್ದರೆ ಅದೆಷ್ಟು ದೊಡ್ಡ ಕೋಟಿಯಾಗುತಿತ್ತೋ....

ಇನ್ನಷ್ಟು ಹೊತ್ತಿನೊಳಗಾಗಿ ಲಿಂಗಯ್ಯನೊಡನೆ ರಾಮಯ್ಯ ಆಗಮಿಸಿದ. ಮುಖದ ಮೇಲೆ ಒಂದು ವಾರದ ಬೆಳೆ ಹುಲುಸಾಗಿ ಬೆಳೆದಿತ್ತು. ಕಣ್ಣು ಮುಖಗಳಲ್ಲಿ ಅಶ್ರದ್ಧೆಯ ಛಾಯೆ ಅಚ್ಚೊತ್ತಿತ್ತು. ಮನುಷ್ಯತ್ವದ ಅಂಶ ಕಾಣಿಸುತ್ತಲೇ ಇಲ್ಲ ಎಂದರೂ ಎನ್ನಬಹುದು.

ಡಾ|| ಹಿಲ್ಡಾ ಸಿಟ್ಟಿನಿಂದ ಕೇಳಿದಳು "ನಾನು ಯಾವ ಉದ್ದೇಶದಿಂದ ನಿನಗಿಲ್ಲಿ ಕೆಲಸ ಕೊಟ್ಟೆ?"

"ನಮ್ಮ ಹಿತಕ್ಕಾಗಿಯೇ ಕೊಟ್ಟಿದ್ದೀರಿ! ಇವಳು ನಿಮ್ಮ ಬಳಿ ಸುಮ್ಮ ಸುಮ್ಮನೆ ಚಾಡಿ ಹೇಳಿದ್ದಾಳೆ. ನಾನು ಯಾವ ತಂಟೆ ತಕರಾರಿಗೂ ಹೋಗೋನೇ ಅಲ್ಲ!"

ಅನಂತರ ಅಲ್ಲಿ ಇನ್ನೊಂದು ರಾದ್ಧಾಂತವೇ ಶುರುವಾಯಿತು. ಅದನ್ನೊಂದು ತಹಬಂದಿಗೆ ತರಬೇಕಾದರೆ ಎಲ್ಲರಿಗೂ ತಲೆನೋವೇ....ಆ ಪ್ರಕರಣದ ಕೊನೆಯ ಅಂಕವಾಗಿ ಡಾ|| ಹಿಲ್ಡಾ,

"ನೀನು ನ್ಯಾಯ-ನೀತಿಗಳಿಂದ ವರ್ತಿಸುವುದಾದರೆ, ಕುಡಿಯುವುದನ್ನು ಬಿಟ್ಟು ನೆಮ್ಮದಿಯ ಜೀವನವನ್ನು ನಡೆಸುವುದಾದರೆ ಮಾತ್ರ ನಿನಗಿಲ್ಲಿ ಅವಕಾಶ. ಇಲ್ಲದಿದ್ದಲ್ಲಿ ನಿನ್ನನ್ನು ಕೆಲಸದಿಂದ ತೆಗೆದುಹಾಕಲಾಗುವುದು."

ಎಂದಳು, ದನಿಯಲ್ಲಿ ಕಾಠಿಣ್ಯ ಕಿಚ್ಚಿನ ಸ್ಫುರಿಯಂತೆ ಹರಿದುಬಂತು.

"ಇಲ್ಲ ತಾಯಿ ! ನಾನು ಅಂತಹವನಲ್ಲ !"

"ನೀನು ಕುಡಿಯುವುದು ಎಲ್ಲರಿಗೂ ಗೊತ್ತು; ಆದರೂ ಈ ಮಾತು ಹೇಳುತ್ತೀಯಲ್ಲಾ ? ಮಾಡಿದ ತಪ್ಪಿನೊಂದಿಗೆ 'ಸುಳ್ಳು' ಬೇರೆ ಸೇರಿಸುತಿದ್ದಿ !"

"ಖಂಡಿತ...."

ಮಾತನ್ನು ಮುಂದುವರಿಸಗೊಡದಂತೆ ಹಿಲ್ಡಾ ನುಡಿದಳು "ಅದೆಲ್ಲಾ ಬೇಕಿಲ್ಲ, ಪ್ರಮಾಣ ಮಾಡು !"

ಅವನು ಅಡ್ಡಬಿದ್ದು ಆರ್ತದನಿಯಲ್ಲಿ ಅಂದ "ನಾನು ಕೆಲವೊಮ್ಮೆ ಕುಡಿದಿದ್ದುಂಟು. ಅದರ ಅಮಲಿನಲ್ಲಿ ಏನು ಮಾಡಿದ್ದೇನೋ ತಿಳಿಯದು. ದಯಮಾಡಿ ಕ್ಷಮಿಸಿಬಿಡಿ."

"ಸರಿ ; ಈಗೇನು ಹೇಳುತ್ತಿ ?"

"ತಾವು ಹೇಗೆ ಹೇಳಿದರೆ ಹಾಗೆ ತಾಯಿ !"

"ಖಂಡಿತ....?"

"ಕೆಲವು ಕಾಲ ನೀವೇ ನೋಡಿ ತಾಯಿ."

"ಹಾಗಾದರೆ ನಾವು ಹೇಳಿದಂತೆ ಕೇಳುವೆಯಾ ?"

"ಖಂಡಿತವಾಗಿಯೂ."

"ಇನ್ನು ಮುಂದೆ ನಿನ್ನ ಖರ್ಚಿಗೆ ಎಷ್ಟು ಬೇಕೋ ಅಷ್ಟು ಮಾತ್ರ ಹಣ ತೆಗೆದುಕೊ. ಕಮಲು ದವಸ ಧಾನ್ಯಗಳಿಗೆ ಬೇಕಾದಷ್ಟು ಮಾತ್ರ ತೆಗೆದುಕೊಳ್ಳುತ್ತಾಳೆ. ಉಳಿದ ಹಣ ಇಲ್ಲಿಯೇ ಉಳಿತಾಯವಾಗಲಿ. ವರ್ಷದ ಕೊನೆಯಲ್ಲಿ ಬೇಕಾದ ಪದಾರ್ಥ-ಬಟ್ಟೆಗಳನ್ನು ಕೊಂಡುಕೊಂಡು ನೆಮ್ಮದಿಯ ಜೀವನ ನಡೆಸಿರಿ."

"ಆಗಬಹುದು."

"ಮಾನವಂತರಾಗಿ ಬಾಳುವುದನ್ನು ಕಲಿಯಬೇಕು."

"ಆಗಲಿ ತಾಯಿ."

"ಮನುಷ್ಯರಾಗಿ ಹುಟ್ಟಿ ಮನುಷ್ಯರಾಗಿ ಬಾಳದಿದ್ದರೆ ಹೇಗೆ ?"

"........"

"ನಿನಗೆ ಸದ್ಯಕ್ಕೆ ವಾರಕ್ಕೆ ಒಂದು ದಿನ ಮಾತ್ರ ಸರಾಯಿ. ಅನಂತರ ಎರಡು ವಾರಕ್ಕೊಮ್ಮೆ. ಕ್ರಮಕ್ರಮೇಣ ಸಂಪೂರ್ಣ ವರ್ಜ್ಯ ತಿಳಿಯಿತೇ ? ಇದಕ್ಕೆಲ್ಲಾ ಒಪ್ಪಿಕೊಂಡರೆ ಮಾತ್ರ ನಿನಗಿಲ್ಲಿ ಕೆಲಸ; ಇಲ್ಲದಿದ್ದರೆ ಇಲ್ಲ."

"ನಿಮ್ಮ ಕೃಪೆಗೆ-ಬುದ್ಧಿವಾದಕ್ಕೆ ಶರಣು....ಶರಣು!"

ಅವನು ಸಮಸ್ಕರಿಸಿ ಹೊರಟ, ಆದರೆ ಅವನಲ್ಲಿ ಅಂತಹ ಮಾರ್ಪಾಟು ಆಗುತ್ತೆಂಬುದನ್ನು ಊಹಿಸುವುದು ಕಷ್ಟ. ಅದು ಎಲ್ಲರಿಗೂ ಗೊತ್ತು. ಆದ್ದರಿಂದ ಯಾರಿಗೂ ಅಂತಹ ಸಮಾಧಾನ ಮೂಡಲಿಲ್ಲ. ಕಮಲ ಭಾರವಾದ ಹೆಜ್ಜೆಯನ್ನೆಳೆದುಕೊಳ್ಳುತ್ತ ತನ್ನ ಕೆಲಸಕ್ಕೆ ಹೊರಟಳು. ನೊಂದ ಮನವನ್ನು ಅಶ್ರದ್ಧಾಭಾವ ಆವರಿಸಿತ್ತು.

ನಿರ್ಮಲ ದಿನಚರಿಯ ಕಡೆ ಗಮನ ಹರಿಸಿದಳು. ಚಂಚಲ ನೇತ್ರಗಳಲ್ಲಿ ಸಜಲ ಸೌಂದರ್ಯ ನೆಲೆಸಿತ್ತು.

ತರಗತಿಯ ಬಾಗಿಲು ಹರವಾಗಿ ತೆರೆದಿತ್ತು. ಮಕ್ಕಳೆಲ್ಲ ಡೆಸ್ಕು-ಬೆಂಚುಗಳನ್ನು ಒರಿಸಿ ಚೊಕ್ಕಗೊಳಿಸುವುದರಲ್ಲಿ ನಿಮಗ್ನರಾಗಿದ್ದರು. ಉಪಾಧ್ಯಾಯಿನಿಯು ಒಳಗಡೆ ತಲೆ ಹಾಕುತ್ತಲೂ ಎಲ್ಲರೂ ವಂದನೆಯನ್ನರ್ಪಿಸಿ ತಮ್ಮ-ತಮ್ಮ ಪುಸ್ತಕಗಳನ್ನು ತೆಗೆದುಕೊಂಡು ಪೀಠಗಳನ್ನಲಂಕರಿಸಿದರು. ಧಾರುಣೀ ಎದುರಿಗೇ ಕುಳಿತಿದ್ದಾಳೆ. ಎಳೆಯ ಕಣ್ಣುಗಳಲ್ಲಿ ಭಾವಸ್ಫುರಿತ ಕಾಂತಿ ಮಿಂಚಿನಂತೆ ಮಿನುಗುತಿತ್ತು. ಅವಳ ತೆಳ್ಳನೆಯ ರಜತಸಲಾಕೆಯಂತಹ ಶರೀರ ಆಕರ್ಷಣೀಯವಾಗಿತ್ತು. ಬಹುಶಃ ಪೂರ್ವಕವಿಗಳು ಇಂತಹ ಶರೀರ ಪ್ರಕೃತಿಯನ್ನು ಕುರಿತೇ ವನಲತೆಗಳಿಗೆ ಹೋಲಿಸಿದರೇನೋ. ಈ ಅರ್ಥರಹಿತವಾದ ಜಗದ ರೂಪಕದಲ್ಲಿ ನರನಾರಿಯರ ಅಶಾಶ್ವತ ಶರೀರಗಳನ್ನು ಆಶ್ರಯಿಸಿಕೊಂಡ ಸೌಂದರ್ಯಕ್ಕೆ ಎಷ್ಟೊಂದು ಬೆಲೆಯಿದೆ!

ನಿರ್ಮಲ ಪಾಠ ಆರಂಭಿಸಿದಳು.

ಮನವನ್ನು ಆವರಿಸಿದ್ದ ಕಮಲೆಯ ದುರದೃಷ್ಟಕರ ಜೀವನ ಚಿತ್ರ ಅಕ್ಷಿಪಟಲದ ಮೇಲೆ ಜಲನಚಿತ್ರದಂತೆ ಸುಳಿಯುತ್ತಲೇ ಇತ್ತು. ಜನಜೀವನದ ನಗ್ನ ಚಿತ್ತಾರ ಸುತ್ತಮುತ್ತ ಹಲ್ಕಿರಿದು ಅಣಕಿಸುತಿತ್ತು. ಬಂಡೆದ್ದ ಭಾವನೆಗಳನ್ನು ಅಲ್ಲಿಂದಲ್ಲೆ ಹತ್ತಿಕ್ಕಿ ಪಾಠವನ್ನು ಮುಗಿಸಿದಳು. ಎಲ್ಲಾ ಮಕ್ಕಳು ಹೊರಬಿದ್ದಮೇಲೆ ಅಲ್ಲೇ ನಿಂತಿದ್ದ ಧಾರುಣೆಯನ್ನು ಕೇಳಿದಳು ನಿರ್ಮಲ,

"ಮನೆಯಲ್ಲಿ ಎಷ್ಟು ದಿನ ಇದ್ದೆ ಮಗೂ ?"

"ಮೂರು ದಿನ."

"ಹೊಸ ಪಾಪ ಹೇಗಿದೆ ?"

"ಚೆನ್ನಾಗಿದೆ !"

"ನಿನಗೆ ತುಂಬ ಇಷ್ಟವೇ ?"

"ಹೌದು" ಎಂಬಂತೆ ತಲೆಯಾಡಿಸಿದಳು ಧಾರುಣಿ.

"ಬೇಸಗೆ ರಜೆಯನ್ನು ಎಲ್ಲಿ ಕಳೆಯುತ್ತಿ ?"

"ಅಜ್ಜಿಯ ಮನೆಯಲ್ಲಿ."

"ಅದು ಒಳ್ಳೆಯದು." ಎಂದ ನಿರ್ಮಲ ಪುನಃ ನಲ್ಮೆಯಿಂದ ಕೇಳಿದಳು "ನಮ್ಮ ಮನೆಗೊಂದು ದಿನ ಬರುವೆಯಾ ?"

ಸ್ವಲ್ಪ ಹೊತ್ತು ಏನೂ ಹೇಳದೆ ಲಜ್ಜಾಭಾವದಿಂದ ಮುಗುಳುನಕ್ಕಳು ಧಾರುಣೀ. ಕಪೋಲಪಾಲಿಯಲ್ಲಿ ಚಂದನವೊರೆದಂತೆ ರಂಗುಮೂಡಿ ಶೋಭಾಯಮಾನವಾಯಿತು. ನಿರ್ಮಲೆಯು ಅದನ್ನು ನೋಡುತ್ತಲೂ ಮೃದುವಾಗಿ ಅಪ್ಪಿ ಮುಂಗುರುಳನ್ನು ತೀಡಿ, ಅತ್ಯಂತ ಸ್ನೇಹಭಾವದಿಂದ ತಲೆಯನ್ನು ನೇವರಿಸುತ್ತ ಕೇಳಿದಳು "ನಿನಗೆ ಬಹಳ ಲಜ್ಜೆ ಅಲ್ಲವೇ ?"

"ಇಲ್ಲ." ಎನ್ನುವುದರೊಳಗಾಗಿ ಕೆನ್ನೆಗಳು ಪುನಃ ರಂಗು ತಳೆದುವು.

"ನಿನಗೆ ನಮ್ಮೊಂದಿಗೆ ಚೆನ್ನಾಗಿ ಬಳಕೆಯಾಗಲಿ, ಅನಂತರ ಕರೆದು ಕೊಂಡು ಹೋಗುವೆ. ಆದೀತೇ ?"

ತಲೆಯಾಡಿಸುತ್ತ ಸಮ್ಮತಿ ಸೂಸಿದಳು ಧಾರುಣೀ. ಚೆಂದುಟಿಗಳಲ್ಲಿ ಎಳೆನಗು ಮೂಡಿ ಮಾಯವಾಯಿತು.

"ನನ್ನ ಬಳಿ ಸಂಕೋಚ ಪಡಬೇಡ ಮಗೂ !"

"ಇಲ್ಲ." ಧ್ವನಿ ಲಜ್ಜಾಭಾವದಿಂದಲೇ ಹೊರಬಿತ್ತು.

ನಿರ್ಮಲ ಆ ಬಾಲಸಹಜವಾದ ಮುಗ್ಧಮುಖವನ್ನು ನಿಟ್ಟಿಸಿದಳು. ಈ ಜಗತ್ತಿನಲ್ಲಿ ವಿಕಟವೂ ಕರುಣಾಜನಕವೂ ಆದ ಈ ಪರಿ ಚಿತ್ತಾರಗಳು ಎಷ್ಟೆಷ್ಟು ಕೋಟೆಗಳಲ್ಲಿ ದವಸ ಧಾನ್ಯಗಳಂತೆ ಸಂಗ್ರಹೀತವಾಗಿವೆಯೋ ಆ ನಿಗಮಾಗೋಚರ ಮಾತ್ರ ಬಲ್ಲ ಎನಿಸಿದಾಗ ಕಾರುಣ್ಯಪೂರ್ಣ ಹೃದಯಾಳದಲ್ಲಿ ನರನರಗಳೂ ದುಃಖಿಸುತ್ತಿರುವಂತೆ ಭಾಸವಾಯಿತು. ಚಿಂತಾಲಯದಲ್ಲಿ

ಅದೆಷ್ಟು ವಿಚಾರದೋಹನ ಅಡಗಿತ್ತೋ ಅವೆಲ್ಲಾ ಒಂದೆರಡು ಘಳಿಗೆ ಡೋಲಾಯಮಾನವಾದುವು. ಶಾಲೆಯ ಗಂಟೆ ಬಾರಿಸುವುದನ್ನೇ ಕಾಯುತ್ತ ಅಲ್ಲೇ ನಿಂತಳು. ಸ್ವಲ್ಪ ಸಮಯ ಉರುಳುವುದರೊಳಗಾಗಿ ಅಲ್ಲಿಗೆ ಪಾರ್ವತಿ ಆಗಮಿಸಿದಳು. ಸುಮ್ಮನೆ ನಿಂತಿದ್ದ ಗೆಳತಿಯನ್ನು ನೋಡಿ ಮುಂದುವರಿಯದೆ ಅಲ್ಲೇ ನಿಂತು ಕೇಳಿದಳು,

"ಏನು ಹೀಗೆ ಒಬ್ಬಳೇ ನಿಂತೆ ?"

"ಈಗಷ್ಟೆ ಟ್ಯೂರ್ಶ ಮುಗಿಯಿತು. ರಾಮಯ್ಯನ ಪ್ರಕರಣದಿಂದ ಹೊತ್ತಾಗಿಯೇ ಆರಂಭಿಸಿದ್ದೆ. ಇನ್ನೇನು ಇಷ್ಟರಲ್ಲೇ ತರಗತಿಗಳು ಆರಂಭವಾಗುತ್ತವೆ."

"ಸರಿ....ಸರಿ."

ಅದೇ ಸಮಯದಲ್ಲಿ ಹೊರಜಗತ್ತಿನಿಂದ ಶಾಲಾವಲಯಕ್ಕೆ ಉಪಾಧ್ಯಾಯರುಗಳೂ ಗುಮಾಸ್ತರುಗಳೂ ಸಾಲುಗಟ್ಟಿ ಬರುತಿದ್ದುದು ಗೋಚರಿಸಿತು. ಬೋರ್ಡಿಂಗಿನ ಮದರ್‌ರವರು ಸಿಸ್ಟರ್ ಮೇರಿಯೊಂದಿಗೆ ಅತ್ತ ಬಿಜಯಂಗೈಯ್ಯುತಿದ್ದುದೂ ಕಾಣಬಂತು. ಶಾಲಾಮಕ್ಕಳೂ ಗುಂಪುಗುಂಪಾಗಿ ಆಗಮಿಸುತಿದ್ದಾರೆ. ಇನ್ನಷ್ಟು ಹೊತ್ತಿನೊಳಗಾಗಿ ಆವರಣವೆಲ್ಲಾ ಜನರಾಶಿಯಿಂದ ತುಂಬಿಹೋಯಿತು. ಪಾರ್ವತಿ ದೃಷ್ಟಿ ಹೊರಳಿಸಿ ಅಂದಳು "ಮದರ್ ಮಾರ್ಗರೆಟ್-ಗೆ ಜ್ವರವಂತೆ. ಅನಂತರ ಹೋಗಿ ನೋಡಿಕೊಂಡು ಬರಬೇಕು,"

"ನನಗೆ ಗೊತ್ತಿರಲಿಲ್ಲ; ಅದಕ್ಕೇ ಎರಡು ದಿನದಿಂದ ಅವರು ಕಾಣಿಸುತ್ತಿಲ್ಲ."

ಆ ಕಾನ್ವೆಂಟಿನ ವಹಿವಾಟನ್ನು ಸಮೃದ್ಧಿಯಾಗಿ ನಡೆಸಿಕೊಂಡು ಬರಲು ಹನ್ನೆರಡು ಮಂದಿ 'ಮದರ್'ಗಳು ಟೊಂಕ ಕಟ್ಟಿದ್ದಾರೆ. ಅವರಲ್ಲಿ ಮದರ್ ಮಾರ್ಗರೆಟ್ ಹಿರಿಯವಳು, ಆಕೆಯ ಕೃಪಾಶ್ರಯದಲ್ಲಿ ಕಾನ್ವೆಂಟಿನ ಬೃಹದ್ವೃಕ್ಷ ದಿನದಿನಕ್ಕೂ ಹರೆಗೈ ಚಾಚಿ ಬೆಳೆಯುತ್ತಲೇ ಇತ್ತು....

ಶಾಲೆಯ ಗಂಟೆ ಉಚ್ಛಸ್ವರದಲ್ಲಿ ಮೊಳಗಿತು. ಎಲ್ಲರೂ ಅವರವರ ತರಗತಿಯ ಕಡೆ ಹೆಜ್ಜೆ ಹಾಕಿದರು. ದೃಶ್ಯ ಎಳೆಗಳನ್ನು ಸೇರಿಸಿ ಹೊಸೆದಂತೆ ಕಂಗೊಳಿಸುತಿತ್ತು.

ಸಾಯಂಕಾಲ ಮದರ್ ಮಾರ್ಗರೆಟಳನ್ನು ನೋಡಿಕೊಂಡು ಬರಲು

ವಿಮಲ–ನಿರ್ಮಲ ಇಬ್ಬರೂ ಒಂದೇ ಬಾರಿಗೆ ಒಳಹೆಜ್ಜೆಯಿಟ್ಟರು. ಜ್ವರದ ಕಾವಿನಿಂದ ಬೆಳ್ದಾವರೆಯಂತಹ ಮುಖ ಕೆನ್ನೀರೋಕುಳಿಯಿಂದ ತೊಳೆದಂತೆ ರಂಗು ತಳೆದಿತ್ತು. ಚಿಕ್ಕ ಮೇಜಿನ ಮೇಲಿದ್ದ ಔಷಧಿಯು ಪರಂಪರೆ ಚಿಕಿತ್ಸೆಯ ವ್ಯಾಪ್ತಿಯನ್ನು ಸಾರಿ ಹೇಳುವಂತಿತ್ತು. ಆಕೆಯೊಂದಿಗೆ ಕುಶಲ ಪ್ರಶ್ನೆಗಳಾದ ನಂತರ ನಿರ್ಮಲ ತಂಗಿಗೆಂದಳು "ನೀನು ಈಗ ಮನೆಗೆ ಹೋಗು. ನಾನು ಸ್ವಲ್ಪ ತಡೆದು ಬರುವೆ,"

"ಹಾಗಾದರೆ ಹೋಗಲೇ ?"

"ಹೋಗು."

ವಿಮಲ ಅಲ್ಲಿಂದ ಹೊರಬಿದ್ದಾಗ ಹೊತ್ತು ಐದರ ಅಂಚಿನಲ್ಲಿತ್ತು. ಸಾಯಂಸೂರ್ಯ ಅಸ್ತಮಾನ ಶೋಭೆಯಿಂದ ಜಗತ್ತನ್ನು ಅಮೋಘ ವಾಗಿಸಿದ್ದ. ಮನೆಗೆಹೋಗುವ ಉಪಾಧ್ಯಾಯಿನಿಯರೆಲ್ಲಾ ಆಗಲೇ ಹೋಗಿ ಬಿಟ್ಟಿದ್ದಾರೆ. ಇನ್ನೂ ಯಾರಾದರೂ ಉಳಿದಿರಬಹುದೇನೋ ಎಂಬ ಕಳ ದುಳಿದ ನೆಚ್ಚಿನಿಂದ ಸುತ್ತಮುತ್ತ ನೋಡಿ ಯಾರೂ ಕಾಣಿಸದಿರಲು ತಾನೇ ಏಕಾಂಗಿಯಾಗಿ ಹೊರಟಳು. ಹೂದೋಟದ ಸುಂದರ ಹಾದಿ ಸರಾಗವಾಗಿ ಕಳೆಯಿತು ; ಪ್ರಾಂಗಣವನ್ನು ದಾಟಿ ರಸ್ತೆಗೆ ಕಾಲಿಟ್ಟಾಗ ದಾರಿಗರಿಗೆ ಕೊರತೆ ಯಿರಲಿಲ್ಲ. ಹಲವಾರು ಪಾಂಥರ ಮಧ್ಯೆ ತಾನೂ ಒಬ್ಬಳಾಗಿ ಹೆಜ್ಜೆ ಹಾಕಿ ದಳು. ಅಂಗಾಂಗಗಳಲ್ಲಿ ಚಿಗರಿಯಂತಹ ಚಟುವಟಿಕೆ....ಉಟ್ಟ ನವೀನ ಪಚ್ಚಾಂಬರ ವನದೇವಿಗೆ ಉಪಮಾನವಾಗುವಂತಿದೆ. ಅರಿತು-ನುರಿತ ಹಾದಿ ಹತ್ತು ಮಾರು ಸಾಗಿತ್ತೇನೊ, ಅನಿರೀಕ್ಷಿತವಾಗಿ ಗೆಳತಿ–ಹೇಮಾಂಗಿನಿ ಎದು ರಾದಳು. ಒಡನೆ ಇಬ್ಬರ ಮುಖಮಂಡಲಗಳೂ ಅರಳಿ ಅರವಿಂದವಾದುವು. ಅತ್ಯಂತ ಆತ್ಮೀಯತೆಯಿಂದ ಅವಳ ಹಸ್ತವನ್ನು ಬಿಗಿಯಾಗಿ ಅದುಮಿ ಹಿಡಿದು ಕೊಂಡು ಆನಂದೋತ್ಸಾಹದಿಂದ ಕೇಳಿದಳು ವಿಮಲ,

"ಹೇಗಿತ್ತು ಹೇಮಾ, ನಿನ್ನ ಪ್ರವಾಸ ?"

"ಅದಿರಲಿ, ನೀನೇನೋ ದೊಡ್ಡ ಮಸಲತ್ತು ಹೂಡಿದಂತಿದೆ ?"

"ಏನಿಲ್ಲಪ್ಪಾ !"

"ನನಗೆಲ್ಲಾ ಗೊತ್ತು ; ಬಿಡು."

"ಏನಾದರೂ ತಿಳಿದುಕೋ...."

"ನೀನು ನಮ್ಮ ಬೀದಿಗೆ ಬರುತ್ತೀಯಂತೆ ?"

"ಓ... ಅದೋ ? ನೀನಾಗ ಹೇಳಿದ್ದು ?"

"ಮತ್ತೇನೆಂದುಕೊಂಡೆ ?"

"ನನಗೆ ಹೇಗೆ ತಿಳಿಯಬೇಕು, ಹೇಳು ?"

"ಈಗ ಹೇಳು ? ಎಲ್ಲಿಯವರೆಗೆ ಸಫಲತೆ ಹೊಂದಿದ್ದಿ ?"

"ನಿನಗೆ ಯಾರು ಹೇಳಿದ್ದು ?"

"ರಾಧೇಶ್ಯಾಂ !"

"ಇದು ಒಳ್ಳೇ ಚೆನ್ನಾಗಿದೆ !"

"ಏಕೆ ?"

"ಅವರು ಯಾರೋ ನಾನು ನೋಡೇ ಇಲ್ಲ. ಸುಮ್ಮ ಸುಮ್ಮನೆ ಸುದ್ದಿ ಮಾತ್ರ ಹರಡುತಿದ್ದಾರೆ !"

"ಕಿಚ್ಚಿಲ್ಲದೆ ಹೊಗೆಯಾಡುವುದಿಲ್ಲ."

"ಕಿಚ್ಚಿಗೆ ಅವರೇ ಕಾರಣ."

"ಅಂದರೆ ಒಪ್ಪಿಕೊಂಡಿದ್ದಾರೆ ಅಂತ ಆಯಿತಲ್ಲ ?"

"ಹಾಗಾದರೆ ನನ್ನನ್ನು ಕೋಳಿಮರಿ ಅಂತ ತಿಳಿದುಕೊಂಡಿದ್ದಿಯೇನು?"

ಪ್ರಶ್ನೆ ನಗು ತರಿಸಿತು. ಇಬ್ಬರೂ ಸಾನಂದದಿಂದ ಅದರಲ್ಲಿ ಪಾಲ್ಗೊಂಡರು. ಅನಂತರ ಆಂತರಂಗಿಕ ವಿಷಯಗಳೆಷ್ಟೋ ಬಂದುಹೋದುವು. ಒಳಿತು-ಕೆಡಕುಗಳ ವಿಮರ್ಶೆಯು ನಡೆದು ಉಚಿತಾನುಚಿತಗಳ ಹುರುಳನ್ನು ಮೆದ್ದು ಸಂತುಷ್ಟಳಾದ ಹೇಮಾಂಗಿನಿ ಒತ್ತಾಯಪೂರ್ವಕವಾಗಿ ನುಡಿದಳು,

"ಈವತ್ತು ನೀನು ನನ್ನ ಜೊತೆ ಮನೆಗೆ ಬಾ, ನಾನು ಪರಸ್ಪರ ಭೇಟಿ ಮಾಡಿಸುವೆ."

"ಬೇಡಪ್ಪಾ !"

"ಹಾಗೆಂದರೇನು ಚೆಂದ ?" ಕೃತಕ ಕೋಪದಿಂದ ನುಡಿದಳು ಹೇಮಾಂಗಿನಿ.

"ಅಷ್ಟೇಕೆ ಆವಸರ ? ಮೊದಲು ತಳಪಾಯ ದೃಢವಾಗಲಿ. ಅನಂತರ ಎಲ್ಲಾ."

"ಏಕಷ್ಟು ಭಯ-ಕಳವಳ ? ನೀನೇನು ಹಳ್ಳಿ ಹುಡುಗಿಯೆ ?"

"........"

"ನೀನು ...ಪ್ರೇಮ ಭಿಕ್ಷೆ ಬೇಡಬೇಕೆ? ಅಥವಾ ಈ ವ್ಯವಹಾರ ಬೆಳಸಬೇಕೆ? ಸುಮ್ಮನೆ ಪರಸ್ಪರ ಪರಿಚಯ ಅಷ್ಟೆ."

ವಿಮಲ ಮೈಯೆಲ್ಲಾ ಲಜ್ಜೆ-ಸಂಕೋಚಗಳ ಮೂರ್ತಿಯಾಗಿ ನಿಂತಳು. ಏನು ಹೇಳಬೇಕೋ ಹೊಳೆಯಲಿಲ್ಲ. ಅವಳು ಅಷ್ಟೇ ನಿರಾಳವಾಗಿ ಸ್ನೇಹಪೂರ್ಣ ಸಲಿಗೆಯಿಂದ ನುಡಿದಳು,

"ಬಿಡು, ಬಿಡು. ಈ ಸಂಕೋಚವೆಲ್ಲಾ ಇಂದು–ನಾಳೆಗೆ ಮಾತ್ರ."

"ನೀನೂ....ಅಷ್ಟೆ."

ಇಬ್ಬರ ಮುಖದಲ್ಲೂ ನಗುವಿನಲಹರಿ ಉಕ್ಕಿ ಹರಿಯಿತು.

"ನೀನಿಲ್ಲದೆ ಈಚಿನ ದಿನಗಳೆಲ್ಲ ಬಹಳ ಸಪ್ಪೆ....ನನಗೆ ಹೊತ್ತು ಕಳೆಯುವುದೇ ಕಷ್ಟವಾಗುತಿತ್ತು!"

ಮಾತು ತಿರುಗಿಸಲೆಂದು ವಿಮಲ ನುಡಿದರೆ ಅವಳು ಅತ್ಯಂತ ಹಾಸ್ಯಪ್ರಧಾನವಾಗಿ ನುಡಿದಳು,

"ಅದಕ್ಕೆಂದೇ ನಮ್ಮ ಬೀದಿಗೆ ಬರಲು ಹಂಚಿಕೆ ಹೂಡಿದ್ದಿ!"

ಇಬ್ಬರ ಮುಖದಲ್ಲೂ ಪುನಃ ನಗುವಿನ ಚಿಲುಮೆ ಉಕ್ಕಿ ಹರಿಯಿತು.

ಅನಂತರ ಸಮಯೋಚಿತವಾಗಿ ವಿಮಲ ಮಧುರವಾಣಿಯಲ್ಲಿ ಉತ್ತರಿಸಿದಳು.

"ನನಗಿದ್ದುದು ಪರೀಕ್ಷೆಯ ಸಂಕಟ. ಇವರು ನಡುವೆ ಬಂದು ತಲೆ ಹಾಕಿದುದರಿಂದ ಮನಸ್ಸಿನ ಹಿಡಿತವೂ ತಪ್ಪಿತು. ಮೇಲಾಗಿ, ಪ್ರಫುಲ್ಲನ ಕೀಟಲೆ ಜಣ್ಣನೆ ಇವುಗಳಲ್ಲಿ ತಲೆ ಕೆಟ್ಟಂತಾಗಿದೆ. ನಾವಾಗಿ ಅವರನ್ನು ಹುಡುಕಿಕೊಂಡು ಹೋಗಲಿಲ್ಲ, ಬಿಡು!"

"ಬಾ ಇವತ್ತು! ಒಂದೇಬಾರಿಗೆ ಎಲ್ಲಾ ಪೂರೈಸಿ ಬಿಡುವ!"

ಹಸ್ತವನ್ನು ಇನ್ನಷ್ಟು ಬಿಗಿಯಾಗಿ ಅದುಮಿ ಹಿಡಿದುಕೊಂಡು ಹಾಸ್ಯರಸ ಪೂರ್ಣವಾಗಿ ಉತ್ಸುಕವಾಣಿಯನ್ನು ಹರಿಯ ಬಿಟ್ಟಾಗ ಇಬ್ಬರೂ ಮನಃಪೂರ್ತಿ ನಕ್ಕರು. ಸ್ನೇಹವಾಹಿನಿ ಸ್ವಚ್ಛಂದವಾಗಿ ಹರಿಯಿತು.

## ೧೯

ಹೇಮಾಂಗಿನಿಯ ಮನೆಯಲ್ಲಿ ವಿಮಲೆಯನ್ನು ಸಂಧಿಸಿದ ರಾಧೇಶ್ಯಾಂ

ಬಹಳ ದಿನಗಳ ಆತ್ಮೀಯತೆಯ ಅಭಿವ್ಯಕ್ತಿಯಂತೆ ಸಸ್ನೇಹಭರಿತವಾಗಿ ಕಲೆತು ಸಂಭಾಷಣೆ ನಡೆಸುತ್ತ ಆ ನಿಶ್ಚಲ, ನಿರಂತರ ಬೆಳಗುವ ಅಖಂಡ ಜ್ಯೋತಿಯಲ್ಲಿ ಸಂಪೂರ್ಣ ಲೀನನಾದರೂ, ಅದರ ಸ್ವಭಾವ-ಸ್ವರೂಪಗಳ ಗಾತ್ರವನ್ನು ಗ್ರಹಿಸುವ ಮೊದಲೇ ಏಕಾಂತ ನಿಷ್ಠೆಯಿಂದ ಕೈ ಅಡ್ಡ ಹಿಡಿದು ರಕ್ಷಿಸಿಕೊಳ್ಳದ ಹೊರತು ನಿಷ್ಕಂಪ ಪ್ರದೀಪವಾಗಿ ಉರಿಸುವುದು ಅಸಾಧ್ಯ ಎಂಬುದನ್ನು ಮಾತ್ರ ಚೆನ್ನಾಗಿ ಅಭ್ಯಸಿಸಿದ. ಅತೀತ ಯುಗಧರ್ಮವನ್ನರಿತು, ಉದಾತ್ತ ಧ್ಯೇಯೋದ್ದೇಶಗಳನ್ನು ಹೊಂದಿ ಸ್ತ್ರೀ ಶಿಕ್ಷಣದಲ್ಲಿಯೇ ಮಾನವ ಜಾತಿಯ ಸರ್ವೋತ್ತಮ ಲಕ್ಷ್ಯಸಿದ್ಧಿ ಅಂತರ್ಗವಾಗಿದೆ ಎಂಬುದರ ವ್ಯಾಪ್ತಿಯಲ್ಲಿಯೇ ಭಾವಧಾರೆ ಪ್ರವಹಿಸುತಿತ್ತು.

ಆದರೆ....!

ಅವನು ಓದಿದ್ದು ನ್ಯಾಯಶಾಸ್ತ್ರ. ಮಸ್ತಕದಲ್ಲಿ 'ಹಿಂದೂಕೋಡ್' ತನ್ನ ಕುಂದಿಲ್ಲದ ಅಸ್ತಿತ್ವವನ್ನು ಸ್ವಚ್ಛಂದವಾಗಿ ಸ್ಥಾಪಿಸಿತ್ತು. ಮೇಲಾಗಿ, ಸೂರಾರು ಸುಳ್ಳುಗಳನ್ನು ಆದ್ಯಂತವಾಗಿ ಹೆಣೆದು, ಕೈಕೊಂಡ ಮೊಕದ್ದಮೆಗಳಿಗೆ ವಿನೂತನ ರೂಪುರೇಷೆಗಳನ್ನು ಅಳವಡಿಸುವುದರಲ್ಲಿ ನಿಪುಣನೂ ಹೌದು. ತದೇಕಾಂತ ಚಿಂತನೆಯಲ್ಲಿ ಸದಾ ಮುಳುಗಿರುವುದರಿಂದ ಕಾವ್ಯ-ಸಾಹಿತ್ಯಗಳ ರಸಜ್ಞತೆಯನ್ನು ಪಡೆದುಕೊಳ್ಳಲು ಅವಕಾಶ ಸಹ ದೊರೆಯಲಿಲ್ಲ. ಅದಕ್ಕಾಗಿ ಅಲ್ಪ ಪಶ್ಚಾತ್ತಾಪವೂ ಇಲ್ಲದಿಲ್ಲ. ಈ ಭಾಸಮಾನ ತಡಿಯಲ್ಲಿ ಅಂಧಕಾರವನ್ನು ಆಶ್ರಯಿಸುವುದು ಸರ್ವಥಾ ಸರಿಯಲ್ಲ ಎಂಬುದು ಸಹ ಗೊತ್ತು. ಆದರೂ ಯಾಕೋ, ಏನೋ ಒಂದಕ್ಕೊಂದು ಸಾಮರಸ್ಯ ಮೂಡುತ್ತಲೇ ಇಲ್ಲ. ಅನಿರೀಕ್ಷಿತವಾಗಿ ಭಾವೀ ಸತಿಯ ಪರಿಚಯವಾದಾಗಿನಿಂದ ವಿಚಾರ ಗತ್ತರಿಯ ಅಲುಗಿನ ಮೇಲೆ ಚಿತ್ತ ಹರಿದಾಡತೊಡಗಿದಾಗ ಎಂದೋ ಮನನ ಮಾಡಿದ್ದ ಕಾವ್ಯ ಕುತೂಹಲ ಕೊನರಿ, ಕವಿಪುಂಗವರು ಅಂಗನೆಯರನ್ನು ಏಕೆ 'ಮರಾಳಿಕಾಗಮನೆ' 'ಇಂದುವದನೆ' ಎಂದು ಮುಂತಾಗಿ ಕರೆಯುತ್ತಾರೆಂಬುದು ಅಂತಸ್ಥಲಕ್ಕೆ ಮುಟ್ಟಿತು. ಆ ಸುಂದರ ಸುನೇತ್ರೆಯ ಗಂಭೀರ ಭಂಗಿಯಲ್ಲಿ ಸತ್ಯಸ್ವರೂಪವನ್ನು ವಿಮರ್ಶಿಸಿ ಭ್ರಮಿತಮಾನಸಮುರುಳಿ ನವ ರಾಗಗಳ ಆಗರವಾಯಿತು. ಆತ ನಿತಾಂತ ಕುತೂಹಲಿಯಾದ.

ಎದುರಾಗಿ ನಿಂತ ವಿಮಲ ತರಂಗಾಯಿತ ತಂಗಾಳಿಯಲ್ಲಿ ಸಲಸಲಕ್ಕೂ

ಜಾರುವಂತಿದ್ದ ಹಾರಿದ್ರ ಉತ್ತರೀಯವನ್ನು ಬಿಗಿಹಿಡಿದು ದೀಪ್ತಕಂಠದಿಂದ ನುಡಿದಳು,

"ಇದು ಲೋಭದ ಪರಾಕಾಷ್ಠೆ !"

"ಒಂದೇ ಬಾರಿಗೆ ಆ ತೀರ್ಮಾನ ಸರಿಯಲ್ಲ !"

ಅಷ್ಟೇ ದೃಢವಾದ ಸ್ವರದಿಂದ ರಾಧೇಶ್ಯಾಂ ಪ್ರತಿವಾದನೆ ಹೂಡಿದ.

"ಕಲಿತವರೂ, ನ್ಯಾಯಶಾಸ್ತ್ರ ಕೋವಿದರೂ ಅತೀ ಲೋಭಪರವಶ ರಾಗಿರುವುದರಿಂದಲೇ ಭಾರತದ ಭವಿಷ್ಯ ಕುಂಠಿತವಾಗಿದೆ....ರಾಧೇಶ್ ! ಮೊದಲು ನೀವು ನಿಮ್ಮ ಆತ್ಮವಿಮರ್ಶೆ ಮಾಡಿಕೊಳ್ಳುವುದು ಉತ್ತಮ."

"ನಿಮ್ಮ ವಾದದಲ್ಲಿ ಹುರುಳಿಲ್ಲ ಎಂದೇನಿಲ್ಲ. ವಿಚಾರಾತ್ಮಕವಾಗಿ ವಿಮರ್ಶೆ ಮಾಡಿದರೆ ಹೊಮ್ಮುವ ನಗ್ನಸತ್ಯವೇ ಬೇರೆ....!"

ವಿಮಲ ಅಪ್ರತಿಭಳಾಗಿ ಅತ್ಯಂತ ಖೇದದಿಂದ ನುಡಿದಳು,

"ಅತೀತಯುಗದ ಗಾಢಾಂಧಕಾರ ಮಾರ್ಗದಲ್ಲಿ ಕೇವಲ ಒಣ ಆದರ್ಶ ಗಳೊಂದಿಗೆ ಪಯಣಿಸಿದರೆ ಆಗುವುದು ಇಷ್ಟೆ. ಗಮ್ಯಸ್ಥಾನವನ್ನು ಅರಿತು ಕೊಳ್ಳದೆಯೆ ಮಾರ್ಗಯೋಗ ವ್ಯರ್ಥ !"

"ಅಂದರೆ....?"

"ನಾನು ನನ್ನ ಪರವಾಗಿ ನಿಮ್ಮನ್ನು ಒತ್ತಾಯಿಸುತ್ತಿಲ್ಲ ಬಿಡಿ."

"ಆದರೂ ನಿಮ್ಮ ವಾದ ಇಂಗ್ಲಿಷಿನವರ ವಾದದಂತಿದೆ !"

"ಅವರಲ್ಲಿ ಪ್ರತಿಭಾಶಕ್ತಿಯಿದೆ ನಮ್ಮಲ್ಲಿಲ್ಲ ಎಂದುಕೊಳ್ಳಬೇಡಿ....ನಿಮ್ಮ ನ್ಯಾಯಶಾಸ್ತ್ರ ಹಾಗೆಂದು ಪ್ರತಿಪಾದಿಸುತ್ತದೆಯೇ ?"

ಕಿಲಕಿಲನೆ ನಕ್ಕಳು ವಿಮಲ. ನಗುವಿನ ಮನೋರಮ ಲಹರಿ ಮನ ವನ್ನು ಮಾಯೆಯಂತೆ ಮುಸುಗಿತು. ಆ ಉನ್ಮತ್ತ ಭಾವಬಂಧನದಿಂದ ಬಿಡುಗಡೆ ಹೊಂದಿದಾಗ ಅನುರಾಗ ಸಮುದ್ರದ ಆಳವನ್ನು ಅಳೆಯುತಿತ್ತು-ಚಿತ್ತ. ಏನೋ ಒಂದು ರೀತಿಯಲ್ಲಿ ನಿದ್ದೆಯಿಂದ ಎಚ್ಚತ್ತವನಂತೆ, ಭ್ರಮಂತ ಭ್ರಮರಾವಳಿಯಂತೆ ಅರಳುಗಣ್ಣುಗಳಿಂದ ವಿಚಿತ್ರವಾಗಿ ನಿಟ್ಟಿಸಿ ನೋಡಿದ. ಆ ಇಪ್ಪತ್ತರ ಹರೆಯದ ಹೆಣ್ಣಿನಲ್ಲಿ ರಾಜಕುಮಾರಿಯ ಠೀವಿ, ತುಂಟತನ, ನಿರ್ಲಜ್ಜೆ ಪ್ರಧಾನವಾಗಿದ್ದುವು. ಉಟ್ಟ ಸರಳವೂ, ಸುಂದರವೂ ಆದ ಹಾರಿದ್ರ ವರ್ಣರಂಜಿತ ಪತ್ತಲದಿಂದ ಇನ್ನಷ್ಟು ರಮಣೀಯತೆಯನ್ನು ಪಡೆದುಕೊಂಡ

ಅವಳು ಬಂಗಾರದ ಪುತ್ಥಳಿಯಂತೆ ತೋರಿಬಂದಳು. ಕ್ರಮಶಃ ಹೂಡಿದ್ದ ಯೋಜನೆ ಬುಡಮೇಲಾದಂತೆ ಭಾಸವಾಗಿ, ಒಂದೆರಡು ಘಳಿಗೆ ಚಿತ್ತಪ್ರವೃತ್ತಿಯಲ್ಲಿ ಮೂಡಿದ್ದ ನಾನಾ ಭಾವನೆಗಳು ಆಲೋಡಿತವಾದುವು. ರಾಧೇಶ್ಯಾಂ ಬಿಸಿಯುಸಿರು ಬಿಟ್ಟ.

ದೂರ ದಿಗಂತದಂಚಿನಲ್ಲಿ ಚಂದ್ರೋದಯವಾಗುತ್ತಿದೆ. ಪಕ್ಕದಲ್ಲಿ ಪ್ರತಿಷ್ಠಿತವಾದ ಬೆಳ್ಮೋಡ ನದಿಯ ಪ್ರವಾಹದಂತೆ ಕಾಣಿಸುತ್ತಿದೆ. ಗಿಡಗಗಳ ಹಿಂಡು ಸ್ಪರ್ಧೆ ಹೂಡಿದಂತೆ ಹಾರಾಡುತ್ತಿವೆ. ಶಾಂತ ಸುಂದರ ಪ್ರಕೃತಿಯ ಮೇಲೆ ಹರಿದ ಬೆಳುದಿಂಗಳ ಮಂದಧಾರೆ ಗಮನೀಯವಾಗಿತ್ತು.

ವಿಮಲ ಮೃದು ಹಾಸ್ಯ ಶೈಲಿಯಲ್ಲಿ ಪ್ರಶ್ನಿಸಿದಳು,

"ಏಕೆ ವ್ಯಸನಗೊಂಡಿದ್ದೀರಿ ರಾಧೇಶ್ ?"

ರಾಧೇಶ್ಯಾಂ ನಸುನಕ್ಕ, ಮುಖಮುದ್ರೆಯಲ್ಲಿ ವಿಚಾರಪರ ಗಂಭೀರತೆ ನೆಲೆಸಿತ್ತು. ಸ್ವಲ್ಪಹೊತ್ತು ಮೂಕಮೌನದಿಂದ ಸಾಗಿತೇನೋ ...ಅನಂತರ ಅವನೇ ಉತ್ತರಿಸಿದ "ಇದರಲ್ಲಿ ವ್ಯಸನವೆಂಬುದಾಗಲಿ, ಉದ್ರೇಕವೆಂಬುದಾಗಲೀ ಇಲ್ಲವೇ ಇಲ್ಲ. ವಿಷಯ ತರ್ಕಬದ್ಧ...."

"ಸರಿ ; ಒಪ್ಪಬೇಕಾದದ್ದೆ."

"ನೀವು 'ಸ್ವಾತಂತ್ರ್ಯ' ಎಂಬ ಉದ್ರೇಕದಲ್ಲಿ ಯಾವ ಕಾರಣಕ್ಕಾಗಿ ಸಿಕ್ಕಿಕೊಂಡಿರಿ ? ಈಗ ಉದಾಹರಣೆಗಾಗಿ ನಿಮ್ಮನ್ನೆ ತೆಗೆದುಕೊಳ್ಳುವ....ನಿಮ್ಮ ಸ್ವಾತಂತ್ರ್ಯಕ್ಕೆ ಏನಾದರೂ ಧಕ್ಕೆಯುಂಟಾಗಿದೆಯೆ ?"

"ಇದುವರೆಗಿನ ರೀತಿಯೇ ಬೇರೆ. ಪೂರ್ವಾರ್ಧ ಸ್ತ್ರೀ ಜೀವನದಲ್ಲಿ ಸ್ವರ್ಣಯುಗ !"

"ಈಗ ನಿಮ್ಮ ಮುಂದಿರುವುದು ಉತ್ತರಾರ್ಧ....?"

"ಹೌದು."

ರಾಧೇಶ್ಯಾಂ ಅವಳ ಉತ್ತರಕ್ಕೆ ಮರು ಸವಾಲು ಹಾಕಿದ,

"ಹಾಗಾದರೆ ಯಾವ ಬಗೆಯ ಸ್ವಾತಂತ್ರ್ಯವನ್ನು ನೀವು ನಿರೀಕ್ಷಿಸುವಿರಿ ?"

"ಅಂದರೆ ಅದರಲ್ಲಿ ಬಗೆಬಗೆಯೇನೂ ಇಲ್ಲವಲ್ಲ. 'ಕರ್ತವ್ಯ' ಎಂಬುದು ಕೇವಲ ನಿಮ್ಮ 'ಸೊತ್ತು' ಆಗಬಾರದು. ನಿಮಗೆಷ್ಟು ಆಸ್ಥೆ ಇದೆಯೋ ನಮಗೂ

ಅಷ್ಟೇ ಇದೆ."

"ಈಗಿನ ವಿದ್ಯಾವತಿಯರು ಬಹುಸಂಖ್ಯೆಯಲ್ಲಿ ಕರ್ತವ್ಯ ನಿರ್ವಹಣೆ ಮಾಡುತಿದ್ದಾರೆ. ಆದರೆ, ಅದರಲ್ಲೇ ಉನ್ನತ ಮಟ್ಟದ ಧ್ಯೇಯೋದ್ದೇಶವಿದೆ ಎನ್ನುವಿರಾ?"

"ಕಳೆದವಾರ ಸ್ತ್ರೀ ಸ್ವಾತಂತ್ರ್ಯವನ್ನು ಕುರಿತು ಪ್ರಕಟಸಿದ್ದ ಅತ್ಯಂತ ವಿಚಾರಾತ್ಮಕವಾದ ಒಂದು ಲೇಖನವನ್ನು ನೀವು ಓದಿದಿರಾ? ಅದರಲ್ಲಿ ನಿಮ್ಮ ಪ್ರಶ್ನೆಗೆ ಸಮಂಜಸವಾದ ಉತ್ತರವಿತ್ತು; ಲೇಖಕ ಪಿ. ಸಿ. ರೇ."

"ಹೌದು; ಅದು ಅವನ ಅಭಿಪ್ರಾಯವಾಗಿತ್ತು. ಆದರೆ ಅದನ್ನೇ 'ಉಚಿತ' ಎನ್ನುವುದು ಹೇಗೆ?"

"ಅಂದರೆ....?"

"ನರನಾರಿಯರ ಸಾಮೂಹಿಕ ಕೃಷಿಯನ್ನು ಬಯಸಿದಲ್ಲಿ ಸಾಮಾಜಿಕ ಜೀವನ ಕಲುಷಿತವಾಗಿ ನಮ್ಮ ಸಂಸ್ಕೃತಿ ಹುಟ್ಟಳಿದು ಮನಶ್ಶಾಂತಿ ಧೂಳೀಪಟವಾಗದೆ ಇರುವುದಿಲ್ಲ!"

"ಸರಿ; ನಾಲ್ಕುಗೋಡೆಯೊಳಗೆ ಹೆಣ್ಣನ್ನು ಕೂಡಿಟ್ಟಮಾತ್ರಕ್ಕೆ ನೈತಿಕ ಪತನವಾಗದೆಂದು ನೀವು ದೃಢವಾಗಿ ಹೇಳಬಲ್ಲಿರಾ? ನಿಮಗೆ ಬೇಕಾದುದು ಆತ್ಮವಿಶ್ವಾಸ.. ಅದಿಲ್ಲದಮೇಲೆ ಒಳಗಿದ್ದರೇನು? ಹೊರಗಿದ್ದರೇನು?"

"ಏನೇ ಆದರೂ ಇದು ಕ್ಷೇಮ. ಸ್ತ್ರೀ ಪುರುಷರ ಕೂಟ ಕ್ಷಿಪ್ರ ಅನೈತಿಕ ವ್ಯವಹಾರಕ್ಕೆ ನಾಂದಿ!"

"ಯೋಚಿಸಿ ನೋಡಿ ರಾಧೇಶ್! ಇದೆಲ್ಲಾ ಸ್ವೇಚ್ಛಾಚಾರದಿಂದುಂಟಾಗುವ 'ದೋಷ' ಎನ್ನುವುದಕ್ಕಿಂತ ಆ 'ಸೃಷ್ಟಿಕರ್ತ' ನದು ಎನ್ನಬಹುದು. ಸ್ತ್ರೀ ಪುರುಷರ ಅಂತರ್ಯದಲ್ಲಿ ರಾಗಾನುರಾಗವನ್ನು ತುಂಬಿ ಚಂಚಲ ಚಿತ್ತವನ್ನೂ ಕಾಮುಕ ಬುದ್ಧಿಯನ್ನೂ ಉಂಟುಮಾಡಿದ್ದೇ ಮೂಲಭೂತ ದೋಷ! ಅದಕ್ಕೆ ನೀವೇಕೆ ದುಃಖಿಸಬೇಕು?"

ರಾಧೇಶ್ಯಾಂ ಅತ್ಯಂತ ಆಶ್ಚರ್ಯಚಕಿತನಾಗಿ ಅವಳನ್ನು ನಿಟ್ಟಿಸಿದ. ಅರಳುಗಣ್ಣುಗಳಲ್ಲಿ ಭಾವಜ್ವಾಲೆ ತಾಂಡವಾಡುತಿತ್ತು. ನಸುಗೆಂಪೊರೆದ ಮುಖಬಿಂಬ ಅತ್ಯಂತ ನಯನಾಕರ್ಷಿತವಾಗಿತ್ತು. ತುಟಿಗಳಲ್ಲಿ ಮೃದುಮಂದಹಾಸ ನಲಿಯುತ್ತಿದೆ! ಛೀಃ! ಛೀಃ! ಎಂತಹ ಪರಿಹಾಸ....?

ಅಷ್ಟೇ ಅಲ್ಲ, ನಾಚಿಕೆಗೇಡು ..!

"ಪರವಾಯಿಲ್ಲ! ನೀವು ಬಹಳ ಬುದ್ಧಿವಂತರು! ನಿಮ್ಮನ್ನು...."

"ಈ ಜೀವನವನ್ನು ವಿಶಾಲದೃಷ್ಟಿಯಿಂದ ಒಳಗಣ್ಣು ತೆರೆದು ನೋಡಿ! ಭಗವಂತ ನಿಮಗೆ ಆ ಶಕ್ತಿಯನ್ನು ನೀಡಲಿ!"

ರಾಧೇಶ್ಯಾಂ ನಕ್ಕುಬಿಟ್ಟ.

ವಿಮಲ ನಗುಮುಖದಿಂದ ಮುಂದುವರಿದಳು "ನೀವು ಪ್ರಧಾನ ಅಂಶವಾಗಿ ಭಾವಿಸುತ್ತಿರುವ ನೈತಿಕ ವ್ಯವಹಾರವನ್ನು ಸ್ವತಃ ಪರಿಶೀಲಿಸಿ ಬೆಲೆ ಕಟ್ಟಬೇಕಾದರೆ ಒಳಗಣ್ಣು ತೆರೆಯಲೇ ಬೇಕು! ಯಾವುದನ್ನು ಕಾಪಿಡುವುದಕ್ಕೋಸ್ಕರ ನೀವು ಮಹತ್ತಾದ ವಿಚಾರಗಳನ್ನು ಕೈ ಬಿಡಲಿರುವಿರೋ ಅದರ ಬೆಲೆ ಕರತಲಾಮಲಕವಾಗದ ಹೊರತು ವಾದ ವಿವಾದದಿಂದ ಪ್ರಯೋಜನವಿಲ್ಲ"

"ಕಲಿಯುಗದ ಪ್ರಭಾವ!"

"ಬಿಡಿ ... ನಿಮ್ಮದು ತೀರಾ ಸಂಕುಚಿತ ಮನೋಭಾವ!"

ರಾಧೇಶ್ಯಾಂ ಅತ್ಯಂತ ನಿರಾಸೆಯಿಂದ ಬಿಸಿಯುಸಿರು ಬಿಟ್ಟ. ಹೃದಯ ಕುಂಡದಲ್ಲಿ ಮೂಡಿದ ಆಸೆಯ ಮೊಳಕೆ ತಾರ್ಕಿಕ ಬಿಸಿಯಿಂದ ಬೆಂಕಿಯಜ್ವಾಲೆ ತಾಕಿದಂತೆ ಬಾಡಿ ಮುರುಟಿಕೊಳ್ಳುತಿತ್ತು. ತನ್ನನ್ನು ತಾನು ಸಾಹಸಪೂರ್ವಕವಾಗಿ ಸಮರ್ಥಿಸಿಕೊಳ್ಳುವಾಗಲೂ ಭಾವನಾತರಂಗಗಳಲ್ಲಿ ಕೊಚ್ಚಿ ಹೋಗುತ್ತಿರುವಂತೆ ಭಾಸವಾಯಿತು. ತಕವಿತರ್ಕಗಳ ಪ್ರಾಕಾರ ಸಮುದಾಯನ್ನು ದಾಟಿ ಶುಷ್ಕ ಅಂತರಂಗಕ್ಕೆ ಸ್ವಾಭಿಮಾನದಿಂದ ತಣಿವನ್ನು ನೀಡುವ ಅಭಿಲಾಷೆಯಿಂದ ಕೆಲವೊಮ್ಮೆ ಸುಮ್ಮನಾದರೂ ಉದ್ರೇಕಿತ ಮೇಧಾಶಕ್ತಿ ನದಿಯ ಪ್ರವಾಹದಂತೆ ಉಕ್ಕಿಬರುತ್ತದೆ. ಯಾವರೀತಿ ಭಿನ್ನಭಾವವನ್ನು ಬಗೆಹರಿಸಬೇಕೋ ಅರ್ಥವಾಗಲಿಲ್ಲ. ಸೋಲನ್ನು ಒಪ್ಪಿಕೊಳ್ಳುವುದೂ ಸಹ ಆತನ ಜಾಯಮಾನದಲ್ಲಿ ನಿಷಿದ್ಧ. ಆದರೂ ಭಾವಾನುಭಾವಗಳ ಸಂಘರ್ಷಣೆಯಲ್ಲಿ ಸಿಕ್ಕಿ ತುಸು ಚಿಂತಿತನಾಗಿ ಉತ್ತರವನ್ನು ಅರಸುವುದರೊಳಗಾಗಿ ವಿಮಲ ಮಾತು ಮುಂದುವರಿಸಿದಳು "ನೀವಷ್ಟು ಯೋಚನೆಗೊಳಗಾಗುವ ಕಾರಣವಿಲ್ಲ. ಪ್ರಾಚೀನ ಭಾರತದಲ್ಲೇ ಸ್ತ್ರೀ ಮೇಧಾಶಕ್ತಿ ಪ್ರಕಾಶಿತವಾಗಿತ್ತು, ಎಂದರೆ ಒಪ್ಪಿಕೊಳ್ಳುವಿರಷ್ಟೆ?"

ಅದೇ ಸಮಯದಲ್ಲಿ ಅಲ್ಲಿಗೆ ಹಠಾತ್ತನೆ ಆಗಮಿಸಿದ ಹೇಮಾಂಗಿನಿ ಮುಖಭಾವದಲ್ಲಿ ಹಾಸ್ಯರಸವನ್ನು ಸೂಸಿ ಅನುನಯದಿಂದ ನುಡಿದಳು,

"ಅಷ್ಟೇ ಅಲ್ಲ, ರಾಧೇಶ್ಯಾಂ! ಈ ಯುಗಧರ್ಮಕ್ಕೆ, ಈ ಜೀವನ ಕ್ರಾಂತಿಗೆ ವಿನೂತನ ಅಧ್ಯಾಯವನ್ನು ಸಂಸ್ಥಾಪಿಸುವ ಸಲುವಾಗಿ ಪೀಠಿಕೆ ಹಾಕಲು ನೀವೇ ನ್ಯಾಯವಾದಿಗಳಾಗಿ ಮೊದಲು ಸಹಿ ಹಾಕಿರಿ!"

ಮೂವರ ತುಟಿಗಳಲ್ಲೂ ನಗುವಿನ ಚಿಲುಮೆ ಉಕ್ಕಿ ಹರಿಯಿತು.

"ಇದೀಗ ಸರಿ....ಅದಕ್ಕೇ ನಿಮ್ಮಿಬ್ಬರ ಗೆಳೆತನ ಇಷ್ಟೊಂದು ಸಮಂಜಸ ವಾಗಿದೆ."

ರಾಧೇಶ್ಯಾಂ ಆಶ್ಚರ್ಯಾವೇಗದಿಂದ ನುಡಿದರೂ ತುಟಿಗಳಲ್ಲಿ ಎಳೆನಗು ವನ್ನು ಹರಿಹಾಯಿಸಿದ.

"ಹೌದು. ಹೃದಯ ಪ್ರದೀಪಗಳೊಂದಾದರೇನೇ ಆತ್ಮೀಯತೆ" ಎಂದ ಹೇಮಾಂಗಿನಿ ನಗುನಗುತ್ತ ಮುಂದುವರಿದಳು "ನೀವು ವಿವಾಹವಾಗಲಿರು ವಿರಿ. ನಿಮ್ಮ ಅರ್ಧಾಂಗಿಯನ್ನು ಅರ್ಧಾಂಶವೆಂದು ಗಣಿಸಿ ಹೃತ್ಪೂರ್ವಕವಾಗಿ ಪ್ರೀತಿಸಿರಿ. ಪ್ರೇಮರಹಿತ ವೈವಾಹಿಕ ಜೀವನ ವ್ಯರ್ಥ.... ಈ ನವಯುಗದಲ್ಲಿ ನವಜೀವನಯಜ್ಞಕ್ಕೆ ಗುರುಗಳಾಗುವ ಅರ್ಹತೆಯನ್ನು ಎಲ್ಲಾ ವಿದ್ಯಾ ವಂತರೂ ಪಡೆದಿರುವುದಿಲ್ಲ ಎಂಬುದು ನಮಗೆ ಮಾತ್ರವಲ್ಲ, ನಿಮಗೂ ತಿಳಿ ದಿದೆ. ಅದೃಷ್ಟವಶಾತ್ ಪ್ರೇಮಾಮೃತ ಕಲಶ ದೊರೆತಲ್ಲಿ ಆಗ ವಿವಾಹ ಸಂಸ್ಕಾರದ ಆವಶ್ಯಕತೆಯೂ ಇರುವುದಿಲ್ಲ; ಇದು ನನ್ನ ದೃಢವಾದ ಅಭಿ ಪ್ರಾಯ! ಯೋಚಿಸಿನೋಡಿ"

ರಾಧೇಶ್ಯಾಂ ಜೋರಾಗಿ ನಕ್ಕು "ನಿಮ್ಮ ವ್ಯಾಖ್ಯಾನ ರಸವತ್ತಾಗಿದೆ." ಎಂದ. ಲಘು ಹಾಸ್ಯ ಪ್ರವೃತ್ತಿ ಮುಖಬಿಂಬದಲ್ಲಿ ಪ್ರಭಾಸವಾಯಿತು. "ಹಾಗಾದರೆ.... ನಿಮ್ಮ ಭಾಗಕ್ಕೆ ದೈವವಶಾತ್ ಪ್ರೇಮಾಮೃತ ಲಭಿಸಲಿ ಎಂದು ಹಾರೈಸುವೆ. ಅದರಿಂದ ವಿವಾಹ ಸಂಸ್ಕಾರದ ಖರ್ಚಿನ ಉಳಿತಾಯ ವಾಗುವುದು ಮಾತ್ರವಲ್ಲ. ನಿಮ್ಮಿಂದ ನವಜೀವನ ಕಲ್ಪಕ್ಕೆ ಅಡಿಗಲ್ಲು ಇಡಿ ಸುವುದೂ ಸಹ ಸಾಧ್ಯವಾಗುತ್ತದೆ!"

ಹೇಮಾಂಗಿನಿ ಅತ್ಯಂತ ಲಜ್ಜಾಹೀನತೆಯಿಂದ ಸಾವಧಾನಪೂರ್ವಕ ವಾಗಿ ನುಡಿದಳು "ನೋಡೋಣ.... ಯಾರಿಗೆ ಗೊತ್ತು? ಆ ಕಾಲ ಬಂದರೂ ಬರಬಹುದು!"

"ಆ ಧೈರ್ಯವಿಲ್ಲದೆ ಅವಳು ವ್ಯಾಖ್ಯಾನ ಹೂಡುವುದೇ ಇಲ್ಲ.... ಅವಳು

ನಮ್ಮಂತೆ ಬರೀ ಮಾತಾಳಿಯಲ್ಲ."

ರಾಧೇಶ್ಯಾಂ ಅನುಮಾನಿಸುತ್ತ ನುಡಿದ "ಬಹುಶಃ ಹೇಮಾಂಗಿನಿಯ ಸಹವಾಸದಿಂದಲೇ ನೀವು....?"

"ಅಲ್ಲ! ನೀವು ತಪ್ಪು ತಿಳಿದಿದ್ದೀರಿ ರಾಧೇಶ್ಯಾಂ! ಬಿಮಲೆಯ ಸಹವಾಸ ದಿಂದಲೇ ನಾನು !"

ಮೂವರ ಮುಖ ಮಂಡಲಗಳೂ ಅರಳಿ ಹೂ ನಗೆಯನ್ನು ಚೆಲ್ಲಿದುವು.

ರಾಧೇಶ್ಯಾಂ ಬೆರಗಾದಂತೆ ನಿಟ್ಟಿಸಿ ನೋಡಿದ. ಹೃದಯ ಕಾಂತಾರದಲ್ಲಿ ಆನೆಗಳ ದಂಡು ಹೊಕ್ಕಂತಾಯಿತು. ಅವನ ನಸು ಕಳೆಗುಂದಿದ ಮುಖವನ್ನು ನೋಡುತ್ತ ಹೇಮಾಂಗಿನಿ ಹೇಳಿದಳು,

"ರಾಯರೇ! ಏನೋ ಒಂದು ರೀತಿಯಲ್ಲಿ ಪೆಚ್ಚಾದಿರಲ್ಲ ಏಕೆ? ನಿಮ್ಮ ನ್ಯಾಯಶಾಸ್ತ್ರ ಇಂತಹ ಸಂದರ್ಭದಲ್ಲಿ ಏನೂ ಉಪಯೋಗಕ್ಕೆ ಬರುವುದಿಲ್ಲವೇ ಹೇಗೆ?"

ಒಡನೆ ನಗುವಿನ ಲಹರಿ ಉಕ್ಕಿಹರಿಯಿತು.

ಅವನು ಮೇಜನ್ನು ಕುಟ್ಟಿ ಬಿತ್ತರಿಸಿದ,

"ನ್ಯಾಯಶಾಸ್ತ್ರದ ಸಾಧನೆಯೆಲ್ಲಾ ನ್ಯಾಯಾಲಯದಲ್ಲಿ. ಇಲ್ಲಿ ಮುಗ್ಧ ಮಾನಿನಿಯರ ಬಳಿ ಅದಾದರೂ ಏನು ಸಹಾಯ ಮಾಡೀತು?"

"ಪರವಾಯಿಲ್ಲ! ನಿಮ್ಮ ನ್ಯಾಯಶಾಸ್ತ್ರ ಕಲಿಸುವುದೇ ಇಂತಹ ಜಾರಿ ಕೆಯ ಚಮತ್ಕಾರ!"

"ಏನಾದರೂ ಅಂದುಕೊಳ್ಳಿ."

"ನಿಮ್ಮಲ್ಲಿ ಒಂದು ವಿಚಾರ ಪುನರ್ವಿಮರ್ಶೆಯಾಗಬೇಕಾಗಿದೆ. ನಿಮ್ಮ ಪರಿಚಯವಾಗಿ ಕೆಲವೇ ಗಂಟೆಗಳಾದರೂ ನಿರ್ಲಜ್ಜೆಯಿಂದ ನಿಮ್ಮ ಮುಂದೆ ಇಡಬಯಸುವೆ, ದಯವಿಟ್ಟು ಕ್ಷಮಿಸಿರಿ"

ರಾಧೇಶ್ಯಾಂ ಆಶ್ಚರ್ಯಯುಕ್ತ ದೃಷ್ಟಿಯಿಂದ ನೋಡುತ್ತ–"ಪರವಾಯಿಲ್ಲ....ಹೇಳಿ!"

"ನೀವು ನಿಜವಾಗಿಯೂ ನಿಮ್ಮ ನ್ಯಾಯಶಾಸ್ತ್ರದ ಮೂಲಕ ಸತ್ಯಾರ್ಥವನ್ನು ಕಂಡುಕೊಳ್ಳಬಲ್ಲಿರಾ?"

"ಓ....ನೀವೇನೆಂದುಕೊಂಡಿದ್ದೀರಿ? ನಮ್ಮ ಜಯಶೀಲತೆಗೆ ಏನು

ಅರ್ಥ....?"

ಸವಾಲು ಹಾಕಿದಾಗ ನಿಶ್ಚಲನಯನಗಳ ದೀಪ್ತಿ ಉಜ್ವಲವಾಗಿ ಬೆಳಗಿತು.

ಹೇಮಾಂಗಿನಿಯು ಆತನ ಮುಖಭಾವವನ್ನವಲೋಕಿಸಿ, ಅತ್ಯಂತ ದೃಢವಾದ ಸ್ವರದಲ್ಲಿ ಉತ್ತರಿಸುವ ಹಕ್ಕನ್ನು ಸ್ನೇಹ ಸಲಿಗೆಯಿಂದ ತಾನೇ ಚಲಾಯಿಸಿದಳು "ಬಿಡಿ...ಬಿಡಿ! ನಂಜಿನ ಮುದ್ದಿಗೆ ಚಿನ್ನದ ಲೇಪ!"

ಮೂವರ ಮುಖದಲ್ಲೂ ಎಳೆನಗುವಿನ ಸರಳ ಸಲಿಲ ಹರಿದಾಡಿತು.

೨೦

... ಮಧುಮಾಸದ ಪಲ್ಲವರಾಜಿಯು ಪುಷ್ಪಸಾಬಾರದಲ್ಲಿ ಮದಾಂತ ಭ್ರಮರಾವಳಿಗಳ ಝೇಂಕಾರ!

....ಎತ್ತರವಾದ ವೃಕ್ಷಶಿಖೆಗಳ ಮೇಲೆ ಹಸುರುಣ್ಣಲು ಹರಿದಂತೆ ಹರಡಿದ ಪೀತಾಭ ರಶ್ಮಿಗಳ ಸುವರ್ಣಜಾಲ!

....ಉನ್ಮೀಲ ನಭೋಮಂಡಲವು ವಿಚಿತ್ರಕಾಂತಿಯಿಂದ ಉದ್ದೀಪ್ತವಾಗಿ ಚೇತೋಹರಿಯಾಗಿತ್ತು.

ಅಮರನಾಥನ ನಡಿಗೆ ಸಾಗುತ್ತಲೇ ಇಲ್ಲ. ಅತೀವ ಆತ್ಮವಿಸ್ಮೃತಿಯಲ್ಲೂ ದ್ವಿಧೀಭಾವವಿಭಾವಗಳ ಸಂಘರ್ಷಣೆ ನಡೆಯುತ್ತಲಿತ್ತು. ಹೆಜ್ಜೆ ಹೆಜ್ಜೆಯೂ ಒಂದೊಂದು ದಿಕ್ಕಿಗೆ ಎಳೆಯುತ್ತಿರುವಂತೆ ತೋರುತಿತ್ತು. ಹೇಗೆ, ಯಾವರೀತಿ ಈ ಜೀವನವನ್ನು ನಿರ್ಣಯಿಸಬೇಕೋ ಅರ್ಥವಾಗುತ್ತಿಲ್ಲ ಎಂದು ಪರಿತಾಪದ ಬಿಸಿಯುಸಿರು ಬಿಟ್ಟ. ಎಂ. ಎ., ಮುಗಿಸಿ ಕಾಲೇಜಿನ ಅಧ್ಯಾಪಕನಾಗಿ ಕೆಲಸ ನಿರ್ವಹಿಸಿ ಆಗಲೇ ತಿಂಗಳೆರಡು ಸಂದು ಹೋಗಿವೆ. ನಿರ್ಮಲೆಯ ಉತ್ಸಾಹಭರಿತ ಕರ್ತವ್ಯತತ್ಪರತೆ ಅಂತರಂಗಕ್ಕೆ ಮುಟ್ಟುತ್ತದೆ.

ಆದರೆ....!

ಯಾವ ಕಡೆ ತಿರುಗಿದರೂ ಆಕಡೆ ಸೆಳೆದುಕೊಳ್ಳುವ ನಯನಾಕರ್ಷಕವಾದ ಜಗತ್ತು! ನಿರ್ಜಲ ನದೀಪಾತ್ರದಲ್ಲಿ ಚಲಿಸುವ ಮೀನಿನಂತೆ ಮಿಲಿಮಿಲಿಗೊಳ್ಳುವ ಮನಸ್ಸು! ಈ ಜೀವನವನ್ನು ಯಾವ ರೀತಿ ನಿರ್ಣಯಿಸಬೇಕೋ ಒಗೆ ಹರಿಯದೆ ಹೃದಯ-ಮಸ್ತಿಷ್ಕಗಳು ಮಂಕಾಗಿ ಏನೋ ಒಂದು

ರೀತಿಯ ಔದ್ಧತ್ಯಭಾವ ತನಗರಿಯದಂತೆಯೇ ಮೊಳೆಯಹತ್ತಿತು. ಸುದೀರ್ಘಕಾಲದ ಅನುರಾಗ ಸಂಸರ್ಗ ಯಾವ ರೀತಿ ಬಾಧಿಸುತಿತ್ತೋ ಹೇಳುವುದು ಕಷ್ಟ. ಒಮ್ಮಿಂದೊಮ್ಮೆಲೇ ಯಾವುದನ್ನೂ ನಿರ್ಣಯಿಸಲಾರೆ ಎಂಬ ನಿರ್ಧಾರಕ್ಕೆ ಶರಣಾದ.

ಹಿಡಿದ ಹಾದಿ ಅರ್ಧ ಕಳೆದಿರಬಹುದು. ಅನಿರೀಕ್ಷಿತವಾಗಿ ನಿರ್ಮಲ ಕಾಣಿಸಿಕೊಂಡಳು. ಬೆಚ್ಚಿಬಿದ್ದು ಯಾವುದೋ ಅಪರಾಧವೆಸಗಿದ ಅಪರಾಧಿಯಂತೆ ಎದೆಯಳುಕಿದರೂ ಸಮಯೋಚಿತವಾಗಿ ಸ್ವಾಗತ ಬಯಸುತ್ತ ಪ್ರಶ್ನಿಸಿದ,

"ಇದೇನು? ಇಂದು ಇಷ್ಟು ತಡವಾಗಿ ಹೊರಟದ್ದೀರಿ?"

"ಟ್ಯೂಶರ್ ಇರಲಿಲ್ಲ."

"ನಿಮಗೆ ಖಂಡಿತವಾಗಿಯೂ ಎರಡು ತಾಸು ವಿಶ್ರಾಂತಿಯ ಅಗತ್ಯವಿತ್ತು."

"........"

"ತನ್ನಂತರಂಗವನ್ನೇ ಪರೀಕ್ಷಿಸಿಕೊಂಡಂತೆ ಉಪಾಧ್ಯಾಯ ಭಾರವಾದ ದನಿಯಲ್ಲಿ ನುಡಿದ.

"ನೀವು ಪಡೆದುಕೊಂಡ ಶಿಕ್ಷೆ-ದೀಕ್ಷೆ-ಸಂಸ್ಕಾರ ಒಂದಕ್ಕೊಂದು ಪೂರಕವಾಗಿರುವುದನ್ನು ನೋಡಿದರೆ ಮುಂದೆ ನಮ್ಮಂತಹವರನ್ನು ಭಾಗಸ್ಥರನ್ನಾಗಿ ಮಾಡಿಕೊಳ್ಳುವುದರಿಂದ ನಿಮ್ಮ ಸರ್ವಾಂಗ ಸಾಧನೆ ಕುಂಠಿತವಾಗುವುದೇನೋ ಎನಿಸುತ್ತದೆ."

"ಅಂದರೆ....?

"ಎಲ್ಲರಿಗೂ ಅವರವರ ಶಕ್ತಿ ಸಾಮರ್ಥ್ಯಗಳಿರಬಹುದು. ಆದರೂ ನಿಮ್ಮ ಸಾಮರ್ಥ್ಯದ ರೀತಿಯೇ ಬೇರೆ."

ನಿರ್ಮಲ ಮಾತಾಡದೆ ಮನವನ್ನು ಗತಕಾಲಕ್ಕೆ ಹರಿಯಬಿಟ್ಟಳು. ಎರಡು ವರ್ಷಗಳ ಕಾಲ ತನ್ನ ಪರಾಗದಲ್ಲಿ ಅರ್ಧದಷ್ಟು ಆತನಿಗೆ ಸಲ್ಲಿಸಿ ಎಂ. ಎ., ಓದಲು ನೀಡಿದ ಸಹಾಯ-ಸಹಕಾರ ಸಾಮಾನ್ಯವಲ್ಲ, ಸ್ಮರಣೆಯ ಹಾದಿಯಲ್ಲಿ ಮುಂದಿನ ಹೊಣೆಗಾರಿಕೆಯ ಅಧಿಕ ಭಾರ ಸುಳಿದಳಿಯಿತು. ಏನೂ ಹೇಳದೆ ತಲೆಬಾಗಿ ಹೆಜ್ಜೆ ಹಾಕಿದಳು.

ಅಮರನಾಥ ಯಾವುದೋ ಗಹನವಾದ ವಿಚಾರದಲ್ಲಿ ತೀವ್ರ ಮುಳುಗಿ ಉಚಿತಾನುಚಿತಗಳನ್ನು ಕುರಿತು ತನ್ನಲ್ಲೇ ಆಳವಾಗಿ ತರ್ಕಿಸುವಂತೆ ಮೈಮರೆತ. ಭಾವನಾಭಂಗಿಯಲ್ಲಿ ಚೇತನ ಮುನ್ನಡೆಸುತಿತ್ತು. ಬೀಸುಗಾಳಿಯನ್ನು ಇಬ್ಭಾಗವಾಗಿ ಭೇದಿಸಿ ಮುಂದುವರಿಯುವ ಶರೀರ ವೈಖರಿಯನ್ನು ಒಂದೆರಡು ಕ್ಷಣ ನಿಟ್ಟಿಸಿದಳು ನಿರ್ಮಲ. ಆ ದರ್ಶನ ಮಾತ್ರದಿಂದ ದೇಹದಾದ್ಯಂತ ಪುಳಕಿತವಾಯಿತು. ಆದರೂ ಅದನ್ನು ತೋರಗೊಡದಂತೆ ತನ್ನನ್ನು ತಾನೇ ಸಾವರಿಸಿಕೊಂಡಳು. ಹೃದಯ ಮೃದಂಗ ವ್ಯಾಪ್ತಿಗೆ ತುಸು ಮೀರಿ ಮಿಡಿಯ ಹತ್ತಿತು. ಮನೋದೌರ್ಬಲ್ಯವನ್ನು ತೋರಗೊಡದಿರಲು ಮೌನಧಾರಣೆ ಮಾಡಿದಳು. ಹತ್ತು ಹೆಜ್ಜೆ ಸಾಗಿದನಂತರ ಅಮರನಾಥ ತಾನೇ ಮೌನ ಮುರಿದ,

"ನಿಮ್ಮ ಸಹಾಯವನ್ನು ಕೈತುಂಬ ಪಡೆದಿರುವೆ. ದೈವವಶಾತ್ ಪ್ರಥಮದರ್ಜೆಯಲ್ಲಿ ತೇರ್ಗಡೆಯಾದೆ. ನಿಮ್ಮ ಅದೃಷ್ಟ ನನ್ನನ್ನು ಬೆಂಬಲಿಸಿತು. ನಾನು ಉದ್ಧಾರವಾದೆ. ಅದನ್ನು ಇನ್ನೊಂದು ರೀತಿಯಲ್ಲಿ ಅರ್ಥೈಸುವುದಾದರೆ....ಅದು ನಿಮ್ಮ ತಪೋಬಲ!"

"ಹಾಗೆಂದರೆ ಸ್ವಪ್ರಯತ್ನ ಏನೇನೂ ಇಲ್ಲವೆಂದಾಯಿತು." ಮುಗುಳು ನಕ್ಕಳು ನಿರ್ಮಲ.

"ಪ್ರಯತ್ನ ನನ್ನದಿರಬಹುದು. ಸಿದ್ಧಿ ಪಡೆಯುವುದು ತಪೋಬಲದಿಂದ."

ನುಡಿ ಅಂತರಂಗವನ್ನು ಪ್ರೇಮಾಮೃತದಂತೆ ಮುಟ್ಟಿದಾಗ ಅಕ್ಷರ ಅಕ್ಷರವೂ ಆತನ ಮನಃಸ್ಥಿತಿಯನ್ನು ಪ್ರತಿಪಾದಿಸುವಂತೆ ಹೊಮ್ಮಿದುವು. ಪ್ರೇಮಮುಗ್ಧ ಚಿತ್ತ ಅತ್ಯಂತ ಪುಳಕಿತವಾದರೂ ಭವಿಷ್ಯದ ವಿಚಾರವಾಗಿ ಪ್ರಸ್ತಾಪಿಸಲು ಎದೆ ಅಳುಕಿತು. ಏನೋ ಒಂದು ರೀತಿಯಲ್ಲಿ ಸಹಜಭಾವದಿಂದನುಡಿದಳು,

"ದೈವಬಲ....ಅಷ್ಟೆ."

ಅಮರನಾಥ ಆ ಮಾತಿಗೆ ಉತ್ತರಿಸಲಿಲ್ಲ. ಸ್ವಲ್ಪಹೊತ್ತು ಯಾವುದೋ ವಿಚಾರದಲ್ಲಿ ನಿಮಗ್ನನಾಗಿದ್ದು ಅನಂತರ ಕೇಳಿದ,

"ವಿಮಲೆಯ ಮದುವೆಯ ವಿಚಾರವೇನಾಯಿತು ?

"ಇನ್ನೂ ಇತ್ಯರ್ಥವಾಗಿಲ್ಲ."

"ಹಾಗಾದರೆ ಈ ವರ್ಷ ನಡೆಯುವುದಿಲ್ಲವೇ ?"

"ಗೊತ್ತಿಲ್ಲ...."

ಆ ವೇಳೆಗೆ ಇಬ್ಬರೂ ಕಾನ್ವೆಂಟಿನ ಆವರಣಕ್ಕೆ ಹೆಜ್ಜೆ ಇಟ್ಟಾಗಿತ್ತು. ಹೂದೋಟದ ಹಾದಿಯಲ್ಲಿ ಉಲ್ಲಾಸ-ಉತ್ಸಾಹಗಳು ಆಗಲೇ ಹರಿದಾಡುತ್ತಿವೆ. ಮಾತಿನ ಮರ್ಮರ ಕೇಳಿಸುತ್ತಿದೆ. ಮಾನಸಿಕ ದೌರ್ಬಲ್ಯ-ಪರಿತಾಪಗಳು ನೂರುಮಾರು ಹಾರಿಬೀಳುವಷ್ಟು ದೃಶ್ಯಮಾನ ಸೌಂದರ್ಯಧಾರೆಯ ಅಂಶ ಎಲ್ಲೆಲ್ಲೂ ಪ್ರಧಾನವಾಗಿತ್ತು. ಒಮ್ಮಿಂದೊಮ್ಮೆಲೇ ಹೃದಯಕುಂಡಲಿನಿಗೆ ವಿದ್ಯುತ್ ಪ್ರವಾಹ ಹರಿದಷ್ಟು ನವೀನಶಕ್ತಿಯಿಂದ ದೇಹದ ಕಣಕಣವೂ ಉತ್ತೇಜಿತವಾದುವು. ಅಲ್ಲಿಂದ ಇಬ್ಬರ ಹಾದಿಯೂ ಕವಲೊಡೆಯಿತು. ಅವನು ಕಾಲೇಜಿನ ಕಡೆ ಹೊರಟ. ನಿರ್ಮಲ ಶಾಲೆಯ ಹಾದಿ ಹಿಡಿದಳು. ಆ ಬೃಹದ್ ಮೈದಾನದಲ್ಲಿ ಉದ್ದಗಲಕ್ಕೂ ಹಬ್ಬಿದ ವಿದ್ಯಾಮಂದಿರದಲ್ಲಿ ಭಾಗವಿಭಾಗಗಳ ಅಂತರಂಗವನ್ನು ನುರಿತವರು ಮಾತ್ರ ಬಲ್ಲರೇನೋ....

ಮಕ್ಕಳ ಗುಂಪಿನಲ್ಲಿ ಕಾಣಿಸುತಿದ್ದ ಧಾರುಣಿ ಕಣ್ಣಿಗೆ ಬೀಳಲಿಲ್ಲವಾದುರಿಂದ ನಿರ್ಮಲ ಅವಳ ಗೆಳತಿಯನ್ನು ಕೇಳಿದಳು, "ಎಲ್ಲಮ್ಮಾ ಧಾರುಣಿ ?"

"ಅವಳಿಗೆ ಜ್ವರ ಬಂದಿದೆ!"

"ಡಾಕ್ಟರು ಬಂದಿದ್ದರೇ ?"

"ಹೌದು.... ಔಷಧಿ ಕೊಟ್ಟಿದ್ದಾರೆ."

ಮರುದಿನವೂ ಅವಳು ಶಾಲೆಗೆ ಬರಲಿಲ್ಲವಾದುದರಿಂದ ನೋಡಿಕೊಂಡು ಬರಲು ಹೋದಳು ನಿರ್ಮಲ. ಮುಚ್ಚಿದ ಕದವನ್ನು ತಳ್ಳಿ ಒಳಗಡೆ ಪದಾರ್ಪಣೆ ಮಾಡಿದಾಗ ಅವಳ ನಿಶ್ಚಲನಯನಗಳು ಇತ್ತಲೇ ನಿಟ್ಟಿಸುತಿದ್ದುವು. ನಿರ್ಮಲ ಬಳಿಯಲ್ಲಿ ಕುಳಿತುಕೊಂಡಳು. ಜ್ವರದ ಕಾವಿನಿಂದ ಮೈ ಸುಡುತಿತ್ತು. ದೇಹದಾದ್ಯಂತ ಅವಿರಳವಾಗಿ ಸಿಡುಬಿನ ಗುಳ್ಳೆಗಳು ಕಾಣಿಸಿಕೊಂಡಿವೆ. ಬೇರೆ ಮಕ್ಕಳಿಂದ ಆಗಲೇ ಪ್ರತ್ಯೇಕಿಸಲ್ಪಟ್ಟಿದ್ದು ಏಕಾಂಗಿಯಾಗಿ ಮಲಗಿದ್ದಾಳೆ. ನೋಡಿದೊಡನೆಯೇ ಅವಳ ಕಣ್ಣುಗಳಲ್ಲಿ ಸಣ್ಣಗೆ ಬೆಳ್ಳಿಯ ಗೆರೆಯಂತೆ ನೀರಾಡಿತು. ತಲೆಯನ್ನು ಪ್ರೀತಿಯಿಂದ ನೇವರಿಸುತ್ತ ಕೇಳಿದಳು ನಿರ್ಮಲ "ಏಕಮ್ಮಾ ? ತುಂಬ ಬೇಸರವೇ ?"

"ನನಗೆ 'ಸಿಡುಬು' ಬಂದಿದೆಯಂತೆ; ಮನೆಗೆ ಕಳುಹಿಸುತ್ತಾರಂತೆ,

ನಾನು ಇಲ್ಲೇ ಇರುವೆ ಮಿಸ್ !" ಎಳೆದನಿ ಗೋಗರೆಯಿತು.

"ನೋಡೋಣ, ಡಾಕ್ಟರು ಏನು ಹೇಳುತ್ತಾರೋ."

"ಏನಾದರೂ ಮಾಡಿ... ಮಿಸ್ !.... ನಾನು ಇಲ್ಲೇ ಇರುವೆ!"

ಹಿಂದೆಯೇ ಆಗಮಿಸಿದ ನರ್ಸ್ ಪಲ್ಲಂಕದ ಬಳಿ ನಿಂತಳು. ಅವಳ ಮುಖವನ್ನು ನಿಟ್ಟಿಸುತ್ತ ನಿರ್ಮಲ ಅತೀವ ಆಸಕ್ತಿಯಿಂದ ಕೇಳಿದಳು "ಡಾಕ್ಟರು ನೋಡಿದ್ದಾರೆಯೇ ?"

"ಹೌದು....ಮೈಮೇಲೆ ಇಂದು ಸಿಡುಬು ಕಾಣಿಸಿಕೊಂಡಿದೆ. ಇನ್ನು ಇಲ್ಲಿಟ್ಟು ಕೊಳ್ಳುವಂತಿಲ್ಲ. ಮನೆಯವರು ಬಂದೊಡನೆಯೇ ಕಳುಹಿಸುವ ಏರ್ಪಾಡು ಮಾಡಲಾಗಿದೆ. ಆದರೆ, ಅದು ಅವಳಿಗಿಷ್ಟವೇ ಇಲ್ಲ."

"ಪಾಪ!" ಎಂದ ನಿರ್ಮಲ ಹಣೆಯ ಮೇಲೆ ಕೈಯಿಟ್ಟು ನೋಟವನ್ನು ಅತ್ತಲೇ ಹೊರಳಿಸಿದಳು. ಕಣ್ಣುಗಳಲ್ಲಿ ಜೀವಜ್ಯೋತಿ ಮಿನುಗುತಿತ್ತು. ಜ್ವರದ ಕಾವಿನಿಂದ ಕಾಲ್ಗೆನ್ನೆಗಳು ಕೆಂಪು ತಳೆದಿದ್ದುವು. ಸ್ನಿಗ್ಧಹಸ್ತವನ್ನು ಹಣೆಯಿಂದ ಕದಲಿಸದೆ ಕರುಣಕಂಠದಿಂದ ಕೇಳಿದಳು ನಿರ್ಮಲ,

"ಮಗೂ....! ಧಾರುಣಿ, ಕಣ್ಣಲ್ಲಿ ನೀರೇಕೆ ?"

"ಏನೂ ಇಲ್ಲ.... ಸುಮ್ಮನೆ...." ಮುಂದೆ ಏನೋ ಹೇಳಲು ಪ್ರಯತ್ನಿಸಿ ಮಾತು ಹೊರಡದುದರಿಂದ ಸುಮ್ಮನಾದಳು ಧಾರುಣಿ; ಅವ್ಯದೋ ಕಂಡರಿಯದ ಕೀಟ ಮನಸವನ್ನು ಕೊರೆಯುತ್ತಿರುವಂತೆ ಮುಖಬಿಂಬದಲ್ಲಿ ಅಪ್ರಸನ್ನತೆ ನೆಲೆಸಿತ್ತು.

"ಏಕೆ, ಏನೋ ಒಂದು ರೀತಿಯಾಗಿದ್ದಿ ?"

"........"

"ರಾತ್ರಿ ನಿದ್ದೆ ಬಂದಿತ್ತೇ? "

"ಸರಿಯಾಗಿ ಮಾಡಿಲ್ಲ," ನರ್ಸ್ ಉತ್ತರಿಸಿದಳು.

"ಯೋಚಿಸಬೇಡ; ಒಂದೆರಡು ದಿನ ಮಾತ್ರ ಅನಂತರ ಸರಿಹೋಗುತ್ತಿ"

ಧಾರುಣಿ ಮೆಲುದನಿಯಲ್ಲಿ ನುಡಿದಳು "ನಾನು ಇಲ್ಲೇ ಇರುವೆ ಮಿಸ್ ! ಹೊರಗಡೆ ಎಲ್ಲೂ ಹೋಗುವುದಿಲ್ಲ !"

"ಏಕಮ್ಮಾ ?" ಭಾಷ್ಪಗದ್ಗದ ಕಂಠದಿಂದ ಪ್ರಶ್ನೆ ಹೊರಬಿತ್ತು.

"ನನಗಿಷ್ಟವಿಲ್ಲ." ಎನ್ನುತ್ತ ಮೆಲ್ಲನೆ ತಲೆಯಾಡಿಸಿದಳು ಧಾರುಣಿ.

"ಬೇರೆ ಮಕ್ಕಳಿಗೆ ಹರಡುತ್ತಾದುದರಿಂದ ಇಲ್ಲಿ ಇಟ್ಟುಕೊಳ್ಳುವಂತಿಲ್ಲ. ವಾಸಿಯಾದನಂತರ ನೀನು ಇಲ್ಲಿಗೇ ಬಂದುಬಿಡು....ಆಗಬಹುದೇ ?"

ಧಾರುಣಿ ಮಾತಾಡಲಿಲ್ಲ. ಕಣ್ಣುಗಳಲ್ಲಿ ನೀರಾಡುತಿತ್ತು. ಮೌನ ಶೋಕದಿಂದ ಮುಖಬಿಂಬ ರಂಗು ತಳೆಯಿತು.

"ಧಾರುಣೀ ! ಚಿಂತೆ ಮಾಡಬೇಡ."

"ನಾನು ಬೇರೆ ಮಕ್ಕಳನ್ನು ಮುಟ್ಟಿಸಿಕೊಳ್ಳುವುದಿಲ್ಲ.... ಕೋಣೆ ಯೊಳಗೇ ಇರುವೆ ಮಿಸ್ !"

ಕರುಳಿರಿಯುವ ಆ ಅಮಾಯಕ ದನಿ ಎದೆಯಾಳದಿಂದ ಹರಿದು ಬಂದಿತು. ನಿರ್ಮಲಳಿಗೆ ಏನು ಹೇಳಬೇಕೋ ಹೊಳೆಯಲಿಲ್ಲ. ಎಂತು ಸಂತೈಸಬೇಕೋ ತಿಳಿಯಲಿಲ್ಲ. ಒಡಲು ಕಾರುಣ್ಯದ್ರವ್ಯದಿಂದ ತುಂಬಿ ಹೋಯಿತು. ಸ್ವಲ್ಪಹೊತ್ತು ಪ್ರಯತ್ನಿಸಿದರೂ ತುಟಿಗಳು ಬಿರಿಯಲಿಲ್ಲ. ಹೃದಯಾಂತರಾಳದ ಪ್ರೇಮಸಮುದ್ರವೆಲ್ಲ ಒಮ್ಮಿಂದೊಮ್ಮೆಲೇ ಆಲೋಡಿತ ವಾಗಿ ಕಣ್ಣುಗಳಲ್ಲಿ ಅನಿರೀಕ್ಷಿತವಾಗಿ ಫಳಫಳನೆ ನೀರಾಡಿತು. ತಲೆಯನ್ನು ನೇವರಿಸಿ ಮುದ್ದುಗೈದು, ಮೃದುಹಸ್ತವನ್ನು ಅದುಮಿ ಹಿಡಿದು ಕೇಳಿದಳು,

"ಮನೆಯಲ್ಲಿರುವುದು ತುಂಬ ಕಷ್ಟವೇ ಧಾರುಣಿ ?"

"......"

"ಹೇಳು ಮಗೂ ! ಏಕೆ ಮಾತಿಲ್ಲ."

"ನಾನಿಲ್ಲೇ ಇರುವೆ ಮಿಸ್ !"

ಕಣ್ಣುಗಳಲ್ಲಿ ಇಣುಕುವ ನೋವಿನ ಛಾಯೆ ಅಂತರಂಗಿಕ ಪರಿ ತಾಪವನ್ನು ಸಾರಿ ಹೇಳುವಂತಿತ್ತು. ಆ ಮೂಕತಾಪ ಕ್ಷಣಕ್ಷಣಕ್ಕೂ ಸಂಕಟ ವನ್ನು ಹೆಚ್ಚಿಸುತಿತ್ತು. ನಿಸ್ಸಹಾಯಕ ಸ್ಥಿತಿ ಮನಃಪ್ರಾಣಗಳನ್ನು ಗಾಣಕ್ಕೆ ಕೊಟ್ಟ ಕಬ್ಬಿನಂತೆ ಹಿಂಡಿದುವು. ನಿರ್ಮಲ ಮೂರ್ತಿಮತ್ತಾಗಿ ಕುಳಿತಳು. ಅಂತರಂಗಿಕ ಭಾವಧಾರೆ ಮುಖಬಿಂಬದಲ್ಲಿ ಶಾಂತಿವಾರಿಯಂತೆ ಸ್ಫುರಿಸುತಿತ್ತು. ಬಹಳಹೊತ್ತು ಯಾರೂ ಮಾತಾಡಲಿಲ್ಲ. ಗಂಭೀರ ಮೌನ ರಾಜ್ಯವಾಳಿತು.

ಅನಂತರ ಕ್ಷೀಣಶ್ರಾಂತ ಸ್ವರದಲ್ಲಿ ಧಾರುಣಿಯೇ ಮೌನ ಮುರಿದಳು,

"ಪ್ರಿನ್ಸಿಪಲ್-ಗೆ ಹೇಳುತ್ತೀರಾ ಮಿಸ್ ?"

"ಅಯ್ಯೋ, ಪಾಪ!" ಎಂದುಕೊಂಡಳು ನಿರ್ಮಲ, ತುಟಿಗಳು ಬಿರಿಯಲಿಲ್ಲ.

"ಅದಕ್ಕೇಕೆ ಅಷ್ಟು ಚಿಂತೆ? ಕೆಲವು ದಿನಗಳಷ್ಟೆ? ಇಷ್ಟೊಂದು ಮಕ್ಕಳಿರುವಾಗ ಪ್ರಿನ್ಸಿಪಲ್ ಏನು ಮಾಡುತ್ತಾರೆ?" ಎಂದಳು ನರ್ಸ್.

ಧಾರುಣಿ ಮಾತಾಡಲಿಲ್ಲ. ತಾಪದಗ್ಧ ಜೀವ ನಿರಾತಂಕವಾಗಿ ಉಸಿರಾಡುತಿತ್ತು. ಮುಖಬಿಂಬದಲ್ಲಿ ಹನಿಮುತ್ತುಗಳಂತೆ ಬೆವರಿನ ತುಂತುರುಗಳು ಮೂಡಿದ್ದುವು. ಟವಲ್ಲಿನಿಂದ ಮೃದುವಾಗಿ ಒರಸಿ, ಸ್ನೇಹಪೂರ್ವಕವಾಗಿ ವೇದನಾಭರಿತ ಕಂಠದಿಂದ ಹೇಳಿದಳು ನಿರ್ಮಲ, "ಧೈರ್ಯವಾಗಿರು ಚಿಂತೆ ಮಾಡಬಾರದು."

"........"

ಆ ಬಾಲಕಿಯೊಂದಿಗೆ ಉಂಟಾಗಿರುವ ಅನುಬಂಧ ಯಾವ ಜನ್ಮದ ಸಂಪನ್ಮೂಲವೋ ದೇವರಿಗೇ ಗೊತ್ತು. ಹೃದಯದಲ್ಲಿ ಅಭೂತಪೂರ್ವ ಧಾರ್ಮಿಕ ಉತ್ಸಾಹ ಸಂಚರಿಸಿದಷ್ಟೂ ಒಡಲು ಸಂಕಟದಿಂದ ತುಂಬುತಿತ್ತು. ಮಂತ್ರಿತಳಂತೆ, ಅಭಿಭೂತಳಂತೆ ಮೂಕಶೋಕವನ್ನು ಅನುಭವಿಸುವಾಗ ತಾನೆಂದೂ ಇಂತಹ ಸಂದಿಗ್ಧ ಪರಿಸ್ಥಿತಿಗೆ ಒಳಗಾಗಿರಲಿಲ್ಲ ಎಂದುಕೊಂಡಳು. ನೆತ್ತರಿನ ಪ್ರತಿಕಣವೂ ದುಃಖಿಸುತ್ತಿರುವಂತೆ ಭಾಸವಾಯಿತು. ದೃಷ್ಟಿ ಹತ್ತಿರದಲ್ಲಿ ಹರಿದಿದ್ದರೂ ಏನನ್ನೂ ನೋಡದೆ ನಿಶ್ಚಲ ಭಂಗಿಯಲ್ಲಿ ಮಂಡಿಸಿದಳು.

ಬಾಗಿಲ ಬಳಿ ಇದ್ದಕ್ಕಿದ್ದಂತೆಯೇ ಪಾದಸಪ್ಪಳ ಕೇಳಿಬಂದಿತು. ನೋಟ ಸುಮ್ಮನೆ, ಸಹಜವಾಗಿ ಅತ್ತ ಹೊರಳಿದರೆ ಧಾರುಣಿಯ ತಂದೆ ಅದೇತಾನೇ ಒಳಹೆಜ್ಜೆ ಇಡುತಿದ್ದ. ಇನ್ನೂ ತಾರುಣ್ಯ ಹಿಂಗದ ಶರೀರ, ಅಜಾನುಬಾಹು, ತಾಮ್ರವರ್ಣ, ಅಡಿಯಿಂದ ಮುಡಿಯವರೆಗೂ ಅಲಂಕಾರದಲ್ಲಿನ ಅತೀವ ಆಸಕ್ತಿ ಆತ್ಮದರ್ಶನ ಮಾಡಿಸುವಂತಿತ್ತು.

ವಂದನೆ ಸಲ್ಲಿಸಿದನಂತರ ಅವನೆಂದ,

"ನನಗೆ ಬೆಳಿಗ್ಗೆಯಷ್ಟೆ ತಿಳಿಯಿತು . ಹೇಗಿದ್ದಾಳೆ ಧಾರುಣಿ?"

ತಂದೆಯ ಧ್ವನಿ ಕೇಳಿಬರುತ್ತಲೂ ಕಳೆದುಳಿದ ಅಲ್ಪಸ್ವಲ್ಪ ಉತ್ಸಾಹವೂ ಇಳಿಮುಹೋದಂತೆ ಅವಳ ಮುಖಮಂಡಲ ಬಾಡಿಹೋಯಿತು.

ಅವನು ಕೆನ್ನೆಯನ್ನು ಮುಟ್ಟಿನೋಡಿ ನಲ್ಮೆಯಿಂದ ಕೇಳಿದ,

"ಮನೆಗೆ ಹೋಗೋಣ ಬರುತ್ತೀಯಾ, ಧಾರುಣೀ ?"

ಪ್ರಶ್ನೆ ಕಿವಿಗಳನ್ನು ತಾಗುತ್ತಲೂ ಬಾಲಕಿ ಮುಸು ಮುಸು ಅಳತೊಡಗಿದಳು. ಆ ಕರುಣಾಜನಕ ದೃಶ್ಯ ಮನವನ್ನು ಮಂಜಿನಂತೆ ಕರಗಿಸಿತು. ನಿರ್ಮಲ ನಿಸ್ಸಹಾಯಕಳಂತೆ ಸುಮ್ಮನೆ ಕುಳಿತುದುದನ್ನು ನೋಡಿ ನರ್ಸ್ ಸಂತೈಸಲು ಮುಂದಾದಳು. "ಹಾಗೆಲ್ಲ ಬೇಸರ ಪಟ್ಟುಕೊಳ್ಳಬಾರದು ಮಗೂ! ವಾಸಿಯಾದ ಮೇಲೆ ಇಲ್ಲಿಗೇ ಬಂದುಬಿಡು....ಚಿಂತೆಯಿಲ್ಲ."

ಧಾರುಣಿ ಮಾತಾಡಲಿಲ್ಲ. ಮುಖಭಾವದಲ್ಲಿ ಸಮ್ಮತಿ ಸೂಚನೆಯೂ ಮೂಡಲಿಲ್ಲ.

ಅವಳ ತಂದೆ ಬಳಿಯಲ್ಲಿ ನಿಂತು ಸಂತೈಸುವವನಂತೆ ಹೇಳಿದ,

"ಮೂರು-ನಾಲ್ಕು ದಿನ ಮನೆಯಲ್ಲಿದ್ದರೆ ಸಾಕು; ಅನಂತರ ಇಲ್ಲಿಗೇ ಬಂದುಬಿಡು. ಈಗ ಮನೆಗೆ ಹೋಗೋಣ ಆಯಿತೇ ?"

"........"

"ಏಕೆ ಮಾತೇ ಇಲ್ಲವಲ್ಲ, ಧಾರುಣೀ !"

"ಚಿಂತಿಸಬೇಡ ಮಗೂ! ನಿಮ್ಮ ತಂದೆಯೇ ಬಂದಿದ್ದಾರೆ; ಅವರೇ ನೋಡಿಕೊಳ್ಳುತ್ತಾರೆ." ನಿರ್ಮಲ ಪ್ರಯತ್ನಪೂರ್ವಕವಾಗಿ ನುಡಿಯನ್ನು ಹೊರಹಾಕಿದಳು. ಚಿತ್ತಾಲೋಕವೆಲ್ಲ ತೀವ್ರಸಂತಾಪದಿಂದ ತುಂಬಿಹೋಗಿತ್ತು. ಆದರೂ ಅದನ್ನು ತೋರಗೊಡದೆ ಅವಳನ್ನು ಸಂತೈಸಿದಳು.

ಧಾರುಣಿ ಎದ್ದು ಕುಳಿತು "ಹೇಗೂ ಹೋಗಲೇಬೇಕಲ್ಲ...ಹೋಗುವೆ" ಎಂದಳು. ಜೀವನರಂಗದ ಕೊನೆಯ ಪ್ರಕರಣವೋ ಎಂಬಂತೆ ಆಸೆ ನಿರಾಸೆಗಳಲ್ಲಿ ಹೊಯ್ದಾಡಿ ಸೋತಂತಿತ್ತು ಜೀವ. ನಿರ್ಮಲ ಕೈಹಿಡಿದುಕೊಂಡು ಹೊರಗಡೆ ಕರೆತಂದು ಬೀಳ್ಕೊಟ್ಟಳು. ಅವಳು ಹನಿಗಣ್ಣಾಗಿ ರಿಕ್ಷ ಹತ್ತಿದಾಗ ಶರೀರ ಸಂತಾಪದ ಮೂಟೆಯಾಗಿತ್ತು. ಅನಂತರ ನಿರ್ಮಲ ಗಗನ ಭಿತ್ತಿಯನ್ನು ನೋಡುತ್ತ ಮೆಟ್ಟಲಿಳಿದಳು. ಯಾವಾಗ ಗಗನದ ನೀಲಿ ನಕ್ಷತ್ರೇಕ್ಷುಗಳನ್ನು ಧರಿಸಿತೋ....ಯಾವಾಗ ಚಂದ್ರಮ ಬಾನೇರಿ ಬಂದನೋ....ಯಾವಾಗ ಶೀತಃಕಾಲದ ಚಳಿ ಆರಂಭವಾಯಿತೋ ಒಂದೂ ತನ್ನ ಗಮನಕ್ಕೆ ಬಂದಿರಲಿಲ್ಲ.

ಆ ಮುಂದಿನ ಎರಡು ಮೈಲಿ ಹಾದಿಯನ್ನು ಒಬ್ಬಳೇ ಕ್ರಮಿಸಬೇಕಾಗಿ

ದ್ದುದರಿಂದ ಕಾಲುಗಳಿಗೆ ನವಶಕ್ತಿ ಮೂಡಿತ್ತು. ಆದರೂ ಚಿಂತೆಯ ಭಾರ ಹೃದಯವನ್ನು ತುಂಬಿಕೊಂಡಿದ್ದುದರಿಂದ ಒಮ್ಮೊಮ್ಮೆ ಮೈಮರೆಯುತಿದ್ದದೂ ಉಂಟು. ಮಾನಸಿಕ ಕ್ಲೇಶ ಅಂಕಿತವಾದಂತೆ ಕಣ್ಣುಗಳ ಸುತ್ತ ಕಪ್ಪು ಮೂಡಿತ್ತು. ಗಾಳಿಗೆ ಅತ್ತಿತ್ತ ಚಲಿಸುತಿದ್ದ ಧವಳಾಂಬರದ ಉತ್ತರೀಯದಂಚನ್ನು ಬಿಗಿ ಹಿಡಿದಂತೆ, ಅಭಿಶಪ್ತ ಹೆಜ್ಜೆಗಳು ಮುಂದುವರಿಯುತಿದ್ದುವು. ಜನಭರಿತವಾದ ಹಾದಿಯನ್ನು ಕಳೆದು ಮನೆಯನ್ನು ಮುಟ್ಟಿದಾಗ ಎದೆಯಾಳದಿಂದ ನೀಳವಾದ ನಿಟ್ಟುಸಿರೊಂದು ತಪ್ಪಿಸಿಕೊಂಡಿತು. ಇಳಿದುಹೋದಂತೆ ಮ್ಲಾನಮುಖಿ ಯಾಗಿ ಒಳ ಹೆಜ್ಜೆ ಇಟ್ಟ ಅವಳನ್ನು ನೋಡಿ ವಿಮಲ ಚಕಿತಭಾವದಿಂದ ಕೇಳಿ ದಳು "ಇದೇಕೆ ಇಷ್ಟೊತ್ತು...? ಏನೋ ಒಂದು ರೀತಿಯಾಗಿದ್ದಿ? ತಲೆ ನೋವೇ?"

"ಇಂದು ತಲೆ ನೋಯುವ ಪ್ರಸಂಗವೇ ನಡೆಯಿತು."

"ಏನು?"

ಆ ವೇಳೆಗೆ ತಾಯಿಯೂ ಅಲ್ಲಿ ಪ್ರತ್ಯಕ್ಷಳಾದಳು. ನುಡಿ ಮನವನ್ನು ಬಾಣದಂತೆ ಹೊಕ್ಕು ಏನಿರಬಹುದೆಂಬ ಆಸಕ್ತಿಯನ್ನು ಕೆರಳಿಸಿತು.

"ಈವತ್ತು ಧಾರುಣಿಯನ್ನು ಒತ್ತಾಯದಿಂದ ಮನೆಗೆ ಕಳುಹಿಸಬೇಕಾ ಯಿತು." ಎಂದ ನಿರ್ಮಲ ಎಲ್ಲವನ್ನೂ ವಿಶದವಾಗಿ ಹೇಳಿ "ಪಾಪ, ತಬ್ಬಲಿ ಮಗು!" ಎಂದು ನಿಟ್ಟುಸಿರು ಬಿಟ್ಟಳು.

"ವಿಚಿತ್ರ ಮಾನವ ಗಾಂಧಾಂಧಕಾರದಲ್ಲಿ ಪಯಣಿಸುತಿದ್ದರೂ ಅಶಾಶ್ವ ತವೂ ಮಾಯಕವೂ ಆದ ಜೀವನದಲ್ಲಿ ಎಂತಹ ದೃಢ ವಿಶ್ವಾಸವಿಟ್ಟಿದ್ದಾನೆ ಅವೇ ಆಶ್ಚರ್ಯ!" ಎಂದು ಉದ್ಗಾರ ತೆಗೆದಳು ತಾಯಿ. ಮುಖಭಾವ ಮ್ಲಾನ ವಾಗಿತ್ತು.

"ಪಾಪ!" ತನ್ನ ಒಡಲ ಸಂಕಟವನ್ನು ಒಂದೇ ಶಬ್ದದಿಂದ ಹೊರ ಹಾಕಿ ದಳು ವಿಮಲ.

"ಅವಳಿಗೂ ನನಗೂ ಯಾವುದೋ ಜನ್ಮದ ಮೈತ್ರಿ ಬೆಳೆದುಕೊಂಡಿದೆ.... ಅವಳು ಹೋಗಲಾರದೆ ಹೋಗುವಾಗ ತುಂಬ ಸಂಕಟವಾಯಿತು." ಎಂದಳು ನಿರ್ಮಲ. ಚಿತ್ತ ಗ್ಲಾನವಾಗಿತ್ತು. ಸಂಕಟದ ಝರಿ ನರನರಗಳಲ್ಲೂ ಆರೋಹಣ ಅವರೋಹಣ ನಡೆಸುತಿತ್ತು. ಎಂದಿನಂತೆ ದಿನಚರಿಯನ್ನು ಆರಂಭಿಸಿದಾಗಲೂ ಆ

ಪ್ರಸಂಗದಿಂದ ಮನವನ್ನು ಹಿಂತೆಗೆದುಕೊಳ್ಳಲಾಗದೆ ಹೃದಯ ದುಃಖಿಸುತ್ತಲೇ ಇತ್ತು.

೨೧

....ಬಾಲರವಿ ಬಾನೇರಿ ದಿನಚರಿಯನ್ನು ವಿಜೃಂಭಣೆಯಿಂದ ಆರಂಭಿಸಿದ.

....ಪ್ರಶಾಂತ ವಾತಾವರಣದಲ್ಲಿ ಶಿವತ್ತ್ವದ ಮಂತ್ರೋಚ್ಚಾರಣೆಯಂತೆ ಮರ್ಮರಿಸುವ ಪಚ್ಚ ತರುಲತಾ ಸಮುದ್ರದ ಮನೋಹರ ಮರ್ಮರ ಲೀಲೆ.

ಪ್ರಫುಲ್ಲ ಮುಂಬೈಗೆ ಪಯಣಿಸಿ ಮೂರು ತಿಂಗಳು ಸಂದುವಾದರೂ ಅವನಿಗೆ ಅಲ್ಲಿ ಯಾವ ಕೆಲಸವೂ ಸಿಕ್ಕಿರಲಿಲ್ಲ. ತಾನು ತುಂಬ ತೊಂದರೆಯಲ್ಲಿರುವುದಾಗಿ ಕಳಕಳಿಯಿಂದ ಬರೆದುಕೊಂಡಿದ್ದರ ಮೇಲೆ ಸ್ವಲ್ಪ ಹಣವನ್ನು ಕಳುಹಿಸಿಯೂ ಆಗಿತ್ತು. ಅನಂತರ ಅವನಿಂದ ಯಾವ ಪತ್ರವೂ ಬಂದಿರಲಿಲ್ಲ. ಆ ಚಿಂತೆಯನ್ನು ಮನದಲ್ಲಿ ತುಂಬಿಕೊಂಡಿದ್ದ ಜಾನಕಿ ಭಾರವಾದ ದನಿಯಲ್ಲಿ ಎದೆಯಳಲನ್ನು ಹೊರ ಹಾಕಿದಳು,

"ಅಂದಿಂದಿಗೂ ಒಂದಲ್ಲ ಒಂದು ಚಿಂತೆಯಲ್ಲಿಯೇ ದಿನಗಳು ಉರುಳುತ್ತಿವೆ. ಎಂದಿಗೆ ಜೀವನ ಶಾಂತಿ ಲಭಿಸುತ್ತೋ ದೇವರಿಗೇ ಗೊತ್ತು."

ಪುಸ್ತಕ ಪಠಣದಲ್ಲಿ ನಿಮಗ್ನಳಾಗಿದ್ದ ವಿಮಲ ತಾಯಿಯ ಕಡೆ ಹುಬ್ಬೆತ್ತಿ ನೋಡಿದಳು....ಐವತ್ತು ವಸಂತಗಳ ಸೊಂಪನ್ನುಂಡ ಮಾತೃಕೆ, ಆತ್ಮಶಾಂತಿಯೆಡೆಗೆ ಹರಿದ ಕಣ್ಣುಗಳ ಗುರುತ್ವ, ಮುಗ್ಧಜೀವನದ ದುಗ್ಧ ಚಿತ್ತಕಲ್ಪ. ನಿತ್ಯ ನೂತನ ಆಶಾವಾದಿತ್ವ, ಒಂದೊಂದೂ ಅವಳ ಜೀವನ ಪರಿಸ್ಥಿತಿಗೆ ವಿಶಿಷ್ಟಮುದ್ರೆಯೊತ್ತಿ ಪರಿಪುಷ್ಟಗೊಳಿಸಿವೆ. ಅನುಭೂತ ಆ ಅನುಭಾವದಲ್ಲಿ ವಿಚಿತ್ರ ಆನಂದಜ್ಯೋತಿಯಿಂದ ರಸಾವಿಷ್ಟಳಾಗಿ ಭಾವನಾಲೋಕನದಲ್ಲಿ ಮುಳುಗಿಹೋಯಿತು ಚಿತ್ತ.

"ಏನಮ್ಮಾ, ಹೀಗೆ ನೋಡುತ್ತಿ ?" ಮುಗುಳು ನಕ್ಕಳು ತಾಯಿ.

ಅದೇ ಸಮಯಕ್ಕೆ ಸರಿಯಾಗಿ ತಲೆಬಾಗಿಲಿನಲ್ಲಿ ಕಾಣಿಸಿಕೊಂಡ ರಾಮಕೃಷ್ಣರಾಯ "ಎಲ್ಲರೂ ಸೌಖ್ಯವೇ ?" ಎನ್ನುತ್ತಲೇ ಒಳಗಡೆ ಪದಾರ್ಪಣೆ

ಮಾಡಿದ. ಶೀರ್ಣತ ತುಟಿಗಳಲ್ಲಿ ತಿಳಿನಗೆ ಮೂಡಿತ್ತು.

"ಬನ್ನಿ, ಬನ್ನಿ." ಎಂದು ಬಾಯಿ ತುಂಬ ಸ್ವಾಗತಿಸಿದ ಜಾನಕಿ ಮಗಳಿಗೆ ಸಂಭ್ರಮದಿಂದ ನುಡಿದಳು "ದೊಡ್ಡವರು ಬಂದಿದ್ದಾರೆ. ನಮಸ್ಕಾರ ಮಾಡು ಮಗೂ!"

ಗುರು ಸಮಾನರಿಗೆ ವಿನಾ ಇನ್ನಾರಿಗೂ ಸಾಷ್ಟಾಂಗ ನಮಸ್ಕಾರ ಮಾಡಲು ಮನಸೊಪ್ಪುವುದಿಲ್ಲ. ಅದರಲ್ಲೂ ಅರಬರೆ ಮರಳು! ಪುರೋಹಿತರ ಕುಟುಂಬಕ್ಕೆ ಸೇರಿ ಕೂಪ ಮಂಡೂಕತೆಯ ಶೋಭೆಯಲ್ಲಿ ಬಾಳಿದ ವ್ಯಕ್ತಿ. ಭಾವೀ ಮಾವನೇ ಆಗಿದ್ದರೂ ಲೋಪದೋಷಗಳ ಅಂಶ ಮನದಲ್ಲಿ ದೃಢವಾಗಿ ಬೇರೂರಿರುವುದರಿಂದ ಕಾಲುಮುಟ್ಟಿ ನಮಸ್ಕರಿಸಲು ಅವಳ ಆತ್ಮ ವಿರೋಧಿಸಿತು. ಅಂತಲೇ ಸಾಮಾನ್ಯವಾಗಿ ಎಲ್ಲರಿಗೂ ಮಾಡುವಂತೆ ಕರಗಳನ್ನೆತ್ತಿ ಜೋಡಿಸಿದರೂ ಅತ್ಯಂತ ವಿನಯ ಪ್ರದರ್ಶನ ಮಾಡುವುದನ್ನು ಮರೆಯಲಿಲ್ಲ. ಆದರೆ ಅತ್ಯಂತ ಸಂಪ್ರದಾಯ ಶರಣಸ್ಥನಾದ ರಾಮಕೃಷ್ಣರಾಯನಿಗೂ, ಅದೇ ನೇರಕ್ಕೆ ಅಷ್ಟೇ ಸಂಪ್ರದಾಯಸ್ಥೆಯಾದ ತಾಯಿಗೂ ಅದು ಸರಿ ಎನಿಸಲಿಲ್ಲ. ಇದ್ದಕ್ಕಿದ್ದಂತೆಯೇ ಇಬ್ಬರಲ್ಲಿಯೂ ಪ್ರದರ್ಶಿತವಾದ ಅಸಂತೋಷ ಮನಸ್ಸಿಗೆ ಮುಳ್ಳು ಮುರಿದಂತಾಯಿತು. ವಿಮಲ ಸ್ವಲ್ಪ ಅಪ್ರತಿಭಳಾದರೂ ತೋರಗೊಡದಂತೆ ಅತ್ಯಂತ ವಿನಯವಂತಿಕೆಯಿಂದ, "ಇಷ್ಟು ದೂರ ನಡೆದುಕೊಂಡು ಬರುವಷ್ಟು ತೊಂದರೆ ತೆಗೆದುಕೊಂಡಿರಿ." ಎಂದಳು. ಮುಖಭಾವ ಗಂಭೀರವಾಗಿತ್ತು.

ಅವನು ಕುರ್ಚಿಯನ್ನೆಳೆದುಕೊಂಡು ಕುಳಿತುಕೊಳ್ಳುತ್ತ ಅವಳ ಸಾಮಾನ್ಯ 'ನಮಸ್ಕಾರ' ವನ್ನು ಅಸ್ವೀಕರಿಸಿದಂತೆ ಅವಳನ್ನು ತೀಕ್ಷ್ಣದೃಷ್ಟಿಯಿಂದ ನೋಡತೊಡಗಿದ.

ವಿಮಲ ಲಜ್ಜಿತಳಂತೆ ತಲೆತಗ್ಗಿಸಿದಳು.

....ಈಗಂತೂ 'ಮಾವ' ಅಲ್ಲ. ಮುಂದೆಯೂ ಆಗಿಯೇ ತೀರುತ್ತಾರೆಂಬ ಖಚಿತವೇನಿಲ್ಲ. ಆದರೂ ಸಹ ಅವರ 'ಅಸಮಾಧಾನ' ಅರ್ಥವಾಗಲಿಲ್ಲ. ಮರುಘಳಿಗೆಯಲ್ಲಿ ತನ್ನನ್ನು ತಾನು ಸಾವರಿಸಿಕೊಂಡು ಅನಿರೀಕ್ಷಿತ ಘಟನೆಯನ್ನು ಉಪೇಕ್ಷಿಸಿ ತನ್ನ ಗಮನಕ್ಕದು ಬಾರದಂತೆಯೇ ನಟಿಸಿ ಮಾತಿಗಾರಂಭಿಸಿದಳು,

"ಈಗ ನಿಮ್ಮ ದಿನಚರಿ ಹೇಗೆ ಕಳೆಯುತ್ತದೆ....? ಏನಾದರೂ ಕಾರ್ಯ ಕ್ರಮವನ್ನು ಕ್ವಚಿತ್ತಾಗಿ ಅಳವಡಿಸಿಕೊಂಡಿದ್ದೀರಾ ?"

ರಾಮಕೃಷ್ಣ ವ್ಯಂಗವಾಗಿ ಉತ್ತರಿಸಿದ,

"ಅನೇಕವಾಗಿ ಓದಿದ ಹುಡುಗಿಯರೆಲ್ಲಾ ನಿನ್ನಂತೆಯೇ ಇರುತ್ತಾರಮ್ಮ. ಅವರಿಗೆಲ್ಲಾ ನಮ್ಮಂತಹವರನ್ನು ಕಂಡರೆ ದಿನಚರಿಯ ಪ್ರಶ್ನೆ ಮೂಡುವುದು ಸಹಜ. ಅನೇಕರು ಈ ಪ್ರಶ್ನೆ ಕೇಳಿದ್ದಾರೆ."

ವಿಮಲೆಯ ಮುಖ ಒಮ್ಮೆಲೇ ಕಾಂತಿಹೀನವಾಯಿತು. ಉತ್ಸಾಹದಿಂದ ಆರಂಭಿಸಿದ್ದ ಸಂಭಾಷಣೆ ಈ ರೀತಿ ತನಗೆ ತಿರುಗುಬಾಣವಾಗುವುದೆಂದು ಅವಳು ಭಾವಿಸಿರಲಿಲ್ಲ. ಪ್ರಸಂಗೋಚಿತವಾಗಿ ಏನಾದರೂ ಹೇಳುವುದಕ್ಕಾಗಲೀ ಕ್ಷಮೆ ಕೇಳುವುದಕ್ಕಾಗಲೀ ಸಮಯ ಸ್ಫೂರ್ತಿಯೇ ಮೂಡಲಿಲ್ಲ. ಆಗ ಅವಳು ನಿಜ ವಾಗಿಯೂ ಲಜ್ಜಿತಳಾದಳು. ಕೆನ್ನೆಗಳಲ್ಲಿ ಚಂದನವರ್ಣದ ಚೆಂಗುಲಾಬಿಗಳು ಮೂಡಿದುವು.

ಜಾನಕಿಗೆ ಆ ಮುಹೂರ್ತದಲ್ಲಿ ಏನೆನ್ನಬೇಕೋ ಹೊಳೆಯಲಿಲ್ಲ. ಭಯ-ವಿಸ್ಮಯ ಭರಿತ ನೋಟವನ್ನು ಮಗಳೆಡೆಗೆ ಹರಿಸಿದಳು. ಅವಳೂ ಸಹ ಸಿದ್ಧ ಉತ್ತರವಿಲ್ಲದೆ ಬೆರಗಾಗಿದ್ದನ್ನು ಕಂಡು ತಾನೇ ಏನೋ ಹೇಳಲು ಪ್ರಯತ್ನಿಸಿ ದಳು "ಅಲ್ಲ .. ಅಲ್ಲ; ವಿಮಲ ಹೇಳಿದ್ದು...." ಆದರೆ ಅಷ್ಟಕ್ಕೇ ಗಂಟಲಿನ ಹಸಿ ಒಣಗಿ ಹೋಯಿತು. ಮುಂದೆ ಮಾತಾಡಲು ಅಭಿಭೂತ ಚಿತ್ತ ಉತ್ತೇ ಜಿತವಾಗಲಿಲ್ಲ. ಒಂದು ರೀತಿಯಲ್ಲಿ ಪೆಚ್ಚಾದಂತೆ, ತಬ್ಬಿಬ್ಬಾದಂತೆ ಸುಮ್ಮನಾ ದಳು. ಒಮ್ಮಿಂದೊಮ್ಮೆಲೇ ಮುಖಬಿಂಬ ನಸು ವರ್ಣಗೆಟ್ಟಿತು.

"ನೀವೇಕೆ ನಿಲ್ಲಿಸಿದಿರಿ? ನಾನು ಅಂದದ್ದು ಈಗಿನವರ ವಿಚಾರವನ್ನು ಕುರಿತು. ಅದಕ್ಕೂ ನಿಮಗೂ ಅರ್ಥಾತ್ ಸಂಬಂಧವಿಲ್ಲ." ಕಂಠಸ್ವನ ಸರಳ ವಾಗಿ ಹರಿದರೂ ವಿಷಯ ನಿರೂಪಣೆ ಅತ್ಯಂತ ಗಂಭೀರವಾಗಿತ್ತು.

ಆ ಅವಧಿಯಲ್ಲಿ ಸ್ವಲ್ಪ ಸುಧಾರಿಸಿಕೊಂಡ ವಿಮಲ ನಯ-ವಿನಯಗಳ ವಶೀಭೂತಳಾಗಿ ತನ್ನ ತಪ್ಪನ್ನು ತಾನು ತಿದ್ದಿಕೊಳ್ಳುವಂತೆ ನುಡಿದಳು "ನಾನು ನಿಮ್ಮನ್ನು ವ್ಯಂಗವಾಗಿ ಪ್ರಶ್ನಿಸಲಿಲ್ಲ, ಇದರಿಂದ ನಿಮ್ಮ ಸ್ವಾಭಿಮಾ ನಕ್ಕೆ ಧಕ್ಕೆಯಾಗಿದ್ದಲ್ಲಿ ದಯವಿಟ್ಟು ಕ್ಷಮಿಸಿ ಬಿಡಿ. ಇನ್ನು ಮುಂದೆ ಇಂತಹ ಬಾಲಾಪರಾಧ ನನ್ನಿಂದ ನಡೆಯದಂತೆ ನಾನು ಎಚ್ಚರವಹಿಸುವೆ."

"ಇದು ಬಾಲಾಪರಾಧ ಅಲ್ಲಮ್ಮಾ, ಕಲಿತವರ ವಾಗ್ಧೋರಣೆಯ ವೈಚಿತ್ರ್ಯ!"

ವಿಮಲ ಅತ್ಯಂತ ಅಸಂತುಷ್ಟಳಾದಳು. ಭಯಭೀತಿಯ ಛಾಯೆ ಕಣ್ಣುಗಳಲ್ಲಿ ಹೊಮ್ಮಿತು. ಏನು ಹೇಳಬೇಕೋ ತಿಳಿಯದೆ ಮೂರ್ತಿಮತ್ತಾಗಿ ನಿಂತು ಬಿಟ್ಟಳು. ಸನ್ನಿವೇಶ ತಾಯಿಯ ಅಂತಸ್ಥಲವನ್ನು ಭ್ರಿಗಿಯಂತೆ ಕೊರೆಯ ತೊಡಗಿತು. ಯಾವ ರೀತಿ ಸಮಾಧಾನ ಪಡಿಸಬೇಕೋ ತಿಳಿಯಲಿಲ್ಲ. ಮಗಳ ಭವಿಷ್ಯಕ್ಕಾಗಿ ಜೀವ ಕಾತರಿಸಿತು. ಇನ್ನು ಏನಾದರೊಂದು ಪರಿಹಾರವನ್ನು ಸೂಚಿಸದೆ ಗತ್ಯಂತರವಿರಲಿಲ್ಲ. ಮನದಲ್ಲೇ ರಾಮಮಂತ್ರವನ್ನು ಜಪಿಸುವಂತೆ ಉತ್ತರವನ್ನು ಜಪಿಸಿ, ಪ್ರಯತ್ನಪೂರ್ವಕವಾಗಿ ಸಿದ್ಧಗೊಳಿಸಿ ಹೊರಹಾಕಿದಳು,

"ಇವೆಲ್ಲ ಸರ್ವೇ ಸಾಧಾರಣ ವಿಷಯ ...ಅಷ್ಟಕ್ಕೇಕೆ ತಲೆಕೆಡಿಸಿಕೊಳ್ಳುವಷ್ಟು ವಾದವಿವಾದ ....? ಮಗಳು ತಿಳಿಯದೆಲೆ ಒಂದು ಮಾತಾಡಿರಬಹುದು. ಅದನ್ನು ಕೋಪಿಸಿಕೊಳ್ಳುವಷ್ಟು ಮನಸ್ಸಿಗೆ ತೆಗೆದುಕೊಳ್ಳಬೇಡಿ. ನೀವು ಎತ್ತಿ ಆಡಿಸಿದ ಮಗು... ಅವಳಲ್ಲಿ ಅಂತಹ ಉದ್ಧಟತನವೇನೂ ಇಲ್ಲ. ತಪ್ಪು ಮಾಡಿದರೂ ತಿದ್ದಿಕೊಳ್ಳುವಂತಹ ಸ್ವಭಾವ ಅವಳಲ್ಲಿದೆ ....ದಯಮಾಡಿ ಕ್ಷಮಿಸಿ ಬಿಡಿ."

ವಾಗ್ಝರಿ ಎದೆಯಾಳದಿಂದ ಹರಿದುಬಂದಾಗ ಅಕ್ಷರ ಅಕ್ಷರವೂ ಸಂಕಟಾವತರಣದಲ್ಲಿ ಹೊರಳಾಡಿದ್ದುದರಿಂದ ಮುಕ್ತಾಹಾರದಂತೆ ಸುಮನೋಹರವಾಗಿದ್ದವು. ಹೇಗಾದರೂ ಆತನ ಅಸಮಾಧಾನ ಬಗೆಹರಿದರೆ ಸಾಕು ಎಂದು ತನ್ನಲ್ಲೇ ಮೊರೆ ಇಟ್ಟುಕೊಂಡಳು. ಹೃದಯವ್ಯಾಪ್ತಿಗೆ ಮೀರಿ ಮಿಡಿಯ ಹತ್ತಿತು.

ರಾಮಕೃಷ್ಣರಾಯ ಆಕೆಯ ದೈನ್ಯತೆಯನ್ನು ಕಂಡು ಮನ ಕರಗಿದವನಾಗಿ ಸ್ವಲ್ಪಹೊತ್ತು ತನ್ನಲ್ಲೇ ತರ್ಕವಿತರ್ಕ ಹೂಡಿ ಗಂಭೀರಭಾವ ತಳೆದ.... ಮನದಲ್ಲಿ ಅದ್ಭುತ ಪ್ರಭಂಜನವೇ ನಡೆದು ಹೋಯಿತು.

ತಾನು ಕಾಲುಮುಟ್ಟಿ ನಮಸ್ಕರಿಸದ ತಪ್ಪನ್ನು ಅವರು ಈ ರೀತಿಯಲ್ಲಿ ತೀರಿಸಿಕೊಂಡಿರಬಹುದು ಎಂದುಕೊಂಡಳು-ವಿಮಲ. ಆತನ ಅಜ್ಞಾತ ಜಾಣ್ಮೆ ಎಲ್ಲಿಲ್ಲದ ಅಚ್ಚರಿ ಮೂಡಿಸಿತು. ಅವನ ಬಗ್ಗೆ ಅತ್ಯಂತ ಲಘುವಾಗಿ-ಹಾಸ್ಯಪ್ರಧಾನವಾಗಿ ಮಾತಾಡುತಿದ್ದ ವಿಷಯ ಗಮನಕ್ಕೆ ಬರುತ್ತಲೂ ಒಮ್ಮೆ ಮೈ 'ಜುಂ' ಎಂದಿತು.

"ಇರಲಿ, ಬಿಡಿ. ನಾನೊಬ್ಬ ಕೆಲಸಕ್ಕೆ ಬಾರದ ಮುದುಕ....ಈಗ ಹೇಳು ನೀನು ಏನು ಮಾಡುತಿದ್ದಿ? ನಿನ್ನ ಜೀವನ ಯಾವ ರೀತಿ ರೂಪಿಸಿಕೊಳ್ಳ ಬೇಕೆಂದು ನಿನ್ನ ಇಷ್ಟ?"

ಆ ಅನಿರೀಕ್ಷಿತ ಪ್ರಶ್ನೆಯಿಂದ ವಿಮಲ ತುಸು ತತ್ತರಿಸಿದಳು. ಮಾಯಕ ಪ್ರಶ್ನೆ ಮನವನ್ನು ಭೀತಮುಗ್ಧಗೊಳಿಸಿತು. ಒಂದೆರಡು ಕ್ಷಣ ಯೋಚಿಸಿ ಉತ್ತರಿಸಿದಳು,

"ಈ ಜೀವನವನ್ನು ನಮ್ಮಿಂದ ನಿರ್ಣಯಿಸುವುದಕ್ಕಾಗುತ್ತದೆಯೇ? ಹೇಗಾದರೂ ಸರಿಯೆ, ಪರಿಸ್ಥಿತಿಗೆ ಹೊಂದಿಕೊಂಡರೆ ಆಯಿತು. ಹಾಗಿರಬೇಕು-ಹೀಗಿರಬೇಕು ಎಂಬುದೇನೂ ಇಲ್ಲ."

ರಾಮಕೃಷ್ಣ ಮಾತಾಡದೆ ತಲೆತೂಗಿದ. ಕಣ್ಣುಗಳಲ್ಲಿ ಸಾತ್ವಿಕ ಖಳೆ ಮಿಂಚಿತು. "ಇದೀಗ ಸರಿಯಾದ ಉತ್ತರ."

ವೃದ್ಧಮಹಾಶಯ ಅತ್ಯಂತ ಸಮಾಧಾನದಿಂದ ಉತ್ತರಿಸಿದುದನ್ನು ನೋಡಿ ವಿಮಲ 'ಬದುಕಿದೆ' ಎಂದುಕೊಂಡಳು. ಅತಿಥಿಗಳ ಮುಂದೆ ಶಿಷ್ಟಾಚಾರದ ಸಭ್ಯತೆಯನ್ನು ಉಲ್ಲಂಘಿಸಬಾರದಿತ್ತು, ನಾನು ತಪ್ಪು ಮಾಡಿಬಿಟ್ಟೆ ಎಂಬ ವಿಚಾರಸರಣಿ ತಲೆಯಲ್ಲಿ ಸುಳಿಸುತ್ತುತಿತ್ತು.

"ನನಗೀಗ ಮರೆವು ಜಾಸ್ತಿ. ಅನೇಕವೇಳೆ ಮಾತಾಡಿದ್ದೇ ಮಾತಾಡುವುದುಂಟು....ಗೊತ್ತಿದ್ದವರನ್ನು ಗುರುತಿಸದೆ ಇರುವುದುಂಟು. ಇವೆಲ್ಲಾ ವೃದ್ಧಾಪ್ಯದ ಗಂಭೀರ ವಿಷಯಗಳು. ಅಂದಮಾತ್ರಕ್ಕೆ ನನಗೆ ಬುದ್ಧಿಲೋಪವಾಗಿದೆ ಎಂದು ತಿಳಿಯಬೇಡಮ್ಮ. ಒಂದು ಕಾಲದಲ್ಲಿ ನಾನು 'ಒಳ್ಳೆಯ ಉಪಾಧ್ಯಾಯ' ಎಂಬ ಹೆಸರು ಗಳಿಸಿದವನು. ಮೇಲಾಗಿ ನಾನು ಸ್ವಲ್ಪ ಮಾತಾಳಿಯೂ ಹೌದು. ಆ ಮಾತಾಳಿತನವೆ ನನ್ನ ಬದುಕನ್ನು ನಿರ್ವಿಕಲ್ಪವಾಗಿಸಿದೆ....ನನ್ನ ಜೀವ ನನಗೇನೂ ಭಾರವಾಗಿಲ್ಲ. ದಿನಚರಿ ಅಂದಿಂದಿಗೂ ಒಂದೇ ರೀತಿ ನಡೆಯುತ್ತಿದೆ. ಆವಾಗೆಲ್ಲಾ ಶಾಲೆಗೆ ಹೋಗಿ ಪಾಠ ಹೇಳುತಿದ್ದೆ. ಈಗ ಮನೆಯಲ್ಲೇ ಹೇಳುವೆ. ಇಷ್ಟೇ ವ್ಯತ್ಯಾಸ ...ಈಗ ಈ ಮುದುಕ ಎಂಥವನು ಎಂಬುದು ಅರ್ಥವಾಯಿತೇ?"

ವಿಮಲ ಮಾತಾಡದೆ ಮುಗುಳು ನಕ್ಕಳು. ತನ್ನ ಪ್ರಶ್ನೆಯ ಔಚಿತ ಮನವನ್ನು ಬಾಧಿಸುತ್ತಲೇ ಇತ್ತು. ಲಜ್ಜಾಭಾರದಿಂದ ನಸು ತಲೆ ಬಾಗಿ

ದಳು. ಚಿತ್ತ ಪ್ರವೃತ್ತಿ ವಿಕ್ಷುಬ್ಧಗೊಂಡಿತ್ತು.

"....ನೀನು ಬಿ. ಎ., ಓದಿದ್ದಿ. ನಮ್ಮ ಕಾಲದಲ್ಲಿ ಎಸ್. ಎಸ್. ಎಲ್. ಸಿ. ಆಗಿದೆ ಎಂದರೆ ಪಂಡಿತೋತ್ತಮರೇ ಆಗಿರುತಿದ್ದೆವು. ನಿನ್ನ ತಂದೆಯೂ ನಾನೂ ಒಂದೇ ಬಾರಿಗೆ ಶಾಲಾ ವಿದ್ಯಾಭ್ಯಾಸ ಮುಗಿಸಿದೆವು. ಅವನು ನಮ್ಮ ಮನೆಗೆ ವಿಶೇಷವಾಗಿ ಬರುತಿದ್ದ. ಸಾಯಂಸಮಯವನ್ನು ಇಬ್ಬರೂ ಕೂಡಿ ಕಳೆಯುತಿದ್ದುದೇ ಹೆಚ್ಚು....ಆ ಪ್ರಸಂಗ ಇದ್ದಿದ್ದರೆ ಬಾಳು ಬಂಗಾರವಾಗುತಿತ್ತು. ನೀನಿದನ್ನೂ 'ಅನಾವಶ್ಯಕ' ಎಂದು ಕೊಳ್ಳಬೇಡ. 'ವಿದ್ಯೆ' ಎಂಬುದು ಈ ಪ್ರಪಂಚದಲ್ಲಿ ಎಲ್ಲಕ್ಕಿಂತಲೂ ಉತ್ತಮವಾದ ವಸ್ತು ನಿಜವೆ. ಅದಕ್ಕಿಂತಲೇ ನೀನು ಕಲಿತವಳೆಂದು ಗೌರವ ಪಡೆಯುತಿದ್ದಿ. ಅದು ಯಥಾರ್ಥವಾದುದೇ. ಆದರೆ ಈ ಬಂಗಾರದಂತಹ ದೇಶದಲ್ಲಿ ವಿದ್ಯಾವಂತರಿಗೆ ಮಾತ್ರ ಸ್ಥಳ ಎಂಬ 'ಕುವಿದ್ಯೆ'ಯನ್ನು ಯಾವ ಕಾರಣಕ್ಕೂ ಮನಸ್ಸಿಗೆ ಅಳವಡಿಸಿಕೊಳ್ಳಬಾರದು. ಇಲ್ಲಿ ಅಂಗಹೀನರು ಬುದ್ಧಿಹೀನರು ಅಕರ್ಮಿಗಳು ಸತ್ಕರ್ಮಿಗಳು ಎಲ್ಲರಿಗೂ ಅನ್ನಪಾನಾದಿಗಳನ್ನು ಪಡೆಯುವ ಹಕ್ಕಿದೆ. ಅಯೋಗ್ಯನಾದ ಮಾತ್ರಕ್ಕೆ ವೃದ್ಧನಾದ ಮಾತ್ರಕ್ಕೆ ಯಾರನ್ನೂ ಬದುಕಿನಿಂದ ವಂಚಿತರನ್ನಾಗಿ ಮಾಡಲಾಗದು. ನೀವು-ನವಯುಗದ ವಿದ್ಯಾವಂತರು ವಿಲಾಸ ಜೀವನಕ್ಕಾಗಿ ಮಾಡುವ ಖರ್ಚು....ನಮ್ಮಂತಹ ನೂರು ಮಂದಿ ಮುದುಕರನ್ನು ಸಾಕಬಲ್ಲುದು ಎಂಬುದನ್ನು ಅಕ್ಷರಬದ್ಧವಾಗಿ, ನ್ಯಾಯಬದ್ಧವಾಗಿ, ಕ್ವಚಿತ್ತಾಗಿ ಮನದಟ್ಟು ಮಾಡಿಕೊಳ್ಳಬೇಕಮ್ಮಾ....

"ಇಂದು,

"ಕುವಿದ್ಯೆಯು ಘನ ಸಂಸ್ಕಾರದಿಂದ ಸಮಾಜದಲ್ಲಿ ನಡೆಯುತ್ತಿರುವ ಅನ್ಯಾಯವನ್ನು ಸಾಮಾನ್ಯವೆಂದು ಪರಿಗಣಿಸಲಾಗದು, ಎಂದು ನಾನೆಂದರೆ ನೀನು ಏನು ಉತ್ತರ ಹೇಳುತ್ತಿ? ಈ ಮುದುಕನ ಬಾಯಿಗೆ ಬಿಡುವೇ ಇಲ್ಲ ಎಂದುಕೊಳ್ಳುವೆ ಅಲ್ಲವೆ? ಮಾನವ ಮಾನವತೆಯೊಂದಿಗೆ ನಡೆಸುವ ಅನ್ಯಾಯವನ್ನು ಯಾವ ನ್ಯಾಯಾಲಯವೂ ಹೋಗಲಾಡಿಸದಮ್ಮ."

ವಿಮಲ ಅವಾಕ್ಕಾದಳು. ಸಮಯೋಚಿತವಾಗಿ ಎರಡುಮಾತು ಹೇಳುವುದು ಒಳ್ಳೆಯದು ಎನ್ನಿಸಿದರೂ ತುಟಿಗಳು ಬಿರಿಯಲಿಲ್ಲ. ಬೇರೆ ಸಮಯದಲ್ಲಾಗಿದ್ದಿದ್ದರೆ ಏನಾದರೂ ಉತ್ತರಿಸಬಹುದಿತ್ತು. ಆದರೆ ಈಗಾಗಲೇ ಅವರ

ವಾಗ್ಬಾಣಕ್ಕೆ ತುತ್ತಾಗಿ ಮಾನಸಿಕ ಪರಿತಾಪಕ್ಕೆ ಗುರಿಯಾಗಿದ್ದುದರಿಂದ ಸ್ವಲ್ಪ ಅಂಜಿಕೆಯುಂಟಾಯಿತೇನೋ. ಈ ಸಂದರ್ಭದಲ್ಲಿ ಮಗಳು ಏನುತ್ತರ ಹೇಳುವಳೋ ಎಂಬ ಕಳವಳದಿಂದ 'ಏನೂ ಹೇಳಬೇಡ' ಎಂಬಂತೆ ತಾಯಿ ಕಣ್ಸನ್ನೆಯಲ್ಲೇ ಸೂಚಿಸಿದಳು. ಕಣ್ಣುಗಳು ಪರಸ್ಪರ ಮೌನ ಸಂಭಾಷಣೆ ನಡೆಸಿದುವು.

ಅವನ ನೋಟ ಪ್ರಶ್ನಾರ್ಥಕವಾಗಿ ಇತ್ತಲೇ ಹರಿದಿರುವಾಗ ಉತ್ತರಿಸದೆ ಇರುವುದು ಗೌರವವಲ್ಲವೆಂದು ಬಗೆದರೂ ವಿಷಯ ಇಷ್ಟು ವಿಷಮ ಸ್ಥಿತಿಗೆ ಬಂದುದರಿಂದ ಕಂಠ ಗದ್ಗದವಾಯಿತು. ಸ್ವಲ್ಪ ವಿಜಾತೀಯವಾದ ದನಿಯಲ್ಲಿ ನುಡಿದಳು ವಿಮಲ,

"ನನ್ನ ಮನಸ್ಸು ಯಾವತ್ತೂ ಅಷ್ಟು ಕಾಠಿಣ್ಯವನ್ನು ಸ್ಫುರಿಸುವುದಿಲ್ಲ."

"ನಾನು ನಿನ್ನ ವಿಚಾರಕ್ಕಲ್ಲ ಹೇಳಿದ್ದು! ಈಗಿನ ಯುವಜನಾಂಗದ ಬಗ್ಗೆ ಹೇಳಿದ್ದು."

"ಅಂದಮೇಲೆ ಅದರಲ್ಲಿ ನಾವೂ ಬರುತ್ತೇವಷ್ಟೆ?"

"ಇರಬಹುದು....ಅಡ್ಡಿಯಿಲ್ಲ. ನೀವೆಲ್ಲರೂ ಈ ವಿಚಾರವನ್ನು ಪರಿಶೀಲಿಸಬೇಕಾದ್ದು ನ್ಯಾಯವಮ್ಮಾ."

"ಹೌದು" ಎಂಬಂತೆ ಮುಗುಳ್ನಗೆ ಸೂಚಿಸಿದಳು ವಿಮಲ.

ಅನಂತರ ತನ್ನ ಪುರಾಣ ಬಿಚ್ಚಿದ ರಾಮಕೃಷ್ಣ- "ಬರೀ ನನ್ನ ಮಾಸ್ತರಿಕೆಯಿಂದ ಮಕ್ಕಳನ್ನು ಸಾಕಿ, ಇಬ್ಬರಿಗೂ ಒಳ್ಳೆಯ ವಿದ್ಯಾಭ್ಯಾಸ ಮಾಡಿಸಿ ಮೂವರಿಗೆ ಮದುವೆ ಮಾಡಬೇಕಾದರೆ ಈ ಜೀವ ಎಷ್ಟು ಹೊಟ್ಟೆ-ಬಟ್ಟೆ ಕಟ್ಟಿರಬೇಡ....? ಈಗ ಮಕ್ಕಳಿಗೆಲ್ಲಾ ತಾವೇ ಕಡಿದು ಏನೋ ಮಹಾ ಕಟ್ಟೆ ಹಾಕಿರುವಷ್ಟು ಹೆಮ್ಮೆ! ನಮ್ಮದೆಲ್ಲಾ ಲಕ್ಷ್ಯವೇ ಇಲ್ಲ. ನನ್ನ ಇಡೀ ಜೀವಮಾನದಲ್ಲಿ ಒಂದು ಒಳ್ಳೆ ಪಂಜೆಯುಡಲಿಲ್ಲ. ನನ್ನ ಸಹಧರ್ಮಿಣಿ ಒಂದು ಉತ್ತಮ ಸೀರೆ ಕಾಣಳು. ಈಗ ನನ್ನ ಮಕ್ಕಳು ಡಿಗ್ರಿ ಪಡೆದು ಚೆನ್ನಾಗಿ ಸಂಪಾದಿಸುತ್ತಾರೆ. ಆದರೆ ನಮ್ಮನ್ನು ಕೇಳುವವರೇ ದಿಕ್ಕಿಲ್ಲ ...ಇದು ಪ್ರಪಂಚ!"

ವಿಚಾರ ಸರಣಿ ಎದೆಯಾಳಕ್ಕೆ ಇಳಿದು ಹೃದಯದ ಹೊಂಗಡಲಿನಲ್ಲಿ ಮುಲು ಮುಲು ಹರಿದಾಡಿತು–ಹೆಂಗರುಳು ಮಂಜಿನಂತೆ ಕರಗಿ ದ್ರವೀಭೂತವಾಗುವಂತೆ.

೨೨

... ನಿಶ್ಶಬ್ದ ಪ್ರಕೃತಿಯ ಅದ್ಭುತ ಅಂತರಾಳದಲ್ಲಿ ಚಿತ್ರವಿಚಿತ್ರ ಕೋಲಾಹಲ.

... ಶಾಂತವಾದರೂ ಬಹಳ ಗಂಭೀರ ... ಗಹನ-ಗುರುತರ.

... ಆಮೋದಪೂರ್ಣ ಜಗತ್ತಿನಲ್ಲಿ ವಿಕಟ-ಕರುಣಾಜನಕ, ವಿಲಯ ವಿಪ್ಲವ.

ಬೃಹತ್ ಶಾಲೆಯ ಆವರಣವೆಲ್ಲಾ ತುಂಬಿ ನೆರೆದ ಮಕ್ಕಳ ಮುಖದಲ್ಲಿ ಇನಿತೂ ಖಳೆಯೇ ಇರಲಿಲ್ಲ. ಸಮಯಕ್ಕೆ ಸರಿಯಾಗಿ ಬಾರಿಸಬೇಕಾಗಿದ್ದ ಗಂಟೆ ಬಾರಿಸುತ್ತಲೇ ಇಲ್ಲ. ಎಲ್ಲರ ಮುಖಮುದ್ರೆಯಲ್ಲೂ ಪಶ್ಚಾತ್ತಾಪ-ಸಂತಾಪಗಳ ನೆರೆ ಯುಕ್ಕುತ್ತಿದೆ. ಕೆಲವರ ಕಣ್ಣಾಲಿಗಳು ಅಶ್ರುಲಿಪ್ತವಾಗಿದ್ದುವು. ಗಿಡಮರಗಳ ತಣ್ಣೆಳಲಲ್ಲಿ ಸುಳಿಸುಳಿದಾಡುವ ಮಂದಮಾರುತ ವೀತಗಾನವನ್ನು ಆರ್ತತೆಯಿಂದ ಮರ್ಮರಿಸುತಿದ್ದಾನೆ. ಚಿಂತಿತ ಪಶುಪಕ್ಷಿಗಳ ಕೊರಳ ಸ್ವನದಲ್ಲಿ ಶೋಕಸಂದೇಶ ಎಡೆಬಿಡದೆ ಹರಿಯುತ್ತಿದೆ. ಆ ಮಕ್ಕಳು, ಆ ಪರಿಚಾರಕರು, ಆ ಉಪಾಧ್ಯಾಯರು ಭಾವಾತಿರೇಕದಿಂದ ವಿಧವಿಧ ಮುಖಭಂಗಿಗಳಲ್ಲಿ ಪ್ರಾಂಗಣದಲ್ಲಿ ಸಭೆ ಕೂಡಿದರು. ದುಃಖಿತ ಭೀಭತ್ಸ ದೃಶ್ಯ ಸಲಸಲಕ್ಕೂ ವಿಚಿತ್ರ ರೂಪ ತಳೆಯುತಿತ್ತು. ಶಾಲೆಯ ಪ್ರಿನ್ಸಿಪಲ್ ಈರೀತಿ ಶೋಕ ಸಂದೇಶ ಸಾರಿದರು,

....ಈ ದಿನ ಸೂರ್ಯೋದಯ ಸಮಯದಲ್ಲಿ 'ಧಾರುಣೀ' ಎಂಬ ಈ ಶಾಲೆಯ ವಿದ್ಯಾರ್ಥಿನಿಯು ಅವಳ ತಂದೆಯ ಮನೆಯಲ್ಲಿ 'ಸಿಡುಬು' ರೋಗಕ್ಕೆ ತುತ್ತಾದಳೆಂದು ತಿಳಿಸಲು ಅತ್ಯಂತ ವಿಷಾದಿಸುವೆ. ಅವಳು ತುಂಬ ಗುಣವಂತಳೂ, ಬುದ್ಧಿವಂತೆಯೂ ಆಗಿದ್ದಳು. ಭಗವಂತನು ಅವಳ ಆತ್ಮಕ್ಕೆ ಶಾಂತಿಯನ್ನೀಡಲಿ !

ಅನಂತರ ಅನೇಕರು ಅವಳ ಗುಣಗಾನ ಮಾಡಿದರು.

ಅದಾದನಂತರ ಸಭೆ ಭರಕಾಸ್ತಾದರೂ ಜನ ಚದರಲಿಲ್ಲ. ಅಲ್ಲಲ್ಲಿ ಗುಂಪು ಕಟ್ಟಿ ಮಾತುಕತೆಯಲ್ಲಿ ತೊಡಗಿದ್ದರು. ಉಪಾಧ್ಯಾಯ ವೃಂದ ಧಾರುಣಿಯ ಅಂತ್ಯ ದರ್ಶನಕ್ಕಾಗಿ ಹೊರಟಾಗ ಧಾರುಣಿಯ ಗೆಳತಿಯರನೇಕರು ತಾವೂ

ಬರುವುದಾಗಿ ಗೋಗರೆದರು. ಅದು ಸಾಂಕ್ರಾಮಿಕ ರೋಗವಾದುದರಿಂದ ಉಪಾಧ್ಯಾಯ ವೃಂದ ನಿರೋಧಿಸಿತು-ಕಾರುಣ್ಯಪೂರ್ಣ ಕಡ್ಡಾಯವಾಗಿ.

"ಆದರೆ....!"

ಆಗ ಮೂಡಿಬಂದ ಪ್ರತಿಕ್ರಿಯೆಯಾದರೂ ಏನು?

"ಅವಳು ನನ್ನ ಗೆಳತಿ ಮಿಸ್! ಹೋಗುವಾಗ ಅಳುತ್ತಾ ಹೋಗಿದ್ದಾಳೆ. ಆಗಲೂ ನಮ್ಮನ್ನು ನೋಡಲು ಬಿಡಲಿಲ್ಲ. ಈಗಲಾದರೂ ನೋಡುವೆ ಮಿಸ್!"

ಮುಸು ಮುಸು ಅಳತೊಡಗಿದಳು ಚಂದ್ರಿಕಾ.

"ಹತ್ತಿರ ಹೋಗುವುದಿಲ್ಲ. ದೂರದಿಂದ ನೋಡಿ ಬರುವೆ. ಅಷ್ಟಕ್ಕಾದರೂ ಅವಕಾಶ ಮಾಡಿಕೊಡಿ ಮೇಡಂ!"

"ಧಾರುಣೀ ನನ್ನ ಪ್ರಾಣದ ಗೆಳತಿ ಪ್ರಿನ್ಸಿಪಲ್! ನಾನೂ ನಿಮ್ಮೊಂದಿಗೆ ಬರುವೆ....ಊ ಊ ಊ ಊ!"

"ಅಯ್ಯೋ, ದೇವರೆ! ನೀನೇಕೆ ಇಷ್ಟು ನಿಷ್ಕರುಣಿ?"

"ಅವಳೇ ಸತ್ತಮೇಲೆ ಇನ್ನೇನು?....ನಾವು ಸತ್ತರೂ ಪರವಾಯಿಲ್ಲ."

"ನಾವು ಬರೀ ನೋಡಿ ಬರುವುದಷ್ಟೆ ಮಿಸ್! ಸ್ಮಶಾನಕ್ಕೆ ಹೋಗುವುದಿಲ್ಲ."

"ನಾನೂ ಬರುವೆ, ನನ್ನ ಬಿಟ್ಟು ಹೋಗಬೇಡಿ."

"ಪ್ಲೀಸ್....ಪ್ಲೀಸ್!"

"ನನ್ನಿಂದ ನೋಡದೆ ಇರುವುದಕ್ಕಾಗುವುದಿಲ್ಲ. ದಯಮಾಡಿ....ಊ ಊ!"

ಆ ರೋದನ, ಆ ಕೋರಿಕೆ, ಆ ಬೇಡಿಕೆ, ಆ ಗೋಳು ಕರ್ಣಪಟಲ ಹರಿಯುವಂತಿತ್ತು. ಮನಃಪ್ರಾಣಗಳು ಸುಡು ಬಿಸಿಲಟ್ಟಿದ ಮಂಜಿನಂತಾದುವು. ಆ ಮಕ್ಕಳನ್ನೆಲ್ಲಾ ಸಂತೈಸಬೇಕಾದರೆ ಮತ್ತೊಂದು ಉಪಶಮನ ಸಭೆಯನ್ನು ನಡೆಸಿ ನಾನಾ ರೀತಿಯಲ್ಲಿ ಉಪದೇಶಗಳ ಮಳೆಗರೆಯಬೇಕಾಯಿತು. ಮ್ಲಾನ ಮುಖಿಗಳ ವ್ಯಥೆಯನ್ನೂ ಅಸಹಾಯಕತೆಯನ್ನೂ ನೋಡಿ ಸಹಿಸಲಾಗದೆ ಕರುಳು ನುಲಿಯತೊಡಗಿತು. ಹೃದಯ ಮಂದಿರದಲ್ಲಿ ಮೌನಪೂಜೆ ನಡೆಯುತಿತ್ತು. ಮನಸ್ಸು ಒಡೆದು ವಿಚ್ಛಿನ್ನವಾದ ಕನ್ನಡಿಯಂತೆ ಅತ್ಯಂತ ಆಹತ

ವಾಗಿತ್ತು. ಸಲಸಲಕ್ಕೂ ಧಾರುಣಿಯ ರಜತಪ್ರತ್ಥಳಿ ಅಕ್ಷಿಪಟಲದ ಮೇಲೆ ಸುಳಿಸುಳಿದಳಿಯ ತೊಡಗಿತು. ಅವಳ ಗದ್ಗದ ಕಂಠದ ನುಡಿ ಕಿವಿಗಳಲ್ಲಿ ನಿತ್ಯ ನೂತನವಾಗಿ ಝೇಂಕರಿಸುವಂತಿತ್ತು.

...ನಾನಿಲ್ಲಿಯೇ ಇರುವೆ ಮಿಸ್! ಒಳಗಡೆ ಇದ್ದು ಯಾರೊಂದಿಗೂ ಬೆರೆಯುವುದಿಲ್ಲ. ನಾನು ಮನೆಗೆ ಹೋಗಲಾರೆ...!

ಆದರೆ, ಹೀಗಾಗುತ್ತೆ ಅಂತ ಯಾರು ಊಹಿಸಿದ್ದರು? ವಿಧಿ ಯಾವ ಮಾಯಕತೆಯಲ್ಲಿ ಹೊಂಚು ಹಾಕುತಿತ್ತೋ..!

ದುಃಖಾಂತ ಹೃದಯ ಸಿಡಿದೊಡೆಯುವಂತೆ ಭಾಸವಾಗುತಿತ್ತು. ಭಾರ ಭಾರವಾದ ಶರೀರವನ್ನು ಹೊರಲಾರದೆ ಹೊತ್ತ ಕಾಲುಗಳು ಬಳುಕುತಿದ್ದುವು. ಅಧರೋಷ್ಟಗಳ ಹಸಿ ತೀವ್ರ ಒಣಗಿ ಶ್ವಾಸ ನಿಶ್ವಾಸಗಳ ಪ್ರಕ್ರಿಯೆ ವಿಕ್ಷಿಪ್ತ ವಾಗುತ್ತಿರುವಂತೆ ಭಾಸವಾಗುತಿತ್ತು. ಏನಾದರೂ ಹೇಳೋಣವೆಂದರೆ ನಾಲಿಗೆ ಹೊರಳಬೇಕಲ್ಲ? ಅಶ್ರುಲಿಪ್ತಲೋಚನಗಳನ್ನು ಒರಿಸಿಕೊಂಡು ಅವಳನ್ನು ಕಳುಹಿಸಲು ಸಹಕರಿಸಿದ್ದು ನಿಜವಾಗಿಯೂ ತಪ್ಪುಮಾಡಿದಂತಾಯಿತು ಎಂದುಕೊಂಡಳು ನಿರ್ಮಲ. ಹಾದಿ ಹೇಗೆ ಸಾಗಿತೋ ತಿಳಿಯದು. ಸಾಲು ಗಟ್ಟಿ ನಡೆಯುವ ಸಹೋದ್ಯೋಗಿಗಳ ದಂಡು ಶೋಕ ಸೂಚಕ ಕಪ್ಪುಪಟ್ಟಿ ಯನ್ನು ಧರಿಸಿ ಮೌನ ಮೆರವಣಿಗೆ ನಡೆಸಿತು. ಅರ್ಧ ಗಂಟೆಯ ನಡಿಗೆಯನ್ನು ಪೂರೈಸಿ ಆ ನತದೃಷ್ಟ ಗೃಹದ ಪ್ರಾಂಗಣಕ್ಕೆ ಕಾಲಿಟ್ಟಾಗ ಗೃಹವಲಯ ಬಂಧು ಜನರಿಂದ ತುಂಬಿ ಹೋಗಿತ್ತು. ಅಂತ್ಯಕ್ರಿಯೆಗೆ ನಿಯಮಾನುಸಾರ ವಾಗಿ ಏನೇನೋ ನಡೆದಿತ್ತು. ಅದರ ತಯಾರಿಕೆಯಲ್ಲಿ ಜನ ನಿಯುಕ್ತ ರಾಗಿದ್ದರು.

ವಾತಾವರಣ ಗಂಭೀರವಾಗಿತ್ತು.

ಜನಜಂಗುಳಿ ಮೌನಪೂಜೆ ನಡೆಸುತಿತ್ತು.

ಧಾರುಣಿಯ ಅಜ್ಜಿ ಶವದ ಬಳಿ ಆರ್ತ ಹೃದಯಳಾಗಿ ಕುಳಿತಿದ್ದಾಳೆ. ಶವದಮೇಲೆ ಸಿಡುಬಿನ ಗುಳ್ಳೆಗಳು ಕಾಣಿಸುತ್ತಿವೆ. ಧವಳಾಂಬರದಿಂದ ಸಮಾ ವೃತವಾದ ಪಾರ್ಥಿವ ಶರೀರವನ್ನು ಪುಷ್ಪಗುಚ್ಛ-ಪುಷ್ಪಹಾರಗಳಿಂದ ಅಲಂಕರಿ ಸಲಾಗಿತ್ತು. ಕಪ್ಪು ತಳೆದ ಮುಖ... ನಿಮೀಲಿತ ನೇತ್ರಗಳು.... ಹಣೆಯಮೇಲೆ ಹರಿದ ಕಪ್ಪು ಕೂದಲು... ತಿಲಕಭರಿತ ಲಲಾಟ.... ಸಿಡುಬಿನ ಮಚ್ಚೆಗಳು....

ಚೆಲ್ಲಿ ಸೂಸಿದ ಕುಸುಮದಳ....

ಶವದ ಮೇಲೆ ಪುಷ್ಪಗುಚ್ಛವನ್ನಿಟ್ಟು ಒಂದು ಘಳಿಗೆ ಮೌನ ಪ್ರಾರ್ಥನೆ ಸಲ್ಲಿಸಿದಾಗ ಒಡಲ ಸಂಕಟ ಉಕ್ಕೇರಿ ಬಂತು. ದೀರ್ಘವಾದ ನಿಟ್ಟುಸಿರಿನೊಡನೆ ಎಲ್ಲರೂ ಅಲ್ಲಿಂದ ಹೊರಟರು. ನಿರ್ಮಲ ಭಾರವಾದ ಹೃದಯ ಹೊತ್ತು ಹೆಜ್ಜೆ ತೆಗೆದಳು.

"ಪಾಪ, ತಾಯಿಯಿಲ್ಲದ ಮಗು!"

"ಅಂತಲೇ ಭಗವಂತ ಹಿಂದಕ್ಕೆ ಬರಮಾಡಿಕೊಂಡ."

"ಶಾಲೆಯಿಂದ ಮನೆಗೆ ಹೋಗುವುದಿಲ್ಲ ಎಂದಾಗ ಒತ್ತಾಯದಿಂದ ಕಳು ಹಿಸಬಾರದಿತ್ತು. ಎಷ್ಟು ಸಂಕಟ ಪಟ್ಟುಕೊಂಡಳೊ.... ಪಾಪ!"

"ಒಂದು ವೇಳೆ ಇಲ್ಲೇ ಉಳಿಸಿಕೊಂಡಿದ್ದರೆ ಬದುಕುತಿದ್ದಳೇನೋ...."

"ದೈವೇಚ್ಛೆ!"

ಈ ಪ್ರಕಾರ ದುಃಖಿತ ಹೃದಯಿಗಳ ಮಾತುಕತೆಯ ಪ್ರವಾಹ ಹರಿಯ ತೊಡಗಿತು.

ದಾರಿಯುದ್ದಕ್ಕೂ ನೂರಾರು ಹೆಜ್ಜೆಗಳ ಗತಿಯಲ್ಲಿ ಸಿಕ್ಕಿ ಲರಲರ ಸದ್ದುಗೈವ ಮರುಳು-ದರುಗೆಲೆ-ಕಲ್ಲು-ಮಣ್ಣುಗಳ ಶ್ರುತಿಬದ್ಧವಾದ ತಾನ ವಿತಾನವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಕೇಳಿಬರುತಿದ್ದುದು 'ದೈವೇಚ್ಛೆ' ಎಂಬ ಮೃದು ಮಧುರ ವೀತಗಾನ.

ಹಾ....!

ಎಲ್ಲರ ನಾಲಿಗೆಯ ಮೇಲೂ ಧಾರುಣಿಯ ಪವಿತ್ರನಾಮ ಎಡೆಬಿಡದೆ ನಲಿಯುವಾಗ ಅವಳ ಅಮಾಯಕ ವಾಕ್ಯಸರಣಿ, ಮುಗ್ಧರೂಪ, ಚಿಗರಿಯ ಚಟುವಟಿಕೆ ಸ್ಮೃತಿಪಟಲದ ಮೇಲೆ ಸುಳಿಯುತಿದ್ದುವು.

ಕೊನೆಯ ಅಂಕವಾಗಿ ಬಟ್ಟೆ-ಪುಸ್ತಕಗಳನ್ನು ಜೋಡಿಸುವ ಕೆಲಸಕ್ಕೆ ಕೈ ಹಚ್ಚಿದಾಗ ಕಂಬನಿಗಳು ತಟತಟನೆ ತೊಟ್ಟಿಕ್ಕಿದುವು. ಪುಸ್ತಕಗಳ ಜೊತೆ ದಿನಚರಿಯನ್ನು ಬರೆದಿದ್ದ ಡೈರಿ ಗೋಚರಿಸಿತು. ಎರಡು ವರ್ಷಗಳಿಂದೀಚೆಗೆ ಪ್ರತಿದಿನವೂ ಬರೆದಿದ್ದಾಳೆ. ಬರೆದ ತಾರೀಖು-ಹೊತ್ತುಗಳೆರಡೂ ತಲೆಬರೆಹ ವಾಗಿ ಮೈವೆತ್ತಿವೆ. ಲಲಿತ ಶೈಲಿಯಲ್ಲಿ-ಸರಳ ಭಾಷೆಯಲ್ಲಿ ವಿಷಯ ನಿರೂಪಣೆ ಅತ್ಯಂತ ಸಹಜವಾಗಿ ಹರಿದಿತ್ತು. ಕಹಿ-ಸಿಹಿಗಳ ಜೋಡಣೆ, ತಾಪ-

ಅನುತಾಪಗಳ ಒಕ್ಕಣೆ ಕರುಳಿರಿಯುವಂತಿತ್ತು. ರಜೆ ದಿನಗಳಲ್ಲಿ ಮನೆಗೆ ಹೋದಾಗ ಅನುಭವಿಸಿದ ಭವಣೆ, ಅದಕ್ಕೂ ಮೊದಲಿನ ದುರ್ದಿನಗಳ ಘೋರಣೆ ಮನಃಪ್ರಾಣಗಳನ್ನು ಸಮೂಲವಾಗಿ ಅಲುಗಾಡಿಸುವಂತಿದ್ದುವು. ಇತ್ತೀಚಿನ ಪುಟಗಳಲ್ಲಿ ಟ್ಯೂರ್ಶ ಆರಂಭವಾದಮೇಲೆ... ಮಿಸ್ ನಿರ್ಮಲ ಪಾಠವನ್ನು ಚೆನ್ನಾಗಿ ಹೇಳುವುದಷ್ಟೇ ಅಲ್ಲ; ಸಸ್ನೇಹದಿಂದ-ಪ್ರೀತ್ಯಾದರ ದಿಂದ ಕಾಣುತ್ತಾರೆ. ಅವರ ಪಾಠವೆಂದರೆ ತುಂಬ ಹಿತ. ಮುಂದಿನ ಸಾಲಿ ನಿಂದ ಅವರ ಸೆಕ್ಷನ್ನಿಗೆ ಬದಲಾಯಿಸಿಕೊಳ್ಳುವ ಇಚ್ಛೆ ಇದೆ. ಅನಂತರ ನಾನು ಅವರ ಪಾಠವನ್ನು ದಿನವೂ ಪಡೆಯಬಹುದು. ಎಂದಿಗೆ ಆ ಕಾಲ ಬರುವುದೋ ಎಂಬ ಆಸೆ ಮನವನ್ನು ತುಂಬಿಕೊಂಡಿದೆ. ಭಗವಂತ ನನಗೆ ಅಷ್ಟು ಮಾತ್ರ ಸಹಾಯ ಮಾಡಲಾರನೇ? ಖಂಡಿತ ನನ್ನ ಬಗ್ಗೆ ಅವನಿಗೆ ಉದಾಸೀನವಿದ್ದಿ ರಲಾರದು. ಏಕೆಂದರೆ ನಾನು ಮಾತೃಹೀನೆ, ಪ್ರೀತಿಹೀನೆ ... ನನ್ನ ಕಷ್ಟನಷ್ಟ ಗಳನ್ನು ಅವನು ಸ್ವಂತ ಕಣ್ಣುಗಳಿಂದ ನೋಡಿದ್ದಾನೆ. ಅವನ ಮನಸ್ಸು ಈಗ ಮೊದಲಿನಂತೆ ಕಠಿಣವಾಗಿರಲು ಸಾಧ್ಯವೇ ಇಲ್ಲ. ನನಗೆ ಕೆಲವೊಮ್ಮೆ 'ದೇವರು' ಇಲ್ಲವೇನೋ ಅನಿಸುವುದುಂಟು. ಆದರೆ ಎಲ್ಲರೂ ಅವನಿದ್ದಾನೆ ಎಂದೇ ಹೇಳುತ್ತಾರೆ. ಅವನಿರುವುದು ನಿಜವೇ ಆಗಿದ್ದರೆ ಯಾವ ರೀತಿ ಯಿಂದಲೂ ನನ್ನ ಮೇಲೆ ಕಿಡಿಕಾರಲು ಕಾರಣವಿಲ್ಲ. ಒಂದು ವೇಳೆ ನಾನು ತಪ್ಪು ಮಾಡಿದ್ದರೂ ಅವು ಬಾಲಾಪರಾಧಗಳು ಎನಿಸುತ್ತವೆ. ಅವುಗಳನ್ನು ಎಲ್ಲರೂ ಕ್ಷಮಿಸುತ್ತಾರೆ ಅಂದಮೇಲೆ 'ದೇವರು' ಕ್ಷಮಿಸಲಾರನೇ? . ಬಾಲಾ ಪರಾಧಗಳು ಅಪರಾಧಗಳೇ ಅಲ್ಲ ಎಂದು ಪ್ರಿನ್ಸಿಪಲ್ ಹೇಳಿದ್ದಾರೆ. ಆದರೂ ಆ ದೇವರು ನನಗೆ ತಾಯಿ ಇಲ್ಲದಂತೆ ಮಾಡಿದನಲ್ಲಾ ಏಕೆ? ... ಈ ಕೊರತೆ ಯನ್ನು ಯಾವರೀತಿ ತುಂಬಿಕೊಳ್ಳಲಿ? ನನ್ನ ಜೀವಮಾನ ಯಾರಿಂದ ಬೆಳಗ ಬೇಕು? ಹೇಗೆ, ಎಂತು ಎಂಬುದೇ ಅರ್ಥವಾಗುವುದಿಲ್ಲ....

ನಾನು ದೊಡ್ಡವಳಾದಮೇಲೆ ಇದೇ ಶಾಲೆಯಲ್ಲಿ 'ಮೇಡಂ' ಆಗುವೆ. ನನ್ನ ಗೆಳತಿ ಚಂದ್ರಿಕಾ ಸಹ ಮೇಡಂ ಆಗುತ್ತಾಳಂತೆ. ಹಾಗಾದರೆ ತುಂಬ ಒಳ್ಳೆಯದು. ನಾವಿಬ್ಬರೂ ಕೂಡಿಯೇ ಇದ್ದರೆ ಎಷ್ಟು ಚೆನ್ನ? ಅವಳೂ ಸಹ ಇದೇ ಶಾಲೆಯಲ್ಲಿ ಕೆಲಸ ಮಾಡುವುದಾಗಿ ಹೇಳುತ್ತಾಳೆ. ಅಷ್ಟಾದರೆ ಸಾಕು. ದೇವರು ದೊಡ್ಡವನು....ಅವನನ್ನು ಪೂಜಿಸಿದರೆ ನಮ್ಮ ಆಸೆಯನ್ನೆಲ್ಲಾ

ಪೂರೈಸುತ್ತಾನೆ ಎಂದು ಅಜ್ಜಿ ಹೇಳುತ್ತಾರೆ. ಅವರು ಕೊಟ್ಟ ಬಾಲಕೃಷ್ಣನ ಚಿತ್ರವನ್ನು ಜೋಪಾನವಾಗಿ ಇಟ್ಟಿರುವೆ. ಮುಂದೆ ನಾನು ಪೂಜಿಸುವುದು ಅವನನ್ನೇ. ಅವನು ತುಂಬಾ ದಯಾವಂತನೂ, ಒಳ್ಳೆಯವನೂ ಆಗಿದ್ದಾನೆಂದು ಕೇಳಿರುವೆ. ನನಗೆ ಅಂತಹ ಅತಿಯಾದ ಆಸೆ ಏನೂ ಇಲ್ಲ. ಇಲ್ಲೇ ಇದ್ದು ಮೋಡಂ ಆದರೆ ಸಾಕು....

ಅದನ್ನು ಓದಿ ಚಂದ್ರಿಕಾ ಎಷ್ಟು ಕಂಬನಿಗರೆದಳೋ, ನಿರ್ಮಲೆಯೂ ಅಷ್ಟೇ ಕಂಬನಿ ಮಿಡಿದಳು.

ಅಂದು,

ಶೋಕಾರ್ಥವಾಗಿ ಶಾಲೆಯು ತನ್ನೆಲ್ಲಾ ಕದಗಳನ್ನು ಮುಚ್ಚಿಕೊಂಡು ಮೂಕ ದುಃಖ ದಿನವನ್ನು ಆಚರಿಸಿತು.

## ೨೩

....ರುದ್ರ ಗಂಭೀರ ವಾತಾವರಣದಲ್ಲಿ ದೇದೀಪ್ಯಮಾನವಾದ ಸಾಯಂಸೂರ್ಯಪ್ರಭೆ.

....ಉತ್ಫುಲ್ಲ ಕಮಲ ಅಲಂಕರಣಸಮ ಮೇಘಮಾಲಾ ವೈಖರಿ.

....ಶೀತಲ ಶಾಂತ ವಾಯು ಲೀಲಾಖೇಲನ ಅತುಲ ಸಹಾನುಭೂತಿಯ ವರ್ಷಣ.

ನಿರ್ಮಲ ಒಂದ ವಾರ ರಜೆ ಬರೆದುಹಾಕಿ ಮನೆಯಲ್ಲೇ ಉಳಿದಿದ್ದಳು. ಆದರೂ ಅಶಾಂತಿಯ ಕೀಟ ಬಿಡದು. ನಿಂತಲ್ಲಿ ಕುಳಿತಲ್ಲಿ ಹಿಂಸ್ರ ಪಶುವಿನಂತೆ ಕಾಡುತಿತ್ತು. ಇದುವರೆಗೆ ಕಂಡುಬರುತಿದ್ದ ತಾಪ–ಪರಿತಾಪಗಳಿಗಿಂತ ಇದು ತೀರ ವಿಭಿನ್ನವಾಗಿ ಎಷ್ಟೇಪ್ರಯತ್ನಿಸಿದರೂ ಅದರ ಕಪಿಮುಷ್ಟಿಯಿಂದ ಬಿಡುಗಡೆ ಸಾಧ್ಯವಾಗುತ್ತಿಲ್ಲ. ಪುಸ್ತಕ-ಪುಸ್ತಕ ತಲೆಯೆಲ್ಲಾ ಪುಸ್ತಕಮಯವೇ ಆಗಿದ್ದರೂ ಅವನ್ನೆಲ್ಲಾ ಬದಿಗೆ ತಳ್ಳಿ ಧಾರುಣಿಯು ಸ್ಮರಣೆಯ ಹಾದಿಯಲ್ಲಿ ತಾನೇ ತಾನಾಗಿ ನಿಲ್ಲುವಳು. ಅವಳ ಅಶ್ರುಲಿಪ್ತ ಲೋಚನಗಳಲ್ಲಿ, ಕಾಂತಿಯುತ ಮುಖಬಿಂಬ ದಲ್ಲಿ ಭಾವ ಪ್ರಕಾಶನದ ಮಿಂಚು ವಜ್ರಲೇಪದಂತೆ ಮಿಂಚಿ ಸ್ವರ್ಗೀಯ ಭಾವ ವನ್ನು ಪ್ರಕಟಿಸುತಿತ್ತು. ಬಿಸಿಯುಸಿರು ಮೂಕಶೋಕದಿಂದ ಹರಿದಾಡುತಿತ್ತು.

ನಿರ್ಮಲ ಹಸ್ತಗತ ಗ್ರಂಥವನ್ನು ಮುಚ್ಚಿ, ಕಿಟಕಿಯಲ್ಲಿ ನೋಟವನ್ನು ಚೆಲ್ಲಿ ಕೊಟ್ಟಳು. ದೂರ ದಿಗಂತವಲ್ಲಿ ಹರಿದ ಬೆಳ್ಮೋಡದ ಮಹಾರೈಲು ಸ್ವರ್ಗಾಭಿಮುಖವಾಗಿ ಹರಿಯುತಿದ್ದುದು ದೃಷ್ಟಿಗೆ ಬಿತ್ತು. ಆ ಅನಂತ ಪಯಣದಲ್ಲಿ ಎಷ್ಟೆಷ್ಟು ಮಂದಿ-ಆಬಾಲವೃದ್ಧರಾದಿಯಾಗಿ ಕೂಡಿದ್ದಾರೋ ಭಗವಂತನಿಗೇ ಗೊತ್ತು ಎಂಬ ವಿಷಯ ನೆನವರಿಕೆಯಾದಾಗ ಹೃದಯ ಬನವನ್ನು ಅದಾವ ಚಿಂತನೆ ಹೊಕ್ಕಿತೋ. ಭಾವೋನ್ಮತ್ತ ಸಮ್ಯಕ್ ದೃಷ್ಟಿ ದೃಗ್ವಿಷಯದಾಚೆ ಅಂಡಲೆಯ ಹತ್ತಿತು. ಹಾಗೆ ಅದೆಷ್ಟು ಹೊತ್ತು ಉರುಳಿತೋ ತಾತ್ತ್ವಿಕ ಸ್ಫೂರ್ತಿ ಏನೇನು ಕಂಡುಕೊಂಡಿತೋ ಯಾರಿಗೆ ಗೊತ್ತು.

ಪಟ. ಪಟ. ಪಟ. ಪಟ.

ಲರಕ್. ಲರಕ್. ಲರಕ್. ಲರಕ್.

ಆ ಚಿರಪರಿಚಿತ ಅನಾತ್ಮೀಯ ಸದ್ದು ಕರ್ಣಪಟಲಗಳನ್ನು ಅನಿರೀಕ್ಷಿತವಾಗಿ ಮುಟ್ಟಿತು. ಎಲ್ಲೋ ದೂರಲೋಕದಲ್ಲಿ ಚಲಿಸುತಿದ್ದ ಗಮನ ಪಕ್ಷಿ ಸರ್‍ರನೆ ಹಿಮ್ಮರಳಿತು. ನೋಟ ಬಾಗಿಲ ಕಡೆ ಹರಿದಾಗ ಆದ ಪ್ರಥಮ ದರ್ಶನ ಮೋಹಿನಿಯದು ; ಅನಂತರ ಪ್ರಸನ್ನ ಗೋಚರಿಸಿದ. ಸ್ವಾಗತದ ಕುರುಹಾಗಿ ಹವಳದ ಕುಡಿಯಂತಹ ತುಟಿಗಳಲ್ಲಿ ಊಹಿಸಲೂ ಆಗದ ಎಳೆನಗು ಮಿನುಗಿ ಮಾಯವಾಯಿತು. ಬರ ಬರುತ್ತಲೇ ಪ್ರಸನ್ನ ಕೇಳಿದ "ಇದೇನು ? ಈ ಹೊತ್ತಿನಲ್ಲಿ ಮನೆಯಲ್ಲಿದ್ದಿ ? ಶಾಲೆಗೆ ಹೋಗಲಿಲ್ಲವೆ ?"

"ರಜೆ ತೆಗೆದುಕೊಂಡಿರುವೆ."

"ಎಷ್ಟು ದಿನ ?"

"ಒಂದು ವಾರ."

"ಅದೇಕೆ ಅಷ್ಟು ದಿನ ? ಮೈ ಚೆನ್ನಾಗಿಲ್ಲವೆ ?"

"ಏನಿಲ್ಲ ...ಸುಮ್ಮನೆ ತೆಗೆದುಕೊಂಡೆ." ನುಡಿಯಲಾರದೆ ನುಡಿದಳು ನಿರ್ಮಲ.

"ನಿಮ್ಮ ಶಾಲಾ ವಿದ್ಯಾರ್ಥಿನಿಯೊಬ್ಬಳು ಮೊನ್ನೆ ಮೃತಿ ಹೊಂದಿದಳಂತೆ ನಿಜವೆ ?" ಆಸಕ್ತಿಯಿಂದ ಕೇಳಿದಳು ಮೋಹಿನಿ.

"ಹೌದು."

"ನಮ್ಮ ಆಫೀಸಿನಲ್ಲಿ ಗೊತ್ತಾಯ್ತು. ರಾಮಮೂರ್ತಿಯ ಮಗಳ

ಜೊತೆಯ ಹುಡುಗಿಯಂತೆ."

"ಇರಬಹುದು." ನಿರ್ಮಲ ಅನ್ಯ ಮನಸ್ಕಳಾಗಿ ಉತ್ತರಿಸಿದಳು. ಕಣ್ಣುಗಳಲ್ಲಿ ಲಾಲಿಮೆ ಮಿಂಚುತಿತ್ತು.

ಆ ನೀರಸ ಉತ್ತರ ಉತ್ಸುಕ ಮನಸ್ಸಿಗೆ ಮುಳ್ಳು ಮುರಿಯಿತು. ಮೋಹಿನಿ ಸುಮ್ಮನಿರಲಾರದೆ ಕೇಳಿದಳು "ನಿನಗೆ ಗೊತ್ತೆ ಆ ಹುಡುಗಿ ?"

"ಗೊತ್ತು" ಉತ್ತರ ಯಾಂತ್ರಿಕವಾಗಿ ಹೊರಬಿತ್ತು.

"ನಾವು ಸಿನಿಮಾಕ್ಕೆ ಹೋಗಬೇಕು. ಮಗುವನ್ನು ಬಿಟ್ಟು ಹೋಗಲು ಬಂದೆವು. ನೀನು ಮನೆಯಲ್ಲಿದ್ದುದು ಒಳ್ಳೆಯದೇ ಆಯ್ತು."

ಮುಖಭಾವ ಸಮ್ಮತಿಯನ್ನು ಸೂಚಿಸಿದರೂ ತುಟಿಗಳು ಬಿರಿಯಲಿಲ್ಲ.

ಭುಜದಮೇಲೆ ಮಲಗಿ ನಿದ್ದೆ ಹೋಗಿದ್ದ ಮಗುವನ್ನು ಮಲಗಿಸಿದ ಮೋಹಿನಿ, ಅವಳ ಸಂಕೋಚ-ನಿರುತ್ಸಾಹ ಪ್ರವೃತ್ತಿಯನ್ನು ಗಮನಿಸಿ "ನಿನ್ನ ರೀತಿಯನ್ನು ನೋಡಿದರೆ ಕೋಪ-ಉದಾಸೀನಗಳು ತುಂಬಿರುವಂತೆ ಕಾಣುತ್ತೆ. ನಿನಗೆ ಅಷ್ಟೊಂದು ಅಸಮಾಧಾನವಾದರೆ ಬೇಡ; ನಾನೇ ಮಗುವನ್ನು ಎತ್ತಿಕೊಂಡು ಹೋಗುವೆ." ಎಂದಳು. ಅಕ್ಷರ ಅಕ್ಷರವೂ ನಂಜಿನ ಊಟೆಯಂತೆ ಹರಿದು ಬಂದುವು.

"ಆಗಲೇ ನಿನಗೇಕೆ ಅಷ್ಟು ಅಸಮಾಧಾನ ? ನಾನು ಯಾವುದೋ ಯೋಚನೆಯಲ್ಲಿದ್ದೆ."

"........"

"ನೀನು ಬಲುಬೇಗ ಅಪಾರ್ಥ ಮಾಡಿಕೊಳ್ಳುತ್ತಿ. ಅದಕ್ಕಿಂತ ಅರ್ಥ ಮಾಡಿಕೊಳ್ಳುವುದು ಲೇಸು."

ಪ್ರಸನ್ನ ಇಬ್ಬರ ಮುಖಭಾವವನ್ನೂ ಒಂದೆರಡು ಕ್ಷಣ ಗಮನಿಸಿ ಅಂದ,

"ಅದಕ್ಕೇಕೆ ಅಸಮಾಧಾನ ? ನಮ್ಮಲ್ಲಿ 'ಧನ' ಸಂಸ್ಕಾರ ಕಡಿಮೆಯಾದರೂ 'ಅತಿಥಿ' ಸತ್ಕಾರಕ್ಕೆ ಕೊರತೆ ಬರುವ ಕಾರಣವಿಲ್ಲ. ಈ ದೇಶದ ಸಂಪ್ರದಾಯ-ಸತ್ಕಾರ ಎರಡೂ ಒಂದೇ ನಾಣ್ಯದ ಎರಡು ಮುಖಗಳು."

"ಅಷ್ಟನ್ನು ನೀನು ಗಮನಿಸಲಿಲ್ಲ ಎಂದರೆ ತುಂಬ ಆಶ್ಚರ್ಯ...."

ನಿರ್ಮಲ ಆ ನುಡಿಯನ್ನು ಬಹಳ ಕಷ್ಟದಿಂದ ಹೊರಹಾಕಿದಾಗಲೇ ಜಾನಕಿ ಒಳ ಹೆಜ್ಜೆ ಇಟ್ಟಳು.

"ಸರಿ ಸರಿ. ನಾನು ಬೆರಗಾದದ್ದು ನಿನ್ನ ಅಸಮಾಧಾನ-ಉದಾಸೀನ ಗಳಿಗಲ್ಲ, ಯೋಚನೆಯ ಭಾರಕ್ಕೆ."

"ಅದಿಲ್ಲದಿದ್ದ ದಿನ ಯಾವುದು ನಮಗೆ?"

"ಸಂಸಾರ ಅಂದಮೇಲೆ ಏನಾದರೂ ಇರುತ್ತೆ. ನೀನೆಂದೂ ಕಿರಿಕಿರಿ ಅನುಭವಿಸಿಲ್ಲವೇನೊ ಅದರಿಂದ ಬಲು ಬೇಗನೆ ಕೋಪ ಗೊಳ್ಳುತ್ತಿ!"

ಅತ್ತೆಯ ಅಸುಸ್ವರ ಎದೆಯಾಳಕ್ಕೆ ಇಳಿಯಿತು. ಮೋಹಿನಿ ಮರು ನುಡಿಯದೆ ನೋಟವನ್ನು ನಿರ್ಮಲೆಯ ಕಡೆ ಹರಿಸಿದಳು. ಶೋಕವ್ಯಾಕುಲತೆಯ ಗಂಭೀರಮುದ್ರೆ ಮುಖದಮೇಲೆ ಅಚ್ಚೊತ್ತಿದುದನ್ನು ನೋಡಿ ಉಪಸಂಹಾರ ಪೂರ್ವಕವಾಗಿ ನುಡಿದಳು,

"ಆಫೀಸಿನ ಕಿರಿಕಿರಿ ಕಳೆಯಲೆಂದೇ ನಾವೀಗ ಹೊರಟಿರುವುದು. ನನಗೂ ಮನಸ್ಸು ಅನೇಕ ವೇಳೆ ತುಂಬಾ ಕೆಟ್ಟಿರುತ್ತೆ....ಹಾಗಾದರೆ ನೋಡುಕೊಳ್ಳುತ್ತೀಯಷ್ಟೆ? ನಾವು ಹೋಗಿ ಬರೋಣವೆ?"

"ಆಗಬಹುದು."

ಆ ಉತ್ತರವನ್ನು ಯಾರು ಹೊರಹಾಕಿದರೆಂಬುದನ್ನು ಬಹುಶಃ ಅವಳು ಗಮನಿಸಲಿಲ್ಲವೇನೋ ...ನುಡಿಯಂತೂ ಕಿವಿಯನ್ನು ತಾಗಿತು. ಇಬ್ಬರೂ ಅವಸರವಾಗಿ ಹೊರಟರು.

ನಿರ್ಮಲೆಯ ದೃಷ್ಟಿ ಹಿಂದೆಯೇ ಹರಿಯಿತು. ಆ ಸುಶಿಕ್ಷಿತ ಯುವತಿಯ ಸಾಹಸವನ್ನು ಕಂಡು ಮನಸ್ಸು ಬೆರಗಾಗಿ ಇದುವರೆಗೂ ತುಂಬಿಕೊಂಡಿದ್ದ ವಿಚಾರ ಸರಣಿ ಬಿರುಗಾಳಿಗೆ ಸಿಕ್ಕಿ ಛಿದ್ರಿತವಾದ ಮೇಘಪಟಲದಂತಾಯಿತು. ಆ ಪ್ರಸಂಗಾವೇಗದಲ್ಲಿ ಕೊಚ್ಚಿಹೋದ ಮಾನಸಿಕ ಅಣೆಕಟ್ಟೆಯನ್ನು ಮತ್ತೆ ಭದ್ರಪಡಿಸಿಕೊಳ್ಳುತ್ತ... ಎಷ್ಟುಮಾಡಿದರೂ ಇಷ್ಟೆ. ಇದುವರೆಗೆ ತನ್ನವರಿಗಾಗಿ ಎಷ್ಟೆಷ್ಟು ಸಹನೆ-ಶ್ರದ್ಧೆಗಳಿಂದ ಜೀವನ ರಂಗದ ಅಡಿಗಲ್ಲುಗಳನ್ನು ಸುಭದ್ರಪಡಿಸಲು ಶ್ರಮಿಸಿದ್ದೆನೋ ಅದೆಲ್ಲಾ ನೀರಿನಲ್ಲಿ ಹೋಮ ಮಾಡಿದಂತೆಯೇ ಸ್ಫೈ ಎನಿಸಿ ಹೃದಯ ಭಾರವಾಯಿತು.

ಅದೇ ವೇಳೆಗೆ ತನ್ನೆಲ್ಲಾ ದಫ್ತರಗಳೊಡನೆ ವಿಮಲ ಆಗಮಿಸಿದಳು. ಅವಳು ಬಿ.ಎ., ಪಾಸಾದನಂತರ ಅದೇ ಶಾಲೆಯ ನರ್ಸರಿಯಲ್ಲಿ ಕೆಲಸ ಹಿಡಿದಿದ್ದಳು. ಅದರಿಂದ ಅಂತಹ ಲಾಭವೇನಿಲ್ಲದಿದ್ದರೂ ಔದ್ಯೋಗಿಕ ಪ್ರವೃತ್ತಿ

ಅದನ್ನು ಹಿಡಿಸಿತ್ತು. ಮೇಲಾಗಿ ಎಳೆಯರೊಂದಿಗೆ ಸ್ವಚ್ಛಂದವಾಗಿ ಕೂಡಿ ಬೆರೆಯುವ ಮನಸ್ಸು....ಹೂವಿನಂತೆ ಹಗುರವಾದ ಹೃದಯ ಒಂದಕ್ಕೊಂದು ಪೂರಕವಾಗಿದ್ದುವು.

ಅವಳು ಬೀರುವಿನೊಳಗೆ ಪುಸ್ತಕಗಳನ್ನಿಟ್ಟು ಹೇಳಿದಳು,

"ಈವತ್ತು ಪ್ರಫುಲ್ಲನ ಕಾಗದ ಬಂದಿದೆ. ಅವನಿಗೆ ಕೆಲಸ ಸಿಕ್ಕಿತಂತೆ. ಜೊತೆಗೆ ಇನ್ನೊಂದು ವಿಶೇಷವೆಂದರೆ ಅವನು ಆಗಲೇ ಅಂತರ್ಜಾತೀಯ ವಿವಾಹಕ್ಕೆ ಒಪ್ಪಿಗೆ ಕೊಟ್ಟಿದ್ದಾನಂತೆ. ಈಗಿನ ಪರಿಸ್ಥಿತಿಯಲ್ಲಿ ಇಲ್ಲಿಯತನಕ ಬಂದು ಹೋಗುವುದೆಂದರೆ ಖರ್ಚು ಭರಿಸುವುದು ಕಷ್ಟ. ಜೀವನ ಕುದುರಿದ ಮೇಲೆ ಎಂದಾದರೂ ದಂಪತಿಗಳು ಕೂಡಿಯೇ ಬರುತ್ತೇವೆ. ನಿಧಾನವಾಗಿ ಅಮ್ಮನಿಗೆ ಹೇಳು, ತಲೆ ಕೆಡಿಸಿಕೊಳ್ಳುವುದು ಬೇಡ. ಹುಡುಗಿ ತುಂಬ ಒಳ್ಳೆಯ ವಳು ಇತ್ಯಾದಿ, ಇತ್ಯಾದಿ....ಬರೆದುಕೊಂಡಿದ್ದಾನೆ."

"ಆಗಲಿ ಬಿಡು ನಮಗೆ ಯಾವ ಜವಾಬ್ದಾರಿಯೂ ಬೇಡ. ನಿಶ್ಚಿಂತೆ ಯಿಂದ ಇದ್ದರಾಯಿತು !" ಎಂದಳು ನಿರ್ಮಲ.

ವಿಚಾರವನ್ನು ಬೆಪ್ಪಾಗಿ ಕೇಳುತಿದ್ದ ಜನನಿ ಶಿಲಾಮೂರ್ತಿಯಂತೆ ನಿಂತು ಬಿಟ್ಟಳು. ಇದುವರೆವಿಗೂ ಯಾವ ಜೀವನ ಬಂಧ ಅವಳನ್ನು ಭಕ್ತಿ ಭಾವದಿಂದ ಜೀವನ ಪರಿಸ್ಥಿತಿಗೆ ಹೊಂದಿಕೊಳ್ಳುವಂತೆ ಮಾಡಿತ್ತೋ ಅದೀಗ ಅಂತರಂಗಿಕವಾಗಿ ಬಾಧೆಪಟ್ಟುಕೊಳ್ಳತೊಡಗಿತು. ದುಃಖ-ದುಗುಡಗಳ ಆವೇ ಗದಿಂದ ಒಡಲ ಸಂಕಟವನ್ನು ತೋಡಿಕೊಂಡಳು,

"ಇದು ನೋಡಿ, ಈಗಿನ ಮಕ್ಕಳ ಲಕ್ಷಣ ...! ಈ ಮುದಿ ತಾಯಿಯ ಗತಿಯೇನು ಎಂಬ ಯೋಚನೆ ಯಾರಿಗಾದರೂ ಮೂಡಿತೇ ? ರೆಕ್ಕೆ ಪುಕ್ಕ ಬಲಿಯುವುದೇ ತಡ ತಮ್ಮ ತಮ್ಮ ಗೂಡು ಸೇರಿಕೊಂಡು ನಮ್ಮನ್ನು ಕೈಬಿಟ್ಟರೆ ಹೇಗೆ ? ಕೊನೆಗಾಲದಲ್ಲಿ ನಮಗೆ ಯಾರು ದಿಕ್ಕು ? ಪಾಶ್ಚಾತ್ಯ ಸಂಸ್ಕೃತಿ ಯನ್ನು ಅಳವಡಿಸಿಕೊಂಡ ವಿದ್ಯೆ ನಮ್ಮ ಮಕ್ಕಳನ್ನು ಹಾಳು ಮಾಡುತ್ತಿದೆ. ಎಷ್ಟೆಷ್ಟು ಕಷ್ಟದಿಂದ ಈ ಜೀವನ ನಡೆಸಿಕೊಂಡು ಬಂದೆ ಎಂಬುದು ಆ ದೇವ ರಿಗೇ ಗೊತ್ತು .. ತಮ್ಮ ಪ್ರಗತಿಗೆ ಯಾರು ಕಾರಣರೋ ಅವರನ್ನೇ ಮರೆಯು ವುದು ಖಂಡಿತ ನಮ್ಮ ಸಂಸ್ಕೃತಿಯಲ್ಲ. ಈ ದೇಶದ ಸಂಸ್ಕೃತಿ ಯಾರ ಮೇಲಾದರೂ ಆಧಾರ ಪಟ್ಟಿದೆಯೆಂದರೆ ಅದು ತಾಯಂದಿರ ಮೇಲೆ. ಆದರೂ

ಮಹಾ ತ್ಯಾಗಕ್ಕೆ ಬೆಲೆಯೂ ಇಲ್ಲ; ಲಕ್ಷ್ಯವೂ ಇಲ್ಲ.”

ಶರೀರಭಾರದೊಂದಿಗೆ ವ್ಯಾಕುಲ ಭಾರವನ್ನೂ ಹೊಂದಿದ ಮನಃಪ್ರಾಣಗಳಲ್ಲಿ ಕಂಬನಿಗಳು ಹೇರಳವಾಗಿ, ಅವ್ಯಾಹತವಾಗಿ ಸಂಜನಿಸಿದುವು. ವೃಧ್ಧೆ ರಾಹುಗ್ರಸ್ಥ ಚಂದ್ರಮನಂತೆ ಅತ್ಯಂತ ಮ್ಲಾನ ಮುಖಿಯಾದಳು.

“ಪ್ರಫುಲ್ಲ ಅಂತಹ ತಿಳಿಗೇಡಿಯೇನಲ್ಲ....ಅವನು ಮೃದು ಸ್ವಭಾವಕ್ಕೆ ಹೊಂದಿಕೆಯಾಗುವಂತಹವಳನ್ನೇ ಆರಿಸಿಕೊಂಡಿರಬಹುದು. ಒಂದಾನೊಂದು ಕಾಲದಲ್ಲಿ ಜಾತಿಬೇಧ–ವರ್ಗಬೇಧಗಳಿಗೆ ಪ್ರಾಧಾನ್ಯ ದೊರೆಯುತಿತ್ತು. ಈಗಿನ ವಾತಾವರಣವೇ ಬೇರೆ. ವಿದ್ಯಾಬುದ್ಧಿ ಕಲಿತ ಜನ ಒಬ್ಬರಿಗೊಬ್ಬರು ಹೊಂದಿಕೊಳ್ಳುವುದನ್ನು ಕಲಿತುಕೊಂಡಿದ್ದಾರೆ ಅವನು ಮುಂದಾಲೋಚನೆ ಇಲ್ಲದೆ ಜೀವನಕ್ಕೆ ಕಾಲಿಡುವುದಿಲ್ಲ ಬಿಡಿ.”

“ಆಗಲಿ, ನನಗೇನು ‘ಗೌರವ’ ಕೊಟ್ಟ ಹಾಗಾಯಿತು?”

“ಈಗ ಬರೆದು ತಿಳಿಸಿದ್ದಾನಲ್ಲವೇ?....ಅಷ್ಟು ಉದಾರತೆ ತೋರಲಿಲ್ಲವೇ?” ನುಡಿ ಹಾಸ್ಯರಸ ಪ್ರಧಾನವಾಗಿ ಹರಿದು ಬಂದಾಗ ನಗುವಿನ ಚಿಲುಮೆ ಉಕ್ಕಿ ಹರಿಯಿತು. ಆದರೆ ತನ್ನ ಹಾಸ್ಯರಸಕ್ಕೆ ಪ್ರತಿಯಾಗಿ ಸುಹಾಸವು ಮೂಡದಿದ್ದುದರಿಂದ ವಿಮಲ ನಿರುತ್ಸಾಹಿಯಾಗಿ ಕಾರ್ಯೋನ್ಮುಖಿಯಾದಳು. ಮಿದುಳು ಹಲವಾರು ಚಿಂತನೆಗಳಿಗೆ ಕ್ಷೇತ್ರವಾಗಿತ್ತು; ಹೃದಯ ರಾಗಾನುರಾಗಗಳಿಗೆ ರಂಗವಾಗಿತ್ತು.

## ೨೪

ನಿರ್ಮಲ ತಂಗಿಯೊಡನೆ ಮನೆಯ ಹಾದಿ ಹಿಡಿದಿದ್ದಳು.

ಸಹ ಪಾಂಥರಲ್ಲಿ ಅವಸರ–ಅಂಗಡಿಯ ಗಿರಾಕಿಗಳಲ್ಲಿ ಶ್ರದ್ಧೆ ಪ್ರದರ್ಶನ ಕಿಟ್ಟಂತೆ ಪ್ರದರ್ಶಿತವಾಗಿತ್ತು. ವಾಹನಗಳ ತೀವ್ರಗತಿ–ಮಂದಮತಿಗಳ ಮಂದಗತಿ ಬಯಸದಿದ್ದರೂ ದೃಷ್ಟಿಗೋಚರಿಸುತ್ತವೆ. ಧೂಳೀಧೂಸರಿತವಾದ ಟಾರು ಬಳಿದ ಹೆದ್ದಾರಿ ಅಲ್ಲಲ್ಲಿ ಕಿತ್ತು ಹಳ್ಳಬಿದ್ದು ವಿಕೃತವಾಗಿತ್ತು. ರಸ್ತೆಯಂಚಿನ ಕಾಲು ಹಾದಿಯಲ್ಲಿ ಎಳೆಗರಿಕೆ ಮೊಳೆತಿದ್ದರೂ ಪದಾಘಾತಕ್ಕೆ ಸಿಕ್ಕಿ ಹುಡಿಹುಡಿಯಾಗಿತ್ತು.

ವಿಮಲೆಯ ಚಿತ್ತಾಲೋಕದಲ್ಲಿ ರಾಧೇ ಶ್ಯಾಮನ ಮೂರ್ತಿ ಪ್ರತಿಷ್ಠಿತ ವಾಗಿತ್ತು. ಸಮಯೋಚಿತವಾಗಿ ಬಹಿರಂಗ ವ್ಯಾಪಾರದಲ್ಲಿ ದೃಷ್ಟಿಯನ್ನು ತೊಡಗಿಸಿದರೂ ಭಾವನಾಲೋಕದ ಚಿಂತನೆಯೇ ಬೇರೆ. ಹೃದಯರಂಗ ವಿನೂತನ ರಾಗಾನುರಾಗದ ವ್ಯಾಪಾರದಲ್ಲಿ ನಿಯುಕ್ತವಾಗಿದ್ದರೂ ತನ್ನನಂ ತಾನು ಹತೋಟಿಗೆ ತೆಗೆದುಕೊಳ್ಳುತ್ತ ನುಡಿದಳು,

"ನೀನು ಬೆಳ್ಳಗಿರುವುದನ್ನೆಲ್ಲಾ ಹಾಲು ಎಂದೇ ಭಾವಿಸುತ್ತಿ. ಕಾಲಗತಿ ಕೆಟ್ಟು ವಾಙ್ಮನಕ್ಕೆ ದೂರವಾಗಿ, ಅರ್ಥಾತ್ ಅಸಹ್ಯವಾಗಿ ಬದಲಾವಣೆ ಹೊಂದುತ್ತಿದೆ ಎಂಬುದನ್ನು ನೀನು ಅರಿತುಕೊಂಡಂತಿಲ್ಲ."

ನಿರ್ಮಲ ನಗುಮುಖದಿಂದ ನುಡಿದಳು,

"ನನ್ನಲ್ಲಿ ಅಷ್ಟೊಂದು ಚಾಣಾಕ್ಷತೆ ಇಲ್ಲಮ್ಮಾ !"

"ಇಲ್ಲದಿದ್ದಲ್ಲಿ ಖಂಡಿತ ಮೋಸ ಹೋಗುತ್ತಿ" ದೃಢವಾದ ಸ್ವರದಲ್ಲಿ ಎಚ್ಚರಿಸಿದಳು ವಿಮಲ.

"ಹೌದು....! ಆದರೂ ಸಹ ಸಮಯೋಚಿತ ಚಾಣಾಕ್ಷತೆ ಬೆಳೆಯುತ್ತಿಲ್ಲ; ಅದೇ ವಿಶೇಷ!"

ಉತ್ತರ ಸರ್‍ರಾಗವಾಗಿ ಹರಿದು ಬಂದುದರಿಂದ ವಿಮಲ ಆಶ್ಚರ್ಯಚಕಿತ ನೋಟವನ್ನು ಅವಳೆಡೆಗೆ ಹರಿಸಿದಳು. ಸಿಂಧೂರಯುಕ್ತ ಬೈತಲೆ, ಲಲಾಟ ಮಂಡಲದಲ್ಲಿ ಹರಿದಾಡುವ ಅಲೆಗೂದಲು ನಯನ ದ್ವಯಗಳ ಆಕರ್ಷಕ ಶಕ್ತಿ ಕಪೋಲತಲದ ರಂಗು ಎಲ್ಲವೂ ಯಥಾ ರೀತಿ ಇವೆ. ಎಲ್ಲಿಯೂ, ಯಾವ ಅಂಗಭಂಗಿಯಲ್ಲೂ ಅಶ್ರದ್ಧೇಯ ಚಾರಿತ್ರ್ಯ ವ್ಯಕ್ತವಾಗಲಿಲ್ಲ. ಆದರೆ ಆ ಮೂಹೂರ್ತದಲ್ಲಿ ಹರಿದ ಅವಳ ವಿಚಾರ ಸರಣಿ ವಿಚಿತ್ರವಾಗಿ ತೋರಿತು. ಏನೋ ಒಂದು ರೀತಿಯಲ್ಲಿ ಅಡಿಯಿಂದ ಮುಡಿಯವರೆಗೂ ನೋಡಿ ಶಂಕೆಯನ್ನು ತನ್ನೊಳಗೇ ಹುಗಿದಿಟ್ಟುಕೊಂಡಳು. ಎದೆಯಾಳದಲ್ಲಿ ಬಿಸಿಯುಸಿರು ನಿಶ್ಶಬ್ದವಾಗಿ ಹರಿದಾಡಿತು. ಸ್ವಲ್ಪ ಹೊತ್ತು ಹಾದಿ ಸದ್ದಿಲ್ಲದೆ ಸಾಗಿತೇನೋ ಅನಂತರ ನಿರ್ಮಲಳೇ ಮೌನ ಮುರಿದಳು.

"ನನಗೂ ಸ್ವಲ್ಪ ಸಂಶಯವಿದೆ....ಆದರೆ ನೀನು ಯಾವ ಆಧಾರದ ಮೇಲೆ ಅಷ್ಟು ದೃಢವಾಗಿ ಹೇಳುವೆಯೋ ಅರ್ಥವಾಗುತ್ತಿಲ್ಲ."

ಜನ ಸಮುದಾಯ ಯಾವ ರೀತಿಯ ಉನ್ಮಾದಕ್ಕೆ ಶರಣಾಗಿ ತಮ್ಮ

ಧ್ಯೇಯೋದ್ದೇಶಗಳನ್ನು ಗಾಳಿಗೆ ಚೆಲ್ಲಿಕೊಟ್ಟು ಡೋಲಾಯಮಾನ ಸ್ಥಿತಿಯಲ್ಲಿ ಮುಂದುವರಿಯುವುದೋ...ಆ ವಿಚಿತ್ರತರವಾದ ವರ್ತಮಾನ ಯುಗಧರ್ಮವನ್ನು ವಿಮರ್ಶಿಸುವಷ್ಟು ಸಮಯವಾಗಲೀ ಸಹನೆಯಾಗಲೀ ತನಗೆ ಇಲ್ಲವೇನೋ ಎಂಬಷ್ಟು ಉದಾಸೀನ ತಲೆಯಲ್ಲಿ ತುಂಬಿ ಹೋಗಿತ್ತು. ಆದರೂ ಪ್ರಾಸಂಗಿಕವಾಗಿ ಹೊಮ್ಮಿದ ವಾಗ್ಧಾರೆಯಲ್ಲಿ ಅನಿರೀಕ್ಷಿತವಾಗಿ ಲಘು ಕಂಪನ ಸಂಭವಿಸಿತು.

ವಿಮಲ ಒಂದೆರಡು ಘಳಿಗೆ ಯೋಚಿಸಿದಳು. ವಿಷಯವನ್ನು ಎಲ್ಲಿ ಯಾವ ರೀತಿ ಆರಂಭಿಸಬೇಕು ಎಂಬುದರಲ್ಲೇ ಜಿಹಾಸೆ ಮೂಡಿದಂತೆ, ಪ್ರಯತ್ನಿಸಿದರೂ ನುಡಿಗಳು ಹೊರಡುತ್ತಲೇ ಇಲ್ಲ. ಸ್ವಲ್ಪ ಹೊತ್ತು ಸುಮ್ಮನಿದ್ದು ಅನಂತರ ಅಭಿರಾಮ ಭಂಗಿಯಲ್ಲಿ ನಿರ್ವಿಕಾರವಾಗಿ ನುಡಿಯನ್ನು ಹೊರಹಾಕಿದಳು,

"ತಿಳಿಗೇಡಿ ಮನುಷ್ಯರಿಗೆ ಯಾವತ್ತೂ ಧ್ಯೇಯ-ಧರ್ಮಗಳೇ ಇರುವುದಿಲ್ಲ. ಅಂತಹವರನ್ನು ಯಾರಾದರೂ ಸುಲಭವಾಗಿ ನರಕದಲ್ಲಿ ತಳ್ಳಿಯಾರು."

"ಈ ಕಾಲದಲ್ಲಿ ಇತರರನ್ನು ನರಕಕ್ಕೆ ತಳ್ಳುವುದರಲ್ಲೇ ಅನೇಕರಿಗೆ ಪ್ರಗತಿ!"

"ಅದು ನಿನಗೂ ಗೊತ್ತು! ಆದರೂ ಮೋಸ ಹೋಗುತಿದ್ದಿ!....ಅದೇ ಆಶ್ಚರ್ಯ."

ನಿರ್ಮಲ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಂತೆ ಸ್ವಲ್ಪ ತಡಪಡಿಸಿ ಆ ಜಟಿಲ ಪ್ರಶ್ನೆಯಲ್ಲಿ ಮುಳುಗೇಳುತ್ತ ಭಯವಿಹ್ವಲಳಾಗಿ ನೋಟವನ್ನು ಅವಳೆಡೆಗೆ ಹರಿಸಿದಳು. ಮನದಾಳದಲ್ಲಿ ಆತ್ಮಪ್ರವಾಹ ಕಲಕಲರವವೆಬ್ಬಿಸಿತ್ತು. ಆದರೂ ವಿಚಲಿತಳಾಗದೆ ಸ್ವಾಭಾವಿಕವಾದ ತಿಳಿನಗೆಯನ್ನು ತುಟಿಗಳಲ್ಲಿ ಸೂಸಿ ಉತ್ತರಿಸಿದಳು,

"ಮೋಸ ಹೋಗುವುದು ವಿಶೇಷವಲ್ಲ, ವಿಮಲಾ! ಎಲ್ಲರ ಲೆಕ್ಕಾಚಾರಗಳೂ ತಲೆಕೆಳಗಾಗುವುದನ್ನು ನಾವು ದಿನ ನಿತ್ಯ ನೋಡುತ್ತಿರುತ್ತೇವೆ. ಆ ಸಂದರ್ಭದಲ್ಲಿ ಯಾವ ರೀತಿ ಬಗೆ ಹರಿಸಿಕೊಳ್ಳಬೇಕು ಎಂಬ ಪರಿಜ್ಞಾನ ಪೊಂದಿದ್ದರೆ ಹೇಗಾದರೂ ದಡ ಸೇರಬಹುದು. ಈಗ ಅದೇ ಬಹಳ ಸಂಕುಚಿತ....ನನಗಂತೂ, ಅದೆಲ್ಲಾ ಅರ್ಥವೇ ಆಗುವುದಿಲ್ಲ."

ಅಂದು, ಹಸ್ತಸಾಮುದ್ರಿಕವನ್ನು ಬಲ್ಲ ಸಹೋದ್ಯೋಗಿಯೊಬ್ಬರು "ಸದ್ಯದಲ್ಲೇ ನಿನ್ನ ಜೀವನದಲ್ಲಿ ಬಹುದೊಡ್ಡ ಮಾರ್ಪಾಡು ಆಗಲಿದೆ" ಎಂದಿದ್ದರು. ಅದೇನಿರಬಹುದೆಂದು ಎದುರು ನೋಡುವುದರಲ್ಲೇ 'ಸದ್ಯ' ಎಂಬ ಕಾಲಮಾನ ಕಳೆದು ಹೋಗಿದೆ. ಇದುವರೆವಿಗೂ ಅಂತಹ ಅದ್ಭುತ ಮಾರ್ಪಾಡು ಆಗಲೇ ಇಲ್ಲ. ಬಹಿರಂಗವಾಗಿ ಅದರ ಪ್ರತೀಕ್ಷೆ ಮಾಡದಿದ್ದರೂ ಆಂತರಂಗಿಕವಾದ ಚೈತನ್ಯ ತರಂಗಿಣಿಯು ಪ್ರವಹಿಸುವ ದಿಕ್ಕೇ ಬೇರೆ ...

ಆದರೆ,

"ನೀನು ಎಷ್ಟೊಂದು ವಿಚಕ್ಷಣೆಯಿಂದ ಇದುವರೆಗೆ ಎಲ್ಲವನ್ನೂ ನಡೆಸಿಕೊಂಡು ಬಂದಿದ್ದಿ. ಈಗ ನಿನ್ನ ಮಂದ ಬುದ್ಧಿ ನೋಡಿದರೆ ಖಂಡಿತ ಆಶ್ಚರ್ಯವಾಗುತ್ತದೆ." ವಿಶಾದ ಪೂರ್ಣವಾಣಿಯಲ್ಲಿ ಬಿತ್ತರಿಸಿದಳು ವಿಮಲ.

ಆ ಮಾತು ಕೇಳಿ ನಿರ್ಮಲ ವಿಚಾರಗತ್ತರಿಯಲ್ಲಿ ಸಿಕ್ಕಿಕೊಂಡಳು. ಅಮರನಾಥ ಚಿತ್ತಭಿತ್ತಿಯಲ್ಲಿ ಸುಳಿದಳಿದ. ದೇಹದಾದ್ಯಂತ ನರನಾಡಿಗಳಲ್ಲಿ ಹರಿಯುತಿದ್ದ ರಕ್ತದ ಚಿಲುಮೆ ತಾಪದಗ್ಧವಾಗಿ ಉಷ್ಣಯುಕ್ತವಾಗಿ ಹರಿದಾಡತೊಡಗಿತು. ಸ್ವಲ್ಪ ಹೊತ್ತು ಇಬ್ಬರ ತುಟಿಯೂ ಬಿರಿಯಲಿಲ್ಲ. ಹತ್ತಾರು ಸಾಗಿದನಂತರ ವಿಮಲ ಯೋಚನಾಭಾರದಿಂದ ಮೌನ ಮುರಿದಳು,

"ಈ ಕಾಲದಲ್ಲಿ ಯಾರನ್ನೂ ನಂಬುವುದು ಕಷ್ಟ. ಹೆಜ್ಜೆಹೆಜ್ಜೆಯಲ್ಲೂ ಜಾಗ್ರತರಾಗಿರುವುದು ಲೇಸು. ಇಲ್ಲದಿದ್ದರೆ ಬೆರಳು ಕೊಟ್ಟಲ್ಲಿ ಹಸ್ತ ನುಂಗುತ್ತೆ ಈ ಜಗುತ್ತು !"

ಚಿತ್ತ ಅಂಬರ ವಿಹಾರಿಯಾಗಿತ್ತು. ಒಳ್ಳಿತು–ಕೆಡಕುಗಳು ತಲೆಯನ್ನು ತುಂಬಿದ್ದುವು. ಯಾವ ರೀತಿಯಲ್ಲಿ ವಿಚಾರ ನಿರ್ಣಯ ಮಾಡಬೇಕೋ ಅರ್ಥವಾಗುತ್ತಿಲ್ಲ. ವಿಮಲ ಯಾವ ವಿಚಾರವನ್ನು ಕುರಿತು ಹೇಳುತಿದ್ದಾಳೆಂಬುದು ಅಸ್ಪಷ್ಟವಾದರೂ ಅದರ ಛಾಯೆ ಸ್ಮೃತಿ ಪಟಲದ ಮೇಲೆ ತಳಕ್ಕನೆ ಸುಳಿದು ಮಾಯವಾಯಿತು. ಮಾತಾಡದೆ ಸುಮ್ಮನೆ 'ಹೌದು' ಎಂಬಂತೆ ತಲೆಯಾಡಿಸಿದಳು. ತುಟಿಗಳು ಬಿರಿಯಲಿಲ್ಲ.

"ಕಾರ್ಯಕಾರಣಗಳ ರೂಪುರೇಷೆಗಳನ್ನು ಅರಿತುಕೊಳ್ಳದಿದ್ದರೆ ಕಷ್ಟ. ಯೋಚಿಸಿ ನೋಡು, ಈ ಜಗತ್ತು ಹಿಂಸ್ರಪಶು ಮಾತ್ರವಲ್ಲ; ಗೋಮುಖ ವ್ಯಾಘ್ರವೂ ಹೌದು !"

ಒಡನೆ ದೇಹದಾದ್ಯಂತ 'ಜುಂ'ನೆ ನಸು ಕಂಪನದ ಅಲೆ ಹರಿದಾಡಿ ಹೋಯಿತು. ನಿರ್ಮಲ ಗಾಢವಾದ ಚಿಂತೆಯಲ್ಲಿ ಮುಳುಗಿದಳು. ಯೋಚನಾ ತರಂಗಗಳು ತಲೆಯನ್ನು ಮುತ್ತಿದುವು.

ವಿಮಲ ತನ್ನದೇ ಆದ ಧಾಟಿಯಲ್ಲಿ ಮುಂದುವರಿದಳು "ಒಂದು ಕಾಲದಲ್ಲಿ ನೀನು ನನಗೆ ಪಾಠ ಹೇಳುತಿದ್ದೆ.... ಈಗ ನಾನು ಹೇಳಬೇಕಾಗಿದೆ. ನನಗೆ ಅದೇ ಆಶ್ಚರ್ಯ!"

ನಿರ್ಮಲ ಮಾತಾಡಲಿಲ್ಲ. ಅವಳ ವಿಚಾರಧಾರೆ ತೆರೆದ ಪುಸ್ತಕದಂತೆ ಸ್ಪಷ್ಟವಾಯಿತು. ಆ ಮುಹೂರ್ತದಲ್ಲಿ ಏನು ಹೇಳಬೇಕೆಂಬುದು ಹೊಳೆಯದೇ ಹೋದರೂ ಮನದಲ್ಲಿನ ಆಶಾಕಿರಣ ಅಳಿಯಲಿಲ್ಲ. ಈಗಲೇ ಅವಸರ ಪಟ್ಟು ಯಾವ ಕೆಲಸವನ್ನೂ ಕೆಡಿಸಬಾರದೆಂದು ಅಂತರಂಗ ಕೂಗಿ ಹೇಳುತ್ತದೆ. ಹೆಜ್ಜೆಯನ್ನು ಹಿಂದಿಡುವುದೋ ಮುಂದಿಡುವುದೋ ಅರ್ಥವಾಗುತ್ತಿಲ್ಲ. ಭಾವಾನುಭಾವಗಳು ಮನವನ್ನು ಸೂರೆಗೊಂಡುವು. ಅತ್ಯಂತ ಭಾರವಾದ ದನಿಯಲ್ಲಿ ಉತ್ತರಿಸಿದಳು,

"ಈ ಜಗತ್ತೇ ಇಷ್ಟು ವಿಮಲೂ!"

"ಅಂದಮೇಲೆ ಈ ಜೀವನರಂಗದ ಅಖಾಡಕ್ಕಿಳಿಯಬೇಕಾದರೆ ಮುಷ್ಟಾಮುಷ್ಟಿಗೆ ಸಿದ್ಧವಾಗಿದ್ದರೆ ಮಾತ್ರ ಗೆಲುವು ಸಾಧ್ಯ! ಇಲ್ಲದಿದ್ದಲ್ಲಿ ಮಣ್ಣು ಮುಕ್ಕುವುದೇ ಸೈ!"

ಎಂತಹ ಕಟು ಧೈರ್ಯ!

ನಿರ್ಮಲ ಹುಬ್ಬೆತ್ತಿ ಅವಳ ಕಡೆ ನೋಡಿದಳು. ಮುಖಬಿಂಬದಲ್ಲಿ ಗಂಭೀರಭಾವ ಪ್ರದರ್ಶಿತವಾಗಿತ್ತು. ನಯನದ್ವಯಗಳಲ್ಲಿ ಉಜ್ವಲ ಬೆಳಕು ಮಿಂಚುತಿತ್ತು. ನೋಡಿ ಬಿಸಿಯುಸಿರು ಬಿಟ್ಟು ನುಡಿದಳು,

"ಏನೇ ಇರಲಿ, ನಾವು ಅಷ್ಟೊಂದು ಮುಷ್ಟಾಮುಷ್ಟಿಗೆ ಹೋದರೆ ಕಷ್ಟ ವಿಮಲೂ!"

"ಅಷ್ಟು 'ಅಳುಕು' ಇದ್ದಲ್ಲಿ ಜೀವನರಂಗಕ್ಕೆ ಕಾಲಿಡಲೇಬಾರದು." ದೃಢವಾದ ಕಂಠದಿಂದ ನುಡಿದಳು ವಿಮಲ.

"ನಿನ್ನ ವಿಚಾರದೋಹನ ಅಕ್ಷರಶಃ ಸತ್ಯ. ಯೌವನದ ಪ್ರಥಮ ಉದ್ರೇಕ ಯಾವ ದೆಸೆಗೆ ಎಳೆಯುತ್ತೋ ಊಹಿಸುವುದು ಕಷ್ಟ. ಆದರೆ ಈ

ಜೀವನವನ್ನು ಯಾವರೀತಿ ನಿರ್ಣಯಿಸಬೇಕೋ ಅರ್ಥವಾಗುತ್ತಿಲ್ಲ.... ಹಾಗೆಂದು ಅದನ್ನು ಕೈಬಿಡುವುದೂ ಸಹ ಕಷ್ಟ ಅಲ್ಲವೇ ?" ಎಂದ ನಿರ್ಮಲ ಕ್ಷಣಿಕ ಮೌನದನಂತರ ಪುನಃ ಮುಂದುವರಿದಳು. "ಏನಿದ್ದರೇನು? ನಿನ ಗಿರುವಷ್ಟು ಧೈರ್ಯ ನನಗಿಲ್ಲ ವಿಮಲೂ !"

"ಅದಕ್ಕೆಂತಲೇ ನಾನು ಎಚ್ಚರಿಸಿದ್ದು."

ವಿಮಲ ಮುಗುಳು ನಕ್ಕಳು. ಉತ್ಸುಕ ನೋಟವನ್ನು ನೋಟದಲ್ಲಿರಿಸಿ ಮೃದು ಮಂದವಾಣಿಯಲ್ಲಿ ಪುನಃ ಮುಂದುವರಿದಳು "ನನ್ನ ಅವಿನಯವನ್ನು ಮನಸ್ಸಿಗೆ ತಾರದಿದ್ದರೆ ಒಂದು ಮಾತು ಹೇಳುವೆ. ಹೃದಯದ ಹೆಬ್ಬಾಗಿಲನ್ನು ಮುಂದಾಗಿ ತೆರೆದಿಟ್ಟು ಅದು ವಿಕೃತವಾಗಲು ಏಕೆ ಅವಕಾಶ ಕೊಡುತ್ತಿ ?"

" ಈ ಮಾತಿಗೆ ಉತ್ತರ ಹೇಳುವುದು ಕಷ್ಟ." ಎಂದ ನಿರ್ಮಲ ಬಹಳ ಹೊತ್ತು ಯೋಚನಾಕ್ರಾಂತಳಾಗಿದ್ದು ಅನಂತರ ತಾನಾಗಿಯೇ ಮುಂದುವರಿ ದಳು. "ಅನುರಾಗದ ಮೊಳಕೆ ಮೂಡುವುದೇ ತಿಳಿಯುವುದಿಲ್ಲ. ನಿನಗೂ ಈಗೀಗ ಅರ್ಥವಾಗುತ್ತಿರಬಹುದು. ಒಮ್ಮೆ ಪರಿವರ್ತಿಯಾದ ಮನವನ್ನು ನಿಗ್ರಹಿಸುವುದು ಕಷ್ಟ. ನನಗೂ ಕೆಲವೊಮ್ಮೆ ಧೈರ್ಯ ಸಂಪುಟ ಕುಸಿಯವು ದುಂಟು, ಆದರೂ ಸಹ ಈವರೆಗೆ ನೆಚ್ಚು ಕಳೆದುಕೊಂಡಿಲ್ಲ. ದೇವರು ನನಗೆ ಸಹಾಯ ಮಾಡುತ್ತಾನೆಂಬ ನಂಬಿಕೆಯ ಮೇಲೆ ದಿನಗಳೆಯುತ್ತಿರುವೆ."

"......."

ಕೆಲವು ಕ್ಷಣಗಳು ನಿಶಬ್ದವಾಗಿ ಉರುಳಿದುವು. ಚಿಂತಿತ ಚಿತ್ತ ಸ್ನೇಹೋ ದ್ವೇಲ ಹೃದಯವನ್ನು ಕೊರೆಯಹತ್ತಿತು. ತಂಗಿಯ ಕಡೆ ಅಪಾಂಗವನ್ನು ಹರಿಸಿ ಏನೋ ಒಂದು ರೀತಿಯಲ್ಲಿ ದೈನ್ಯಭಾವದಿಂದ ನುಡಿದಳು ನಿರ್ಮಲ,

"ಈ ವಿಚಿತ್ರ ಜಗತ್ತಿನ ವ್ಯಾಪಾರ ಕಷ್ಟ....ನಾವೊಂದು ಬಯಸಿದರೆ, ಅದೊಂದು ಆಗುತ್ತೆ."

"ಅಂತಲೇ ನಾನು ಎಚ್ಚರಿಸುತ್ತಿರುವೆ."

"ಒಮ್ಮೆ ಹೆಜ್ಜೆಯನ್ನು ಮುಂದಿಟ್ಟಮೇಲೆ ಹಿಂತೆಗೆಯುವುದು ಕಷ್ಟ. ನನ ಗೀಗ ಏನು ಮಾಡುವುದಕ್ಕೂ ತೋಚುವುದಿಲ್ಲ."

"ನಾವಿನ್ನೂ ಬೀಜಾವಸ್ಥೆಯಲ್ಲಿದ್ದೇವೆ. ಉಚಿತಾನುಚಿತಗಳನ್ನು ಪರಿಶೀಲಿ ಸದೆ ಮುನ್ನುಗ್ಗುವುದು ಸರಿಯಲ್ಲ."

ಮುಂದೆ ಸ್ವಲ್ಪ ದೂರ ಮೌನಭಾರದಿಂದ ಸಾಗಿತು ಹಾದಿ. ಎದೆಯಾಳ ದಲ್ಲಿ ತಣ್ಣಗೆ ಸಂಜನಿಸಿದ ಕಣ್ಣೀರು ಹೃದಯದ ಗಾಯಗಳನ್ನು ಪ್ರಕ್ಷಾಲನೆ ಮಾಡಿತೋ ಏನೋ. ಕಳೆದುಳಿದ ಶಕ್ತಿಯನ್ನೆಲ್ಲ ಕ್ರೋಢೀಕರಿಸಿಕೊಂಡಂತೆ ಹೇಳತೊಡಗಿದಳು ನಿರ್ಮಲ,

"ಈ ಪ್ರಬುದ್ಧ ದೇಶದ ನವ ಚೈತನ್ಯದಲ್ಲಿ ಜಾತಿ-ನೀತಿಗಳ ಬಗ್ಗೆ ಇನ್ನೂ ಉಳಿದಿರುವ ಅಭಿಮಾನ ತುಂಬ ಆಶ್ಚರ್ಯ. ಹೋಗಲಿ. ಎಂದರ ಕಲಿತವರಲ್ಲೂ ಅದೇ ಹಾಡೆ? ಇದುವರೆಗೆ ಯಾವ ಸಾಮಾಜಿಕ ಪ್ರಾಕಾರ ದಲ್ಲಿ ನಮ್ಮ ಜೀವಮಾನ ಕಳೆದಿದೆಯೋ ಆ ಸಮಾಜವೆಂದರೆ ಈಗ ಏನೋ ಒಂದು ಬಗೆಯ ಜುಗುಪ್ಸೆ. ಈ ಬೃಹದ್ ಪ್ರಾಕಾರ ಪರಿಮಿತಿಯಿಂದ ತಪ್ಪಿಸಿ ಕೊಂಡು ಹೋಗುವುದಾದರೂ ಎಲ್ಲಿಗೆ? ಹೋಗಲೇಬೇಕೆಂದರೆ ಅಂತಹ ನಿರ್ಬಾಧ ಸ್ಥಳವಾದರೂ ಯಾವುದು? ಆ ಪ್ರಶ್ನೆ ಎದ್ದಾಗ ಎಲ್ಲಾದರೂ ಸುಭದ್ರ ಬಾಹುಗಳ ಆಶ್ರಯ ಪಡೆಯೋಣ ಎಂಬ ಹಂಬಲ ಮೂಡುವುದು ಸಹಜ... ಈ ಜಾಗ್ರತ ಖೇದ ಸ್ವಪ್ನಾವಸ್ಥೆಯಲ್ಲಿ ಮುನ್ನುಗ್ಗಿದುದೇ ಇಂದಿನ ಸಮಸ್ಯೆಗೆ ಕಾರಣವಿರಬಹುದು. ಆದರೂ ನಾನು ಈಗಾಗಲೇ ನಂಬಿಕೆಯನ್ನು ಕೆಡಿಸಿಕೊಳ್ಳಲಾರೆ. ಭಗವಂತನನ್ನು ಕುರಿತು ಸದಾ ಮೊರೆ ಇಡುವೆ. ಅವನು ನನಗೆ ಸಹಾಯ ಮಾಡಬಹುದು."

"ಎಂದೂ...... ಯಾವುದಕ್ಕೂ ನಂಬಿಗೆಯನ್ನು ಬಿಟ್ಟುಕೊಡುವ ಪ್ರಸಂಗ ಬರುವುದಿಲ್ಲ. ಒಂದರೆ ಆ ಅಧ್ಯಾಯವನ್ನು ಮುಗಿಸಿದಂತೆಯೇ...."

ವಿಮಲ ಇನ್ನೂ ಏನೇನು ಹೇಳಬೇಕೆಂದಿದ್ದಳೋ ಅದೆಲ್ಲಾ ನಾಲಿಗೆಯ ಮೇಲೆಯೇ ಉಳಿಯಿತು. ಸಹಜ ಅನುಭಾವ ಕಲ್ಪನಾ ಜಾಲದ ಎಳೆಗಳಿಗೆ ತಾಕಲಾಡಿ ಕಿಂಚಿತ್ ಶಾಂತಿಯ ಕಣಗಳು ಮೂಡಿದುವು. ಯೋಜನಾಭಾರ ದಿಂದ ಹತ್ತುಮಾರು ಕಳೆಯಿತು. ಹಾದಿಯುದ್ದಕ್ಕೂ ಸಾಮಾನ್ಯ ಸ್ತ್ರೀ ಜನರ ಮುಗ್ಧತೆಯ ರಾಮಣೀಯಕಸಿಧಿಯು ಕಂಗೊಳಿಸುತಿತ್ತು. ಆಲೋಚನಾರಹಿತರಾಗಿ ಕುಸಂಸ್ಕಾರದ ಉದ್ದಂಡ ಬಲೆಯಲ್ಲಿ ಸ್ವಚ್ಛಂದವಾಗಿ ವಿಹರಿಸುವ ವ್ಯರ್ಥ ಸಾಹಸಿಗಳನ್ನು ನೋಡಿ ಒಮ್ಮೆ 'ಪಾಪ' ಎನ್ನಿಸಿದರೂ ಇನ್ನೊಮ್ಮೆ ಹಾಗಿರು ವುದೇ ಬಹಳ ಕ್ಷೇಮ. ಅಂಧಕಾರ ಚಿತ್ತಕ್ಕೆ ಯಾವ ಭಂಗ-ಬವಣೆಗಳ ಗೋಳೂ ತಟ್ಟುವುದಿಲ್ಲ. ಸೂಕ್ಷ್ಮ ಚಿತ್ತವೇ ಈ ರೀತಿ ನಲುಗಬೇಕಾದರೆ....ಎನಿಸಿ

ತಾಪದಗ್ಧ ನಿಟ್ಟುಸಿರೊಂದು ಹೊರ ಹರಿದು ಬಂತು.

ತಂಗಾಳಿಯ ತರಂಗದೊಡನೆ ಚಿನ್ನಾಟವಾಡುತಿದ್ದ ಶುಭ್ರ ಉತ್ತರೀಯ ವನ್ನು ಬಿಗಿಹಿಡಿದು ತದೇಕ ಚಿಂತನೆಯಿಂದ ಮುಂದುವರಿದಳು ನಿರ್ಮಲ. ಚಿಂತಾಕ್ಷುಬ್ಧ ದೃಷ್ಟಿ ಹಾದಿಯ ನೇರಕ್ಕೆ ಹರಿದರೂ ಏನನ್ನೂ ನೋಡದಿತ್ತು. ಮುಂದೆ ಭವ್ಯ ಭವಿತವ್ಯ ಯಾವ ರೂಪು ತಳೆಯುವುದೋ, ದೂರಗಮ್ಯ ಯಾವ ದಿಶೆಯಲ್ಲಿದೆಯೋ ದೇವರಿಗೇ ಗೊತ್ತು. ನನಗೀಗ ಯಾವ ಹಾದಿ ಹಿಡಿಯ ಬೇಕೋ ಅರ್ಥವಾಗುವುದಿಲ್ಲ ಎಂದುಕೊಂಡಳು.

ಆಕಾಶದಲ್ಲಿ ಕಾರ್ಮೋಡಗಳು ಕಲೆತಿದ್ದುವು. ಹವೆ ಅಂತ್ಯತ ಶೀತಲ ಸಿಕ್ತವಾಗಿತ್ತು. ಬಿರುಗಾಳಿಯಿಂದ ಮೇಲೇಳುವ ಧೂಳಿನಿಂದ ಪರಿಸರವೆಲ್ಲ ಧೂಸರಿತವಾಗಿತ್ತು. ಬೇಗನೆ ಮನೆಯನ್ನು ಮುಟ್ಟಿಕೊಳ್ಳುವುದು ಕ್ಷೇಮ ಎಂಬ ಯೋಚನೆ ಪ್ರಕೃತಿಯ ಒತ್ತಡದಿಂದ ಮೂಡಿತು; ಇಬ್ಬರೂ ನಡಿಗೆ ಯನ್ನು ತೀವ್ರಗೊಳಿಸಿದರು.

"ನೀನು ಯಾವುದನ್ನೇ ಆಗಲಿ ಬಹಳವಾಗಿ ಹಚ್ಚಿಕೊಳ್ಳುತ್ತಿ; ತುಂಬಾ Sensitive! ಅದು ಸರಿಯಲ್ಲ. ಆವತ್ತಿನಿಂದ ನಿನ್ನ ಮುಖದಲ್ಲಿ ಗೆಲುವೆಂ ಬುದೇ ಇಲ್ಲ. ಹೀಗಾದರೆ ಹೇಗೆ?" ಒತ್ತಿ ಹೇಳಿದಳು ವಿಮಲ.

"ಏನು ಮಾಡಲಿ, ಹೇಳು? ಈ ಮನಸ್ಸಿಗೆ ತಗುಲಿದ ಧಕ್ಕೆ ಸಾಮಾನ್ಯ ವೇನಲ್ಲ.... ಮೊದಲನೆಯ ಘಾತ ಧಾರುಣಿಯ ಅಪಮೃತ್ಯು!"

ವಿಮಲ ಮಾತಾಡದೆ ಅದೇ ವಿಚಾರವನ್ನು ಕುರಿತು ಮೆಲಕು ಹಾಕಿದಳು.

ನಿರ್ಮಲ ಮ್ಲಾನಮುಖಿಯಾಗಿ ಮುಂದುವರಿದಳು "ಅವಳ ಪರಿಚಯ ವಾದ ಮೇಲೆ ಅವಳನ್ನು ನೋಡದಿದ್ದರೆ ಏನೋ ಕೊರತೆ ಎನಿಸುತಿತ್ತು. ಒಮ್ಮೆ ನಮ್ಮಲ್ಲಿಗೆ ಕರೆದುಕೊಂಡು ಹೋಗುವುದಾಗಿಯೂ ಅವಳಿಗೆ ಹೇಳಿದ್ದೆ. ಪಾಪ, ಹೀಗಾಗಬಾರದಿತ್ತು." ವಾಕ್ಯಸರಣಿ ಕೊನೆಗೊಂಡಾಗ ಎದೆಯಾಳದಿಂದ ಭಾರವಾದ ಉಸಿರೊಂದು ಹೊರಬಿತ್ತು, ಜೀವಂತ ಚಿಂತಾ ಪೂರವೇ ಹೊರ ಬಿದ್ದಂತೆ.

"ನತದೃಷ್ಟ ಹುಡುಗಿ....!"

ಅನಂತರ ಇನ್ನೆಷ್ಟು ವಿಚಾರಗಳು ಬಂದು ಹೋದುವೋ, ಅವೆಲ್ಲಾ ಚಿತ್ತಪ್ರವೃತ್ತಿಗೆ ಅಲ್ಪ ಸಮಾಧಾನವನ್ನು ನೀಡಿದರೂ ಸ್ವಾಂತನ ನೀಡಲಿಲ್ಲ.

....ಮರುದಿನ....

ಉದಯುಗೂಢ ರಶ್ಮಿಗಳಿಂದ ಪೂರ್ವದಿಶೆಯು ಪಾಂಡುರವಾದಾಗಲೇ ಖಗಗಾನ ಕರ್ಣಮನೋಹರವಾಗಿ ಹೊಮ್ಮುತಿತ್ತು. ಇನ್ನಷ್ಟು ಹೊತ್ತಿನೊಳಗಾಗಿ ಎತ್ತರವಾದ ವೃಕ್ಷಶಿಖಗಳ ಮೇಲೆ ಪೀತಾಭಕಿರಣಗಳ ಸ್ವರ್ಣಜಾಲ ಹರಡಿತು. ಪೂರ್ವೀ ದಿಜ್ಞಾರಿಯಲ್ಲಿ ಕಾಂಬ ಆನಂದವಿಶೇಷ ಪ್ರಿಯ ಸಮಾಗಮ ಜನ್ಯದಿಂದ ಉಂಟಾದಂತೆ ಭಾಸವಾಗುತಿತ್ತು. ಆ ಚಿತ್ರವಿಚಿತ್ರ ಕಾಂತಿಯಿಂದ ಉದ್ದೀಪ್ತನಾದ ರಾಧೇಶ್ಯಾಂ ಪ್ರಸನ್ನಮುಖಿಯಾಗಿ ಹೇಮಾಂಗಿನಿಯ ಕೊಠಡಿಗೆ ಪದಾರ್ಪಣೆ ಮಾಡಿದ. ಅವಳು ಯಾವುದೋ ಪುಸ್ತಕ ಪಠಣದಲ್ಲಿ ಸಂಪೂರ್ಣ ನಿಮಗ್ನಳಾಗಿದ್ದಳು. ರಾಧೇಶ್ಯಾಂ ಹೆಜ್ಜೆ ಕದಲಿಸದೆ ಬಾಗಿಲ ಬಳಿಯಲ್ಲಿಯೇ ನಿಂತು ನಿಟ್ಟಿಸತೊಡಗಿದ. ಅವಳ ಮುಖಬಿಂಬದ ಮೇಲೆ ಪುಸ್ತಕ ಪ್ರಪಂಚದ ಇತಿಹಾಸವೆಲ್ಲ ಭಾವಧಾರೆಯಾಗಿ ಹೊಮ್ಮುತಿತ್ತು. ಒಂದು ವಿಧವಾದ ಕ್ಷಮೆ,....ಇನ್ನೊಂದು ವಿಧವಾದ ಗ್ಲಾನಿ....ಮತ್ತೊಂದು ವಿಧವಾದ ಭಾವುಕತೆ....ಮನವನ್ನು ಸೆಳೆದುವು. ಹಾಗೆ ಅದೆಷ್ಟು ಹೊತ್ತು ನಿಂತು ನೋಡಿದನೋ ಬಹುಶಃ ಆತನೇ ಅರಿಯ. ಒಮ್ಮೆ ನಗುವುಕ್ಕಿ ಬಂದರೂ ತನ್ನನ್ನು ತಾನು ಹತೋಟಿಯಲ್ಲಿಟ್ಟುಕೊಂಡ.

ಸ್ವಲ್ಪಹೊತ್ತಿನನಂತರ ಚಿತ್ತಫಲಕದ ಮೇಲೆ ಮಾನವ ಛಾಯೆ ಫಳಕ್ಕನೆ ಮಿಂಚು ಸುಳಿದಂತೆ ಸುಳಿಯುತ್ತಲೂ ಹೇಮಾಂಗಿನಿ ತಟ್ಟನೆ ಕೊರಳೆತ್ತಿ ನೋಡಿದಳು. ಪರಸ್ಪರ ಸ್ನೇಹಾನುರಾಗದ ಕುರುಹಾಗಿ ಇಬ್ಬರ ಮುಖಮಂಡಲದ ಮೇಲೂ ಎಳೆನಗು ಆನಂದಲಹರಿಯಂತೆ ಉಗಮವಾಯಿತು.

"ಈಗ ಬಂದಿರಾ ?"

"ಓಹೋ ! ನಾನು ಬಂದು ಎಷ್ಟು ಹೊತ್ತು ಆಯಿತು ಗೊತ್ತೇ ?"

"ನಿಜವಾಗಿ....?"

"ನೀವು ಈ ಲೋಕದಲ್ಲೇ ಇರಲಿಲ್ಲ."

"ಹಾಗಿದ್ದರೆ ಸ್ವರ್ಗಕ್ಕೆ ಹೋಗಿಬಂದೆ ಅನ್ನಿ !"

ಒಡನೆ ಅನ್ಯೋನ್ಯ ರೀತಿಯಲ್ಲಿ ಪುನಃ ನಗುವಿನ ವಿಮಲಧಾರೆ ಉಕ್ಕಿ ಹರಿಯಿತು.

ಹೇಮಾಂಗಿನಿ ಪುಸ್ತಕವನ್ನು ಮುಚ್ಚಿಟ್ಟು ಎದ್ದುನಿಂತು ಕೇಳಿದಳು

"ಈಗ ಹೇಳಿ....ನೀವು ಏಕೆ ಉದಾಸೀನವಾಗಿದ್ದೀರಿ ?"

ರಾಧೇಶ್ಯಾಂ ಮಾತಾಡದೆ ನಗುತ್ತ ನಿಂತ. ಅರಳುಗಣ್ಣುಗಳಲ್ಲಿ ತುಂಟತನ ನಲಿದಾಡಿತು. ಆ ಮುಹೂರ್ತದಲ್ಲಿ ಅವಳ ಸ್ನೇಹಸಂಬಂಧದೊಡನೆ ಮತ್ತಾವುದೋ ಅವ್ಯಕ್ತ ಮಧುರಭಾವನೆ ಅನಿರೀಕ್ಷಿತವಾಗಿ ಮೂಡಿ ಬಂತು. ಒಂದೆರಡು ಘಳಿಗೆ ಯೋಚಿಸಿದ. ಕ್ಷಣಕ್ಷಣಗಳು ಅನುಕ್ರಮವಾಗಿ ನಿಷ್ಕ್ರಮಿಸುತ್ತಿದ್ದುವು.

ಅವಳು ಮತ್ತೆ ಪ್ರಶ್ನಿಸಿದಳು "ಏಕೆ ಸುಮ್ಮನಿದ್ದೀರಿ ?"

ತನ್ನ ಜೀವನೋದ್ದೇಶದಲ್ಲಿ ಅಡಗಿರುವ ಆನಂದವನ್ನೂ, ಲಾಲಸೆಯನ್ನೂ ನಿಯಂತ್ರಣಕ್ಕೊಪ್ಪಿಸಿ ಒಂದು ಪರಿಮಿತಿಯಲ್ಲಿಯೇ ನಡೆದು ಬಂದುದಕ್ಕೆ ಹೆಜ್ಜೆಗಳು ಸ್ಥಿರಋಜುವಾದರೂ ಅವಳ ಪ್ರಶ್ನೆಯಿಂದ ಅಂತರಂಗಿಕ ಪ್ರವಾಹ ಉಲ್ಲೋಲಕಲ್ಲೋಲವಾಗುತ್ತಿರುವುದು ಅನುಭವಕ್ಕೆ ಬಂದಿತು. ಒಂದು ವಿಧವಾದ ಆಶಂಕೆ-ಸಹಕಾರಗಳ ಸಮ್ಮಿಳನ ಭಾವದಿಂದ ಬಿತ್ತರಿಸಿದ,

"ಉದಾಸೀನ ಅಲ್ಲ ರಾಣಿಯವರೇ ! ವಿಚಕ್ಷಣೆ !"

"ಆ ಹಾರಿಕೆ ವಿಚಾರ ಒತ್ತಟ್ಟಿಗಿರಲಿ ; ನೀವು ನಿಜವಾಗಿಯೂ ಹೇಳಿರಿ, ಯಾವ ಕಾರಣಕ್ಕಾಗಿ ಮದುವೆಯನ್ನು ಮುಂದೂಡುತಿದ್ದೀರಿ ?"

"ರಾಗಮಯ ರೂಪಕವು ವಿಷಾದಾಂತವಾಗಬಾರದು....ಅಂತಲೇ ನಿಧಾನಗತಿಗೆ ಪ್ರಾಧಾನ್ಯ."

"ಅರ್ಥಹೀನ ವ್ಯವಹಾರ !"

"ಬಿಡಿ....ಈ ವಿಶ್ವದಲ್ಲಿ ಸಂಭವಿಸುವ ಪ್ರತಿಯೊಂದಕ್ಕೂ ಸಕಾರಣವಿರುತ್ತದೆ. ಕಾರ್ಯಕಾರಣಗಳನ್ನು ಕುರಿತು ಆಲೋಚಿಸುವುದರಲ್ಲಿ ಅದರ ಮಹತ್ವವನ್ನು ಅರಿತುಕೊಳ್ಳುವುದರಲ್ಲಿ ಕಾಲ ವ್ಯಯವಾದರೆ ವ್ಯಥೆ ಪಡಬೇಕಾಗಿಲ್ಲ."

"ಅನಿಶ್ಚಿತತೆ ಎಂದೂ ಅಸಹನೀಯ." ಕಂಠಸ್ವನ ಅನುಕಂಪದ ಮೂಸೆಯಲ್ಲಿ ಹರಿದುಬಂದಾಗ ಅನಿರೀಕ್ಷಿತವಾಗಿ ಹೇಮಾಂಗಿನಿಯ ಮುಖಮಂಡಲ ಕಾಂತಿಹೀನವಾಯಿತು. ಮರುಕ್ಷಣವೇ ತನ್ನನ್ನು ತಾನು ಹತೋಟಿಗೆ ತೆಗೆದುಕೊಳ್ಳುತ್ತ ಮುಂದುವರಿದಳು "ನೀವೇಕಿಷ್ಟು ಅನುಮಾನಿಸುತ್ತಿರುವಿರಿ ? ವಜ್ರದ ಬೆಲೆಯನ್ನು ನೀವು ಅಷ್ಟು ಸುಲಭದಲ್ಲಿ ಅಳೆಯಲಾರಿರಿ. ಅಷ್ಟೇ ಅಲ್ಲ, ಅದು ಕೈತಪ್ಪದಂತೆ ಎಚ್ಚರ ವಹಿಸಿದರೆ ಮಾತ್ರ ನಿಮ್ಮ ಪಾಲು....ಅನಂತರ

ನೀವು ಯಾರನ್ನೂ ಆಕ್ಷೇಪಿಸುವಂತಿಲ್ಲ."

"ನಾಚಿಕೆಗೇಡು !" ಉದ್ಗಾರ ತೆಗೆದ ರಾಧೇಶ್ಯಾಂ "ಅಷ್ಟೂ ಸಂಯಮ ಇಲ್ಲದೆ ಹೋದರೆ ಮನುಷ್ಯತ್ವವೇ ಇಲ್ಲ ಎನ್ನುವೆ ನಾನು !"

"ನಿಮ್ಮಷ್ಟು ವಿಳಂಬ ಮನೋಭಾವ ಎಲ್ಲರಿಗೂ ಇರಬೇಕು ಎಂದೇನಿಲ್ಲ ಜೀವನಕ್ಕೆ ಸಿದ್ಧವಾಗಿರುವವರು ವಿಳಂಬ ಮಾಡುವುದಾದರೂ ಏಕೆ ?"

"ನನಗೆ ಅನುಕೂಲಗಳು ಮಾತ್ರವಲ್ಲ, ಅನಾನುಕೂಲಗಳೂ ಇವೆ."

"ನಿಜವಾದ ಕಾರಣ ಕೊಡಬಲ್ಲಿರಾ ?"

ಯಾವುದೋ ವೀಣಾನಾದ ಆತನ ಹೃದಯ ತಂತುಗಳಲ್ಲಿ ಅಪಸ್ವರ ವನ್ನು ಮಿಡಿಯಿತು. ಸ್ವಲ್ಪಹೊತ್ತು ಶಿಲಾಮೂರ್ತಿಯಂತೆ ನಿಂತ. ನಿರಾಕಾ ರತೆಯ ಘನ ಸ್ವರೂಪ ದೃಷ್ಟಿಯ ಕಕ್ಷೆಯಲ್ಲಿ ನಲಿಯಹತ್ತಿತು. ನಿಶ್ಶಬ್ದತೆಯ ಪದಧ್ವನಿ ಸುತ್ತಿಗೆಯ ಪೆಟ್ಟಿನಂತೆ ಮಸ್ತಕದ ಮೇಲೆ ಬೀಳುತಿತ್ತು. ಕ್ಷಣ ಕ್ಷಣಕ್ಕೂ ಸ್ತಬ್ಧಗೊಳ್ಳುತ್ತಿರುವ ಅಂತರಂಗ ಉತ್ತರಿಸಲು ಅವಕಾಶ ಕೊಡು ತ್ತಲೇ ಇಲ್ಲ. ಆತ ಒಂದೆರಡು ಕ್ಷಣ ವಿಮನಸ್ಕನಾಗಿ ನಿಂತ.

ಅವಳು ಅತ್ಯಂತ ವಿಷಾದವಾಣಿಯಲ್ಲಿ ಮುಂದುವರಿದಳು,

"ಬಹುಶಃ, ನಿಮ್ಮ ನ್ಯಾಯವಾದನೆಯಲ್ಲಿ ದಿನನಿತ್ಯ ಕಂಡುಬರುವ ಚಾರಿತ್ರಿಕ ಲೋಪ-ದೋಷಗಳನ್ನು ಜೀವನದೊಡನೆ ಒರೆ ಹಚ್ಚುವ ಗೋಜಿಗೆ ನೀವು ಇಳಿದಿರಬಹುದು ! ಕಪ್ಪು ಕನ್ನಡಿಯಿಂದ ನೋಡಿದರೆ ಜಗತ್ತೇ ಕಪ್ಪಾಗಿ ಕಾಣಿಸುತ್ತದೆ. ಅದನ್ನಷ್ಟು ನೀವು ಅರಿತುಕೊಳ್ಳದಿರುವುದು ಆಶ್ಚರ್ಯ !"

"ಹಾಗಲ್ಲ ; ನೀವು...."

ಆ ಮಾತನ್ನು ಮುಂದುವರಿಯಗೊಡದೆ ಹೇಮಾಂಗಿನಿ ನಡುವೆ ಬಾಯಿ ಹಾಕಿದಳು,

"ನೀವು 'ಹಿಂದೂಕೋಡ್' ಆರಾಧಕರು ನಿಮಗೆ ಮಡದಿ ಸರ್ವವಿಧ ದಲ್ಲೂ 'ದಾಸಿ'ಯಾಗಿರಬೇಕೆಂಬ ಆಸೆಯನ್ನು ಬೆಳಗಿಸಿಕೊಂಡವರು ! ಅಂತಲೇ ಕಲಿತ-ಸ್ವತಂತ್ರವಾಗಿ ಆಲೋಚಿಸಬಲ್ಲ ನಾರಿ ಎಂದರೆ ಸ್ವಲ್ಪ ಭಯ ! ಎಂದರೆ ಒಪ್ಪಿಕೊಳ್ಳುವಿರಷ್ಟೆ ?"

ರಾಧೇಶ್ಯಾಂ ದೀಪ್ತ ಕಂಠದಿಂದ ದೃಢವಾಗಿ ನಿರಾಕರಿಸಿದ "ಅಲ್ಲ... ಅಲ್ಲ!"

ಹೇಮಾಂಗಿನಿ ಪಶ್ಚಾತ್ತಾಪದಿಂದ ಕೂಡಿದ ಶಾಂತ ಸ್ವರದಲ್ಲಿ ಹೇಳಿದಳು,

"ನಿಮ್ಮ ವಿಧಿ-ವಿಧಾನ ನನಗೆ ಅರ್ಥವಾಗುವುದಿಲ್ಲ ಎಂದುಕೊಳ್ಳಬೇಡಿ!"

ಒಡನೆ ಎರಡು ಹೆಜ್ಜೆ ಮುಂದುವರಿದು ಅವಳ ಎರಡೂ ಕೈಗಳನ್ನು ಹಿಡಿದುಕೊಂಡು ಅತ್ಯಂತ ಆತ್ಮೀಯ ಭಾವದಿಂದ ನುಡಿದ,

"ನೀವು ಅಷ್ಟೊಂದು ಮುಂದೆ ಹೋಗುವ ಕಾರಣವಿಲ್ಲ. ನನ್ನ ಅಂತ ರಂಗದಲ್ಲಿರುವ ಈಶ್ವರ ಎಲ್ಲಕ್ಕೂ ಸಾಕ್ಷಿ!"

ಆದರೆ....!

ಆ 'ಈಶ್ವರ' ಎಂಬುವವನು ಇನ್ನೆಷ್ಟು ಕಠೋರ ಎಂಬುದನ್ನು ಸಾಮಾನ್ಯರು ಅರಿಯರು. ಆ ಮುಹೂರ್ತದಲ್ಲಿ ನಿರ್ಮಲೆಯಿಂದ ಪ್ರೇರಿತಳಾಗಿ ತನ್ನ ಗೆಳತಿಯೊಂದಿಗೆ ಅದೇ ವಿಚಾರವನ್ನು ಪುನರ್ವಿಮರ್ಶಿಸಿ ಅಂತ್ಯ ತೀರ್ಮಾನ ಕೈಕೊಳ್ಳಲೆಂದೇ ಆಗಮಿಸಿದ ವಿಮಲ ಆ ದೃಶ್ಯವನ್ನು ನೋಡಿ ಅತ್ಯಂತ ಖೇದದಿಂದ ಕಣ್ಣುಗಳಲ್ಲಿ ಬೆಂಕಿಯ ಕಿಡಿಗಳನ್ನು ಸ್ಫುರಿಸುತ್ತ ಒಳಗಡೆ ಹೆಜ್ಜೆ ಇಡದೆ ತಟ್ಟನೆ ಹಿಂದಿರುಗಿ ಹೊರಟು ಹೋದಳು.

ಅದನ್ನು ಕಂಡ ಹೇಮಾಂಗಿನಿ ಗಾಬರಿಯಿಂದ ಬೆಪ್ಪಾಗಿ ನಿರ್ಜೀವಿಯಂತೆ ಮೂರ್ತಿಮತ್ತಾಗಿ ನಿಂತುಬಿಟ್ಟಳು. ಹೃದಯ ವ್ಯಾಪ್ತಿಗೆ ಮೀರಿ ಮಿಡಿಯಹತ್ತಿತು. ರಾಧೇಶ್ಯಾಂ ಏನೂ ಹೇಳದೆ ಹೊರ ಬಿದ್ದುದೂ ಸಹ ಅವಳ ಗಮನಕ್ಕೆ ಬಂದಿರದಷ್ಟು ಚಿತ್ತ ವಿವಶವಾಗಿತ್ತು.

೨೫

....ಶಾಲೆಯ ವಿಶ್ರಾಂತಿಕೊಠಡಿ ಉಡಿಯಲ್ಲಿಟ್ಟು ಕಾಪಿಡುವ ಮಾತೃಕೆಯಂತೆ ಸ್ವಾಗತ ನೀಡಿತು.

....ಮುಚ್ಚಿದ ಗವಾಕ್ಷಿಗಳು ಹರವಾಗಿ ತೆರೆದುಕೊಂಡು ತಂಗಾಳಿಯನ್ನು ಆಹ್ವಾನಿಸಿದುವು.

ನಿರ್ಮಲ ಒಳ ಹೆಜ್ಜೆ ಇಟ್ಟಾಗ ಅಲ್ಲಿ ಇನ್ನಾರೂ ಇರಲಿಲ್ಲ. ಮೇಜಿನ ಮುಂದೆ ಕುಳಿತು ವೃತ್ತಪತ್ರಿಕೆಯನ್ನು ತೆಗೆದುಕೊಂಡಳು. ಬೇಕು-ಬೇಡದ ಸುದ್ದಿಗಳೆಲ್ಲ ಅಲ್ಲಿ ಜಮಾವಣೆಯಾಗಿವೆ. ಅಪಘಾತ–ಕೊಲೆ–ಸುಲಿಗೆ–ಯುದ್ಧ-ಒಳಜಗಳ–ಸೋಲು–ಗೆಲುವು. ಅವಕ್ಕೆ ಇತಿಮಿತಿ ಎಂಬುದೇ ಇಲ್ಲ. ಬರೀ ತಲೆ

ಬರೆಹಗಳ ಮೇಲೆ ಕಣ್ಣಾಡಿಸುತ್ತ ಅದೆಷ್ಟು ಹೊತ್ತು ಉರುಳಿತೋ.... ಲೀಲಾ ಒಳ ಹೆಜ್ಜೆ ಇಟ್ಟವಳೇ ನಗುಮುಖದಿಂದ–"ಹಾರ್ಟೀ ಕಾಂಗ್ರ್ಯಾಟ್ಸ್ !"

ಅರೆ ! ಅದೆಂತಹ ಆಶ್ಚರ್ಯ !

ನಿರ್ಮಲ ಅತ್ಯಂತ ವಿಚಿತ್ರಗತಿಯಲ್ಲಿ ಅವಳನ್ನು ನಿಟ್ಟಿಸಿದಳು. ಏನೆಂಬುದೇ ಅರ್ಥವಾಗಲಿಲ್ಲ. ಅದರಿಂದ ಒಮ್ಮೆಗೇ ಸಂತುಷ್ಟಳಾಗುವ ಬದಲು ಸ್ತ್ರೀಸುಲಭ ಕಾತರತೆ ಅವಳನ್ನು ಅಭಿಭೂತಗೊಳಿಸಿತು. ಆಶ್ಚರ್ಯಚಕಿತ ಮಗುವಿನಂತೆ ನಿರುತ್ತರೆಯಾಗಿ ಅವಳನ್ನು ನೋಡುತ್ತಲೇ ಇದ್ದಾಳೆ. ಅವಳ ಸ್ಥಿತಿಯನ್ನು ನೋಡಿ ಲೀಲಳಿಗೆ ಈಗ ನಿಜವಾಗಿಯೂ ನಗುವುಕ್ಕಿ ಬಂತು. ಕಿಲಕಿಲ ನಗುವಿನ ನಿನಾದವನ್ನು ಒಮ್ಮೆಲೇ ಹರಿಯಬಿಟ್ಟಳು.

"ಏನೆಂಬುದೇ ನನಗೆ ಅರ್ಥವಾಗಲಿಲ್ಲ....ಏನು ಸಮಾಚಾರ ?"

"ನಿನಗಿನ್ನೂ ಅರ್ಥವಾಗಲಿಲ್ಲವೇ ?"

"ಇಲ್ಲವಲ್ಲಾ ?"

"ಅಹಹಹಹಹ್ಹಾ ! ಮಳ್ಳಿ ಕಣೆ !"

" ಛೆ:! ಇದೆಂತಹ ಹುಡುಗಾಟ ?"

"ನನ್ನ ಬಾಯಿಂದಲೇ ಬರಿಸಬೇಕೆಂಬ ಜಾಣ್ಮೆ ! ನನಗೆಲ್ಲಾ ಗೊತ್ತು !"

"ನೀನು ಏನಾದರೂ ಅಂದುಕೊ....ನನಗೇನೂ ತಿಳಿಯದು."

ಅದೇ ವೇಳೆಗೆ ಪಾರ್ವತಿ ತನ್ನ ದಫ್ತರಗಳೊಡನೆ ಒಳಗಡೆ ಪದಾರ್ಪಣೆ ಮಾಡಿದಳು. ಒಳಗಣ ವಿಚಿತ್ರತಮ ಸನ್ನಿವೇಶ ಮನವನ್ನು ಸೆಳೆಯಿತು. ಅಭಿರಾಮಭಂಗಿಯಲ್ಲಿ ನಿಂತ ಅವಳು ಇಬ್ಬರ ಮುಖಮಂಡಲಗಳ ಮೇಲಿನ ಹಾವಭಾವಗಳನ್ನು ಸೂಕ್ಷ್ಮವಾಗಿ ಅವಲೋಕಿಸುತ್ತ ಪರಿಶ್ರಾಂತ ಶರೀರಪ್ರಕೃತಿಗೆ ನವಸ್ಫೂರ್ತಿಯನ್ನು ತುಂಬಿಕೊಂಡಳು.

"ಏನು ವಿಶೇಷ ?" ವೀಣಾ ಝುಂಕಾರದಂತೆ ಪ್ರಶ್ನೆ ಹೊಮ್ಮಿತು.

"ಏನೋಪ್ಪ ! ಅವಳಿಗೇ ಗೊತ್ತು. ವಿಚಿತ್ರ ಹುಡುಗಿ." ಎಂದಳು ನಿರ್ಮಲ; ನಿರಾಸಕ್ತಿಯಿಂದ.

"ಕೇಳೆ... ; ಉಸ್ಮಾನಿಯಾ ಯೂನಿವರ್ಸಿಟಿಯಲ್ಲಿ ಪ್ರೊಫೆಸರ್ ಶ್ರೀ ಅಮರನಾಥ್ !" ಉತ್ಸಾಹಿತ ಸ್ವರದಲ್ಲಿ ಬಿತ್ತರಿಸಿದಳು ಲೀಲಾ.

"ಸರಿ....ಅದಕ್ಕೆ ನನಗೇಕೆ ಕಂಗ್ರ್ಯಾಟ್ಸ್ ?"

"ಓಹೋ‌ೀ! ನಮಗೇನು ಗೊತ್ತಿಲ್ಲವೇ? ಸಹ ಧರ್ಮಿಣಿಗಲ್ಲದೆ ಇನ್ಯಾರಿಗೆ ಸಲ್ಲಬೇಕು?"

"ಸಹಧರ್ಮಿಣಿಯಾದ ಮೇಲೆ ಹೇಳಿ, ಈಗೇಕೆ ಅದೆಲ್ಲಾ?"

ಅಖಾಡಕ್ಕೆ ಪಾರ್ವತಿಯೂ ಇಳಿದಳು. ಮಾತಿನ ಚಕಮುಕಿ–ನಗುವಿನ ಲಹರಿ ಮಾಡು ಮುಟ್ಟಿತು. ಅವರಿಂದ ತಪ್ಪಿಸಿಕೊಂಡು ಹೊರಬಿದ್ದಾಗ ತರಗತಿಗೆ ಇನ್ನರ್ಧ ಗಂಟೆ ಮಾತ್ರ ಉಳಿದಿತ್ತು. ಮೆಟ್ಟಲಿಳಿದು ನೀರಿನ ಕಾರಂಜಿಯ ಬಳಿಗೆ ಬಂದಳು. ತೊಟ್ಟಿಯಲ್ಲಿ ತುಂಬಿದ ನೀರು ಬಿಸಿಲಿನ ಝಳಕ್ಕೆ ಥಳಥಳಿಸುತಿತ್ತು. ಒಳಗಡೆ ತಣಕ ಪಣಕೆನ್ನುವ ವರ್ಣರಂಜಿತ ಮತ್ಸ್ಯ ಕೋಟಿ. ಸುತ್ತಲೂ ಪುಷ್ಪಿತ ಪುಷ್ಪಕುಂಡಗಳು. ಅಲ್ಲಿಂದ–ಆ ದೃಶ್ಯಮಾನ ತಡಿಯಿಂದ ಕಾಲ್ದೆಗೆಯಲು ಮನಸ್ಸಾಗಲಿಲ್ಲ. ನೋಟವನ್ನು ಅತ್ಯಂತ ಆಸಕ್ತಿಯಿಂದ ಚೆಲ್ಲಿ ಕೊಟ್ಟು ಅಲ್ಲೇ ನಿಂತಳು. ಹೃದಯ ಕುಂಡ ಮಧುರರವದಿಂದ ಮಿಡಿಯುತಿತ್ತು.

ಆದರೆ....!

ಅಮರನಾಥ ಒಮ್ಮೆಯಾದರೂ ಉಸ್ಮಾನಿಯಾ ಯೂನಿವರ್ಸಿಟಿಗೆ ಹೋಗುವ ವಿಚಾರವನ್ನು ತನ್ನೊಡನೆ ತಿಳಿಸದಿದ್ದುದು ಎಂತಹ ಆಶ್ಚರ್ಯ? ಅವರಾಗಿ ಕರೆದಿದ್ದರೆ ಇದು ಅನಿರೀಕ್ಷಿತ....ಆದರೆ ಇವರೇ ಕೇಳಿಕೊಂಡಿದ್ದಾರೋ ಏನೋ....ಇದೀಗ ಅರ್ಥವಾಗದ ವಿಷಯ ಎಂದುಕೊಂಡಳು. ಮೇಲಾಗಿ ಇತ್ತೀಚಿನ ಅವನ ವರ್ತನೆಯಲ್ಲಿ ಎಂದಿಲ್ಲದ ಪರಿವರ್ತನೆಯೂ ಕಂಡು ಬರುತಿತ್ತು. ಏನೆಂದು ಕೇಳಿದಾಗಲೆಲ್ಲ. 'ಬಿಡುವೇ ಇಲ್ಲ' ಎಂದು ಬಿಡುವ. ಅದೂ ಸಹ ವಿಚಿತ್ರ ರೀತಿಯಲ್ಲಿ! ಈಗ ಅದೇ ವಿಚಾರಸರಣಿ ವಿದ್ಯುದ್ವೇಗದಿಂದ ತಲೆಯಲ್ಲಿ ಸುಳಿ ಸುತ್ತತೊಡಗಿ ತನ್ನ ಅಸ್ತಿತ್ವವನ್ನೆ ಅಲುಗಾಡಿಸ ಹತ್ತಿತು. ಹಾಗೇ ಲಿಖಿತ ಚಿತ್ರದಂತೆ ನಿಂತುಕೊಂಡಳು. ವಿಮಲೆಯ ಮುನ್ನೆಚ್ಚರಿಕೆ ಕೆಂಪುದೀಪ ತೋರಿತು. ಅದೇ ವೇಳೆಗೆ ಅತೀ ಸನಿಹದಲ್ಲಿ ಪಾದ ಸಪ್ಪಳವನ್ನು ಕೇಳಿ ಸಹಜಭಾವದಿಂದ ಹಿಂದಿರುಗಿ ನೋಡಿದಾಗ ಅಮರನಾಥ ಸಾನಂದದ ಮೂರ್ತಿಯಾಗಿ ನಿಂತಿದ್ದ. ಒಂದು ಘಳಿಗೆ ಅವನನ್ನು ಯಾವರೀತಿ ಮಾತಾಡಿಸಬೇಕೋ ಅಥವಾ ಇನ್ನಾವರೀತಿ ಅಭಿನಂದಿಸಬೇಕೋ ಹೊಳೆಯದೆ ತಬ್ಬಿಬ್ಬಾದಳು. ಅವಳ ಸ್ಥಿತಿಗತಿಯನ್ನು ಕೂಲಂಕಶವಾಗಿ ಗಮನಿಸಿ ಅವನೇ ಮಾತು

ಆರಂಭಿಸಿದ,

"ನನಗೆ ಉಸ್ಮಾನಿಯಾ ಯೂನಿವರ್ಸಿಟಿಯಿಂದ ಕರೆ ಬಂದಿದೆ. ಇಂದು ಹೈದರಾಬಾದಿಗೆ ಹೋಗಿ ವಿಚಾರವಿನಿಮಯ ಮಾಡಿಕೊಳ್ಳಬೇಕಾಗಿದೆ."

"ಹೃತ್ಪೂರ್ವಕ ಅಭಿನಂದನೆಗಳು!"

"ತುಂಬ ಥ್ಯಾಂಕ್ಸ್!"

"ಅಲ್ಲೇ ಸೇರುವಿರಾ?"

"ಇನ್ನೂ ಯಾವ ನಿರ್ಧಾರವೂ ಆಗಿಲ್ಲ....ಪರಿಸ್ಥಿತಿಗನುಗುಣವಾಗಿ ಹೊಂದಿಕೊಳ್ಳಬೇಕಾಗುತ್ತದೆ."

"ಇಲ್ಲಿಯವರು ಏನು ಹೇಳುತ್ತಾರೆ?"

"ಇವರ ಗಮನಕ್ಕೆ ವಿಷಯ ಮುಟ್ಟಿಸಿರುವೆ. ಇನ್ನೂ ವಿಚಾರವಿನಿಮಯ ನಡೆಸಿಲ್ಲ. ಸಾಕಷ್ಟು ಸಮಯವಿರುವುದರಿಂದ ಅವಸರ ಪಡಬೇಕಾಗಿಲ್ಲ."

"ಎಷ್ಟು ಸಮಯವಿದೆ?"

"ಆರು ತಿಂಗಳು."

"ಓ....!"

ಅನಂತರ, ಅವನು ನಿರ್ಗಮಿಸಿದ. ಹಿಂದಿಲಿಂದ ಆಶ್ಚರ್ಯ ಬಾಷ್ಪಲಿಪ್ತ ಲೋಚನಗಳು ಅತ್ತಲೇ ನಿಟ್ಟಿಸಿದುವು. ಆ ಶರೀರ ಪ್ರಕೃತಿಯ ಅಪರ ಪ್ರಾಂತ ಆಫೀಸಿನ ಮೆಟ್ಟಿಲು ಹತ್ತುವವರೆಗೂ ಗೋಚರಿಸುತಿತ್ತು. ಅಂತರ್ನಿಹಿತ ರಾಗಭಾವೋದ್ವೇಗದಿಂದ ಮುಖಮಂಡಲ ನಸುಗೆಂಪು ತಳೆಯಿತು. ಏನೋ ಒಂದು ರೀತಿಯಲ್ಲಿ ಮೈ ಮರೆತಂತೆ ಹೇಳಿಕೊಂಡಳು....ಭಗವಂತ ಆಶೀರ್ವದಿಸಿದರೆ ಈ ಜನ್ಮ ಪುನೀತವಾದಂತೆ! ಆದರೆ....ಆತನ ಉದ್ದೇಶವೇನೋ....

ಅಂದಿನ ಪಾಠ ಪ್ರವಚನಗಳನ್ನು ಮುಗಿಸಿ ಹೊರಬಂದಾಗ ಅನಿರೀಕ್ಷಿತವಾಗಿ ಧಾರುಣಿಯ ತಂದೆಯ ದರ್ಶನವಾಯಿತು. ಒಡನೆ ಏಕಕಾಲದಲ್ಲಿ ಕೋಪ ತಾಪಗಳು ಮೂಡಿದುವು. ಮನಸ್ಸಿಗೆ ಕಿಂಕುರ್ವಾಣತೆ ತುಂಬಿದುದರಿಂದ ಏನೆನ್ನಬೇಕೋ ಹೊಳೆಯಲಿಲ್ಲ. ಸುಮ್ಮನೆ ಪ್ರಾಸಂಗಿಕವಾಗಿ ಕೇಳಲಾರದೆ ಕೇಳಿದಳು,

"ಏನು ಬಂದಿದ್ದೀರಿ?"

"ಧಾರುಣಿಯ ಬಟ್ಟೆ ಬರೆಗಳು ಇಲ್ಲಿಯೇ ಉಳಿದು ಹೋಗಿವೆ. ತೆಗೆದು

ಕೊಂಡು ಹೋಗಲು ಬಂದೆ."

ಅವನೊಂದಿಗೆ ಚಿಕ್ಕ ಬಾಲಿಕೆಯೊಬ್ಬಳಿದ್ದಾಳೆ. ನೋಡಿದರೆ ಧಾರುಣಿಯ ಪ್ರತಿರೂಪು ಅಂಗಾಂಗಗಳಲ್ಲೂ ಚಿಮ್ಮುವಂತಿದೆ. ಸ್ವಲ್ಪಹೊತ್ತು ಅವಳೆಡೆಗೆ ಆಶ್ಚರ್ಯ ತೃಷಿತ ಲೋಚನಗಳನ್ನು ಹೊರಳಿಸಿ ಹಾಗೇ ಆಶ್ಚರ್ಯ ಭಾವದಿಂದ ಕೇಳಿದಳು ನಿರ್ಮಲ,

"ಇದಾರು ? ಧಾರುಣಿಯಂತೆಯೇ ಇದ್ದಾಳೆ....ನಿಮ್ಮ ಮಗಳೇ ?

"ಹೌದು."

"ಹೆಸರೇನಮ್ಮಾ ?"

"ತಾರಣಿ !"

ಅವಳೊಡನೆ ಸ್ವಲ್ಪಹೊತ್ತು ಮಾತಾಡಿ, ಅವರ ವ್ಯವಹಾರವನ್ನು ಮುಗಿಸಿ ಮನೆಯ ಹಾದಿ ತುಳಿದಳು. ಮೃದುಮಂದ ಸಾಂಧ್ಯ ಸಮೀರಣ ಗಿಡಮರಗಳೆಡೆಯಲ್ಲಿ ಸುಳಿದು ಸುತ್ತಾಡುತಿದ್ದ. ಅವನ ಸುಖಸ್ಪರ್ಶದಿಂದ ಜೀವಕೋಟಿಯಲ್ಲಿ ಅಲಸನಿದ್ರೆ ಮೂಡುವಷ್ಟು ಪ್ರಭಾವವಿತ್ತು. ಪ್ರಕೃತಿಯ ಮೋಹಮಾಯೆಗೊಳಗಾದವಳಂತೆ ಮೈಮರೆತು ಮುಂದುವರಿದಳು.

....ಅಮರನಾಥ ಅವನಾಗಿ ಬಂದು ಹೇಳಿದರೂ ಅವನಲ್ಲಿ ಸ್ವಭಾವಿಕವಾದ ಆತ್ಮನಿವೇದನೆ ಇಂದು ಮೂಡಲೇ ಇಲ್ಲ. ಏನೋ ಒಂದು ರೀತಿಯಲ್ಲಿ ಯಾಂತ್ರಿಕ ಚಲನ-ವಲನ ಅಂಗ-ಪ್ರತ್ಯಂಗಗಳಲ್ಲಿ ದ್ರವಿಸುತಿತ್ತು. ಅವನದನ್ನು ಪ್ರಯತ್ನಪೂರ್ವಕವಾಗಿ ಹುಗಿದಿಟ್ಟಿದ್ದ ಎಂಬುದು ಅನುಭವ ವೇದ್ಯ. ಆದರೂ ಅದರ ರಹಸ್ಯವೇನೆಂಬುದು ಅರ್ಥವಾಗಲಿಲ್ಲ. ಈಚೀಚೆಗೆ ಏನೋ ಒಂದು ಬಗೆಯ ...ಬಹಳ ಸೂಕ್ಷ್ಮತರವಾದ ಪರಿವರ್ತನೆ ಕಂಡುಬರುತ್ತಿದೆ. ಅದೇನು ವಿದ್ಯೆಯ ಪ್ರಭಾವವೋ, ಮೋಹಮಾಯೆಯ ಪ್ರಭಾವವೋ ದೇವರಿಗೆ ಗೊತ್ತು....!

ಆ ಯೋಚನೆ ಬಂದಾಗ ಅಶಾಂತಿಯ ತರಂಗಗಳು ಮನದಲೆಯನ್ನು ಮಂಜಿನಂತೆ ಮುಸುಗಿದುವು ; ಆ ವಿಷಾದ ಚಿತ್ರಕಲ್ಪನೆ ಜೀವನೀಶಕ್ತಿಯ ಕಣಕಣವನ್ನೂ ಸುಡುತ್ತಿರುವಂತೆ, ಉಷ್ಣಭರಿತ ಶರೀರ ಅತ್ಯಂತ ನಿಶ್ಶಕ್ತಿಯಿಂದ ತೇಲುತ್ತಿರುವಂತೆ ಭಾಸವಾಯಿತು. ಹತ್ತು ಹೆಜ್ಜೆ ಕಳೆಯುವುದರಲ್ಲಿ ಅತ್ಯಂತ ಅನಿರೀಕ್ಷಿತವಾಗಿ ರಾಧೇಶ್ಯಾಮನ ಭೇಟಿಯಾಯಿತು. ಅವನ ಕಪ್ಪು

ಕೋಟು, ಅವನ ದಸ್ತಾವೇಜಗಳು, ಅವನು 'ನ್ಯಾಯವಾದಿ' ಎಂಬುದಕ್ಕೆ ಸಾಕ್ಷೀಭೂತವಾಗಿದ್ದುವು. ಅವನು ತುಟಿಗಳಲ್ಲಿ ಮುಗುಳ್ನಗುವನ್ನು ಸೂಸುತ್ತ ಇತ್ತಲೇ ಬಂದ.

"ಕೆಲಸ ಮುಗಿಯಿತೇ ?" ಕೇಳಿದಳು ನಿರ್ಮಲ.

"ಹೌದು."

"ಇಂದು ...ಎಷ್ಟು ಮಂದಿಯ ಬಾಳನ್ನು ಬುಡಮೇಲು ಮಾಡಿದಿರಿ ?"

ಪ್ರಶ್ನೆ ಹಾಸ್ಯ ಪ್ರಧಾನವಾಗಿ ಹರಿದು ಬಂತು.

"ಒಬ್ಬನನ್ನು ಜೇಲಿಗೆ ಕಳುಹಿಸಿದೆ." ಎಂದ. ಕಣ್ಣುಗಳಲ್ಲಿ ತುಂಟತನ ನಲಿದಾಡಿತು.

ಆ ಮಾತು ಕೇಳಿ ನಿರ್ಮಲೆಗೆ ಹಿರಿಯ ರಾಜಕಾರಿಣಿಯೊಬ್ಬ ಹೇಳಿದ ಮಾತುಗಳು ನೆನಪಿಗೆ ಬಂದುವು. 'ಜೈಲು' ಎಂಬುದು ಮನುಷ್ಯರನ್ನು ಜೀವಂತ ಹೂಳುವ ಅದ್ಭುತ 'ಗೋರಿ', ಅನೈತಿಕ ವ್ಯವಹಾರವನ್ನು ಕಡ್ಡಾಯವಾಗಿ ಕಲಿಸಬಲ್ಲ 'ತಾಣ' ಛೆ: ! ಛೆ: ! ಅಷ್ಟುಮಾತ್ರವೇನು ? ಜೈಲಿನಲ್ಲಿ ಆರು ತಿಂಗಳಿದ್ದರೆ ವೆಸ್ಟ್ ಮಿನಿಸ್ಟರ್‌ಗಳೊಂದಿಗೆ ಸಾವಿರಾರು ರೂಪಾಯಿಗಳನ್ನು ಖರ್ಚುಮಾಡಿ ಕಲಿಯಬಹುದಾದ 'ನ್ಯಾಯಶಾಸ್ತ್ರ'ಕ್ಕಿಂತಲೂ ಹೆಚ್ಚಾಗಿ ಕಲಿತುಕೊಳ್ಳಬಹುದು....ಎಂದು ಮುಂತಾಗಿ ಗಂಭೀರ ಚಿಂತನೆಯಲ್ಲಿ ತೊಡಗಿದ್ದ ನಿರ್ಮಲ ಉತ್ತರಿಸಲಿಲ್ಲ.

"ಏಕೆ ? ಅಷ್ಟಕ್ಕೆ ಸುಮ್ಮನಾದಿರಿ ?"

"ಪ್ರಸನ್ನ ಜೈಲಿನಲ್ಲಿದ್ದಾಗ ಒಮ್ಮೆ ಆ ನರಕ ಪ್ರಪಂಚವನ್ನು ದರ್ಶಿಸುವ ದೌರ್ಭಾಗ್ಯ ನನಗುಂಟಾಗಿತ್ತು !"

"ದೌರ್ಭಾಗ್ಯವೇ ?"

"ವ್ಯಭಿಚಾರ ಶಾಲೆಗಳಲ್ಲಿ—ಕಸಾಯಿ ಖಾನೆಗಳಲ್ಲಿ ಕಂಡುಬರುವ ಕ್ರೌರ್ಯಕ್ಕಿಂತಲೂ ಮಿಗಿರಿದ ಕಾಠಿಣ್ಯ ಅಲ್ಲಿದೆ."

"ಅಷ್ಟಿಲ್ಲದ ಮೇಲೆ ಜೈಲಾದರೂ ಏಕಿರಬೇಕು ?"

ಪ್ರಶ್ನೆ ಎದೆಯಾಳಕ್ಕೆ ಇಳಿದಾಗ ಅಪರಾಧಗಳ ಹಲವಾರು ಮುಖ ಸುತ್ತ ಮುತ್ತ ಹಲ್ಕಿರಿದುವು. ಒಂದು ಘಳಿಗೆ ಯೋಚಿಸಿ ಸುಮ್ಮನಾದಳು ನಿರ್ಮಲ. ನಾರೀಜನೋಚಿತವಾದ ಮೃದು ಮಂದಭಾವ ನರನಾಡಿಗಳಲ್ಲಿ ಆರೋಹಣ

ಅವರೋಹಣ ನಡೆಸುತಿತ್ತು. ಕ್ಷಣಭಂಗುರ ಪ್ರಕಾಶದಂತೆ ಮಿಂಚಿದ ಆ ಪ್ರಶ್ನೆ ವಿಶೇಷ ಮನದ ಶಂಕೆಯನ್ನು ದೂರಗೊಳಿಸಿತು.

"ಏನು ಯೋಚಿಸುತ್ತಿರುವಿರಿ ? ನಿಮ್ಮ ಶಾಲಾ ಜಗತ್ತಿನಂತೆಯೇ ಈ ಬ್ರಹ್ಮಾಂಡ ಪರಿಶುದ್ಧವಾಗಿರುತ್ತದೆ ಎಂದು ಭಾವಿಸಿದ್ದರೆ ಅದು ಖಂಡಿತ ತಪ್ಪಾಗುತ್ತದೆ."

ಆ ಮಾತಿನಿಂದ ತಾನು ಎಂತಹ ಪರಿಶುದ್ಧವಾದ ಪ್ರಪಂಚದಲ್ಲಿರುವೆ ಎಂಬುದರ ಅರಿವಾಗಿ ತನ್ನ ಮನದಲ್ಲಿಯೇ ಆನಂದ ಸುಧೆಯನ್ನು ಸವಿದಳು ನಿರ್ಮಲ.

ಅವನು ಲೋಕಾಭಿರಾಮವಾಗಿ ಮುಂದುವರಿದ,

"ಈ ಜಗತ್ತಿನಾದ್ಯಂತ ಪರಶೀಲನಾ ದೃಷ್ಟಿಯನ್ನು ಹರಿಸಿ ನೋಡಿದರೆ ನ್ಯಾಯಶಾಸ್ತ್ರಕ್ಕೆ ಒದಗಿರುವ ವಿಶಿಷ್ಟ ಸ್ಥಾನಮಾನ ಗೊತ್ತಾಗುತ್ತದೆ. ಇಂದು ರಾಜಕೀಯ ಧುರೀಣರ ಕಡೆ ದೃಷ್ಟಿ ಹಾಯಿಸಿದರೆ ಅವರಲ್ಲಿ ಬಹುತೇಕ ನ್ಯಾಯಶಾಸ್ತ್ರ ಕೋವಿದರು ಕಂಡುಬರುತ್ತಾರೆ. ಅಂದರೆ ನ್ಯಾಯವಾದಿಗಳು ಯಾವ ಕ್ಷೇತ್ರದಲ್ಲೇ ಆಗಲಿ ಗೆದ್ದು ಬರಬಲ್ಲರು ಎಂಬುದಕ್ಕೆ ಸಾಕ್ಷಿ. ನ್ಯಾಯ ಶಾಸ್ತ್ರ ಇಲ್ಲದೆ ಹೋಗಿದ್ದಲ್ಲಿ ಈ ಪ್ರಪಂಚ ಇನ್ಯಾವ ಮಟ್ಟದಲ್ಲಿರುತಿತ್ತೋ....!"

ನಿರ್ಮಲ ಮಾತಾಡಲಿಲ್ಲ. ಚಿತ್ತ ವಸ್ತುಸ್ಥಿತಿಯನ್ನು ಪರಿಶೀಲಿಸುತಿತ್ತು.

ರಾಧೇಶ್ಯಾಂ ಅವಳೆಡೆಗೆ ಸೂಕ್ಷ್ಮದೃಷ್ಟಿಯನ್ನು ಹರಿಯಬಿಟ್ಟ. ಆ ನಿಶ್ಶಬ್ದ ಪ್ರಕೃತಿಯ ದೃಶ್ಯಮಾನ ಸೌಂದರ್ಯ ಮನವನ್ನು ಸೆಳೆಯಿತು. ತನ್ನ ನ್ಯಾಯಶಾಸ್ತ್ರದಲ್ಲಿ 'ಸ್ತ್ರೀ' ಅದೃಶ್ಯ ವಸ್ತುವಾದುದರಿಂದ ಪುಳಕಿತ ಮನಸ್ಸಿಗೆ, ಆಶಾಭರಿತ ಲೋಚನಗಳಿಗೆ, ತೀಕ್ಷ್ಣಮತಿ ವಿಶೇಷಕ್ಕೆ ಸೂಕ್ಷ್ಮಾತಿ ಸೂಕ್ಷ್ಮವಾಗಿ ಸ್ತ್ರೀಸೌಂದರ್ಯಮಾಧುರ್ಯ ಏನೋ ಒಂದು ಬಗೆಯ ನವ್ಯ ವಿಶೇಷತೆಯನ್ನು ಪೂಸಿತು. ಆ ಮುಹೂರ್ತದಲ್ಲಿ ವಿಮಲೆಗಿಂತ ನಿರ್ಮಲೆಯೇ 'ಸುಂದರಿ' ಎಂಬ ಆಂತರಂಗಿಕ ನಿರ್ಣಯಕ್ಕೆ ಮನಸೋತ.

....ನೀವು ಮದುವೆಯಾಗಲಿರುವಿರಿ. ಒಂದಲ್ಲ, ಹತ್ತುಬಾರಿ ಯೋಚಿಸಿ ನಿರ್ಣಯಿಸಿರಿ....ಸದಾಕಾಲ ಹೃತ್ಪೂರ್ವಕವಾಗಿ ಪ್ರೀತಿಸಬಹುದಾದಂತಹ ಮನದನ್ನೆಯನ್ನು ಸ್ವೀಕರಿಸಿ....ದೈವವಶಾತ್ ಪ್ರೀತಿ ಲಭಿಸಿದರೆ ಆಗ ವಿವಾಹದ ಅವಶ್ಯಕತೆಯೂ ಸಹ ಇರುವುದಿಲ್ಲ !

ಎಂದು ಹೇಮಾಂಗಿನಿ ಅಂದ ಉತ್ಸುಕವಾಣಿ ಕಿವಿಯ ಸನಿಹದಲ್ಲಿಯೇ ಮತ್ತೆ ಮೊಳಗಿತು.

ಆಗ....ಉಂಟಾದ ಮಾನಸಿಕ ಕ್ಷೋಭೆಯಿಂದ ಹೃದಯ-ಮಸ್ತಿಷ್ಕಗಳೆರಡೂ ಒಂದೇ ಬಾರಿಗೆ ನಿಶ್ಚೇಷ್ಟವಾದಂತೆ ಭಾಸವಾಯಿತು. ಅತ್ಯಂತ ಅಪ್ರಸನ್ನ ಭಾಗ್ಯದಿಂದ ಭೂಕಂಪನಕ್ಕೊಳಗಾದ ಕ್ಷೇತ್ರದಲ್ಲಿ ಧೃತಿಗೆಟ್ಟು ಅಲೆಯುವ ದೇಶೀಯನಂತಾಗಿದೆ ಮನಃಸ್ಥಿತಿ. ಎದೆಯಾಳದಿಂದ ನೀಳವಾದ ನಿಟ್ಟುಸಿರು ಮೆಲ್ಲನೆ ತಪ್ಪಿಸಿಕೊಂಡಿತು. ಸ್ವಲ್ಪಹೊತ್ತಿನನಂತರ ತನ್ನನ್ನು ತಾನೇ ನಿಗ್ರಹಿಸಿಕೊಂಡು ಮೌನ ಮುರಿದ,

"ನೀವು ಮುಂದೆಯೂ ಉದ್ಯೋಗದಲ್ಲಿ ಪ್ರತಿಷ್ಠಿತರಾಗುತ್ತೀರಾ?"

ನಿರ್ಮಲ ಹುಬ್ಬೆತ್ತಿ ನೋಡಿ ನಿಧಾನವಾಗಿ ಉತ್ತರಿಸಿದಳು,

"ನನ್ನ ಆಂತರಂಗಿಕ ಜಾಗ್ರತಾಗ್ನಿ ಎರಡು ಕಾರಣಗಳಿಂದ ನಂದಿ ಹೋಗಬಹುದು. ಒಂದು ಮೃತ್ಯುವಿನಿಂದ....ಇನ್ನೊಂದು ವೈರಾಗ್ಯದ ವಿಜಯ ಕೇತನದಿಂದ."

"ಅಂದರೆ ಆ ಇಂಗ್ಲಿಷ್ ಶಾಲೆಯಲ್ಲೇ ಮುಂದುವರಿಯುತ್ತೀರಿ?"

"ಹೌದು....ನಾವು ಕಲಿತದ್ದೇ ಅಲ್ಲಿ."

"ನನಗೇನೋ ಆ ಮಿಷನರಿಗಳೆಂದರೆ ಹಿಡಿಸುವುದೇ ಇಲ್ಲ ನೋಡಿ!"

"ಏಕೆ?"

"ಇಂಗ್ಲೀಷರು ಶಕ್ತಿವಂತರು ಮಾತ್ರವಲ್ಲ; ಮಹಾ ಕುತಂತ್ರಿಗಳು. ಮಿಷನರಿಗಳ ಮೂಲಕ ಪ್ರಚಾರಕಾರ್ಯ ಕೈಕೊಂಡು ಲೋಕದ ಕಣ್ಣಿಗೆ ಮಣ್ಣೆರಚುವುದರಲ್ಲಿ ನಿಸ್ಸೀಮರು! ಭಾರತದಂತಹ ಬೃಹದ್ ದೇಶವನ್ನು ಎಷ್ಟು ಸುಲಭದಲ್ಲಿ....?"

"ತಪ್ಪು ನಮ್ಮವರದೇ."

"ಅಂದರೆ....?"

"ಇಂಗ್ಲೀಷರು ವ್ಯಾಪಾರದ ನೆವದಲ್ಲಿ ಯೂರೋಪ್ ದಾಟಿ ಬಂದಾಗ ಅದರ ಹಿನ್ನೆಲೆಯಲ್ಲಿದ್ದ ಉಗ್ರವಿಷವನ್ನು ಭಾರತ ಚೀನಾಗಳೆರಡೂ ಕಂಡುಕೊಳ್ಳಲಿಲ್ಲ. ಜಪಾನು ಗ್ರಹಿಸಿತು. ಅದೀಗ ಜಗತ್ತಿನ ಸಮಾನ ಗೌರವವನ್ನು ಹೊಂದಿದೆ....ಆ ವಿಚಕ್ಷಣೆಯ ಅಭಾವದಿಂದ ಭಾರತ ದಾಸ್ಯದಲ್ಲಿ ನರಳ

ಬೇಕಾಯಿತು."

"ಅದನ್ನಿಲ್ಲ ಎನ್ನಲಾರೆ. ಆದರೂ ಉಂಡ ಮನೆಗೆ ಎರಡು ಬಗೆಯುವುದರಲ್ಲಿ ಬ್ರಿಟನ್ ಅಗ್ರಗಣ್ಯ!"

"ಬ್ರಿಟನ್ ಸರಕಾರ ಹಾಗಿರಬಹುದು. ಆದರೆ ಎಲ್ಲಾ ಮಿಷನರಿಗಳೂ ಹಾಗಿರುವುದಿಲ್ಲ." ಕಂಠಸ್ವನ ಅತ್ಯಂತ ದೃಢವಾಗಿ ಸ್ಫುರಿಸಿತು. ಕಣ್ಣುಗಳಲ್ಲಿ ಮಿನುಗಿದ ಮಿಂಚಿನ ಛಾಯೆ ಉಜ್ವಲವಾಗಿತ್ತು.

ರಾಧೇಶ್ಯಾಂ ಸ್ವಲ್ಪವೂ ವಿಚಲಿತನಾಗದೆ ಅಂದ,

"ಏನೇ ಇರಲಿ, ಪಾಶ್ಚಾತ್ಯ ಸಂಸ್ಕೃತಿಯನ್ನು ನಮ್ಮ ಜೀವನಕ್ಕೆ ಅಳವಡಿಸಿಕೊಳ್ಳುವುದು ನನಗೆ ಏನೇನೂ ಇಷ್ಟವಿಲ್ಲ."

"ನಿಮ್ಮ ಅಭಿಪ್ರಾಯಕ್ಕೆ ಎಲ್ಲರೂ ಬದ್ಧರಾಗುವುದು ಸಾಧ್ಯವಿಲ್ಲ."

ಆ ಮಾತಿನ ಪೆಟ್ಟು ನೇರವಾಗಿ ತಾಗಿದಾಗ ಯೋಚನಾ ಲಹರಿಗಳು ಒಂದೆರಡು ಘಳಿಗೆ ಸ್ತಬ್ಧವಾದುವು.

"ನೀವು ನಡೆದು ಬಂದ ದಾರಿ ಬಹಳ ಭಿನ್ನವಾದುದು; ನಿಮ್ಮ ತಂಗಿಯದೂ ಅಷ್ಟೆ." ನಿಡುಸುಯ್ಯುತ್ತ ಮನಸ್ಸಿನಲ್ಲಿಯೇ ಹೇಳಿಕೊಂಡ. ಬಹಿರಂಗವಾಗಿ ಏನು ಹೇಳಲೂ ಭಾವುಕತಾಹೀನ ಚಿತ್ತ ಮುಂದಾಗಲಿಲ್ಲ. ದಾರಿಯಲ್ಲಿ ಕಾಣಸಿಗುವ ಅತ್ಯಂತ ಮುಗ್ಧ ಮನಸ್ಸಿನ ಸ್ತ್ರೀಜನರ 'ಭಾವ ಮಾಧುರ್ಯ' ಮತ್ತು ಬಡತನ–ಅವಿದ್ಯೆಗಳಿಂದ ಪರಿಪೋಷಿತ 'ಕುಸಂಸ್ಕಾರ'ವನ್ನು ಅತ್ಯಂತ ಕಮನೀಯ–ಕುತೂಹಲ ತೃಷಿತ ನೋಟ ಸವಿಯಿತು.

....ತನಗೆ ಜೊತೆಗಾರರಿಲ್ಲ; ಸಹಕಾರವೂ ಇಲ್ಲ. ಜೀವನ ಯಜ್ಞವೇದಿಕೆ ಇನ್ನೆಷ್ಟು ದೂರ ಇದೆಯೋ ದೇವರೇ ಬಲ್ಲ....ಒಂಟಿ ಪಯಣ ಇನ್ನೆಷ್ಟು ದೂರ ಸಾಗಬೇಕೋ....ಈ ನಿರಂತರ ಯಾನದಲ್ಲಿ ಅದ್ಭುತ ಸಾಹಸವನ್ನು ಪ್ರದರ್ಶಿಸುತ್ತ ನಡೆಯುವುದರಲ್ಲಿಯೇ ಪ್ರಗತಿ....ಸಮುದ್ರದ ಅಲೆಗಳಂತೆ ಮುಂದೆ ಮುಂದೆ ಸಾಗುವುದೇ ಬದುಕಿನ ಶೋಭೆ....

ರಾಧೇಶ್ಯಾಂ ಸಾಗುತ್ತಲೇ ಇದ್ದ....ಕ್ರಮವಿಹೀನವಾದ ಆಲೋಚನೆಗಳು ಮನವನ್ನು ಮುತ್ತುತ್ತಲೇ ಇದ್ದುವು. ಬಹಶಃ ಅವುಗಳಿಗೆ ನಿಲುಗಡೆಯೇ ಇಲ್ಲವೇನೋ....

ಮುಂದೆ ಇಬ್ಬರ ಹಾದಿಯೂ ಕವಲೊಡೆಯಿತು.

"ನಾನಿನ್ನು ಬರಲೇ ?"

ಹೆಣ್ದನಿಯ ಇಂಪು ಕಿವಿಯನ್ನು ತಾಗಿದಾಗ ಎಲ್ಲೋ ಹರಿದಾಡುತಿದ್ದ ಚಿತ್ತ ಸರ್‍ರನೆ ಅತ್ತ ಹರಿಯಿತು.

"ನನ್ನ ಗಮನ ಎಲ್ಲೋ ಹರಿದಾಡುತಿತ್ತು. ನೀವು ಹೇಳದಿದ್ದಲ್ಲಿ ಬಹುಶಃ ನಾನು ನೇರವಾಗಿ ಹೋಗಿ ಬಿಡುತಿದ್ದೆನೇನೋ."

ಒಡನೆ ಇಬ್ಬರ ಮುಖದಲ್ಲೂ ನಗುವಿನ ಲಹರಿ ಉಕ್ಕಿ ಹರಿಯಿತು.

೨೬

....ಗ್ರೀಷ್ಮ ಕಾಲೀನ ಜಗಜಗಿಸುವ ಸೂರ್ಯಮಂಡಲ.

....ಚಿತ್ರ ಖಚಿತ ವಾಸಂತೀ ಉತ್ತರೀಯದಂತೆ ಸುಶೋಭಿತ ವನಸ್ಥಲಿ.

....ಚಿತ್ತಾಲೋಕದಲ್ಲಿ ಅಕಾರಣ ಕೌತೂಹಲ ಭಾವವಿಭಾವ.

ಹಸುರು ಹುಲ್ಲಿನ ರನ್ನಗಂಬಳಿಯಮೇಲೆ ಮೊಣಕಾಲುಗಳೆರಡನ್ನೂ ಕೈಗಳಿಂದ ತಬ್ಬಿ ಹಿಡಿದು ಪುಸ್ತಲೋಕದ ಮೇಲೆ ಗಮನವನ್ನು ಹರಿಯ ಬಿಟ್ಟದ್ದ ವಿಮಲೆ ಅದರಲ್ಲೇ ಸಂಪೂರ್ಣ ತನ್ಮಯಳಾಗಿದ್ದಳೇನೊ....... ರಾಧೇಶ್ಯಾಂ ನಯ ವಿನಯಗಳ ವಶೀಭೂತನಾಗಿ ಅಂದ,

"ನೀವು ಅಪಾರ್ಥ ಮಾಡಿಕೊಂಡಿಲ್ಲ ತಾನೇ ?"

ಪ್ರಶ್ನೆ ಎದೆಯಾಳದಲ್ಲಿ ಸಂಜನಿಸಿದ ದುಃಖಾಶ್ರುವಿನಲ್ಲಿ ನಿಮಜ್ಜಿತವಾಗಿತ್ತು. ಅರ್ಥಭರಿತವಾದ ಉಷ್ಣೋಧಿಕ ಜ್ವಾಲೆಯಲ್ಲಿ ವಿಭಿನ್ನವಾದ ಅಲೆಗಳು ಏಳುತಿದ್ದುವು. ಚಿತ್ರವಿಚಿತ್ರವಾದ ಭ್ರಾಂತಭಾವನೆಗಳು ಚಿತ್ತಕಲ್ಪವನ್ನು ಅಲುಗಾಡಿಸುತಿದ್ದುವು. ಸಂಶಯ ಭೂತವನ್ನು ಬಗ್ಗುಬಡಿಯಲೆಂದೇ ಹೂಡಿದ ಶ್ರದ್ಧಾವಿಶೇಷ ರೆಕ್ಕೆ ಮುರಿದುಕೊಂಡಂತೆ ಭಾಸವಾಯಿತು. ಇದುವರೆಗೆ ಸಾಮಾನ್ಯವಾಗಿ ಹೇಮಾಂಗಿನಿಯೊಂದಿಗೆ ನಡೆಸುತಿದ್ದ ಹಾಸ್ಯಪರಿಹಾಸ್ಯಗಳ ಪ್ರತಿಫಲ ಇಷ್ಟು ದೂರ ಹೋಗುವುದೆಂಬ ಭಾವನೆ ಎಂದೂ ಮೂಡಿರಲಿಲ್ಲ. ತನ್ನಲ್ಲಿ ಎಂದೂ ಅಂತಹ ದುಷ್ಪ್ರವರ್ತನೆ ಇರಲಿಲ್ಲ ಎಂಬ ವಿಷಯಕ್ಕೆ ದುಃಖವಿಲ್ಲ....ಆದರೆ ಏನಾಕಾರಣ ಗಂಭೀರ ಆಪಾದನೆ ಹೃದಯ ತಂತುಗಳನ್ನು ಎಳೆಎಳೆಯಾಗಿ ಸುಡುತಿತ್ತು.

"ನೀವು ಏನಾದರೂ ಅನ್ನಿ ರಾಧೇಶ್....! ಸ್ತ್ರೀ ಎಂದ ಮೇಲೆ ಇಂತಹ ಆಪಾದನೆಗಳು ಹುಟ್ಟಿಕೊಳ್ಳುತ್ತಲೇ ಇರುತ್ತವೆ. ಇದು ಸಮಾಜ!" ನಿಟ್ಟುಸಿರು ಬಿಡುತ್ತ ಉತ್ತರಿಸಿದಳು ವಿಮಲ.

ಪ್ರಶಾಂತ ವಾತಾವರಣದಲ್ಲಿ ಭಾನುವಾರದ ವಿಶ್ರಾಂತಿ ನಿರ್ಜನ ಸುಖ ಸಂಘ ತನುಮನಗಳಿಗೆ ನಿತಾಂತ ಉಲ್ಲಾಸವನ್ನು ನೀಡಿದ್ದುವು. ಸುತ್ತಮುತ್ತಿನ ಪುಷ್ಪಲೋಕದಲ್ಲಿ ಮಧುಲೋಭದಿಂದ ಅಲೆಯುವ ಭ್ರಮರಾವಳಿಯ ಝೇಂಕಾರವನ್ನು ಮನದುಂಬಿಕೊಳ್ಳುತ್ತ ರಾಧೇಶ್ಯಾಂ ನುಡಿದ. "ಅವಳನ್ನು ಎತ್ತಿ ಆಡಿಸಿರುವೆ."

ವಿಮಲ ಮಾತಾಡದೆ ಮುಗುಳು ನಕ್ಕಳು. ಮುಖಮಂಡಲ ಆನಂದ ಉಲ್ಲಸಿತವಾಯಿತು.

"ಮಳೆ–ಬಿಸಿಲು–ಚಳಿ–ಬಿರುಗಾಳಿಗಳನ್ನು ಕಂಡು ವ್ಯರ್ಥವಾಗಿ ಹೆದರುವ ಜೀವರಾಶಿಯಲ್ಲಿ-ಸ್ವತಃ ಪಾಪಪಂಕಿಲದಲ್ಲಿ ಮುಳುಗಿರುವ ಮಾನವ ಕೋಟಿಯಲ್ಲಿ ಎಂತಹ ಕಠೋರ-ಕಮನೀಯ ಉಡ್ಡೀನದಾಯಿತ್ವ ಇದೆ ನೋಡಿ!"

"ಅದಕ್ಕೆ ನಿಮ್ಮ ನ್ಯಾಯ ಶಾಸ್ತ್ರ ಉತ್ತರ ಹೇಳಬೇಕು!"

ಇಬ್ಬರ ಮುಖದಲ್ಲೂ ಮುಗುಳುನಗೆ ಮೂಡಿತು.

"ನಮ್ಮ ದಿನಚರಿ ವ್ಯವಹಾರದಲ್ಲಿ ರಸವೂ ಇಲ್ಲ; ರುಚಿಯೂ ಇಲ್ಲ. ಗಲಾಟೆ–ದೊಂಬಿ–ಜಗಳ–ಮೋಸ ಇವುಗಳ ಅಂತರಾಳದಲ್ಲಿ ಮೀನಿನಂತೆ ಚಲಿಸಿದಲ್ಲದೆ ನ್ಯಾಯ ಶಾಸ್ತ್ರದ ಪರಿಪೋಷಣೆ ಸಾಧ್ಯವೇ ಇಲ್ಲ. ಒಮ್ಮೊಮ್ಮೆ ಮನಸ್ಸಿಗೆ ತುಂಬ ಜುಗುಪ್ಸೆ ಮೂಡುತ್ತದೆ."

"ಈಗೀಗ ಬಹಳ ಮಂದಿ ಸ್ತ್ರೀಯರು ನ್ಯಾಯ ಶಾಸ್ತ್ರದಲ್ಲಿ ತೊಡಗುತಿದ್ದಾರೆ."

"ವ್ಯರ್ಥಸಾಹಸ" ಎನ್ನಬೇಕು ಅನಿಸಿತು. ತುಟಿಯವರೆಗೂ ಬಂದ ನುಡಿಯನ್ನು ಹಾಗೇ ಅದುಮಿ ಹಿಡಿದ. ಇನ್ನಾರ ಬಳಿಯಲ್ಲಾಗಿದ್ದರೂ ಅವನು ಹಾಗೆನ್ನದೆ ಇರುತ್ತಿರಲಿಲ್ಲ. ಆದರೆ ವಿಮಲೆಯ ಬಳಿ ಒಮ್ಮೆ ಸೋಲೊಪ್ಪಿಕೊಂಡಿದ್ದುದರಿಂದ ಇನ್ನೊಮ್ಮೆ ಒಪ್ಪಿಕೊಳ್ಳುವುದು ಬೇಡವಾಗಿತ್ತು. ಉಕ್ಕಿ ಬಂದ ವಿರಕ್ತಿಯನ್ನು ಬದಿಗೊತ್ತಿ ವಿಷಾದ ಪೂರ್ಣವಾಣಿಯಲ್ಲಿ ಬಿತ್ತರಿಸಿದ,

"....ಬಹಳ ಕಷ್ಟ."

ಸೂರ್ಯ ಮೆಲ್ಲಮೆಲ್ಲನೆ ಪಡುವಣ ಮಟ್ಟೆಯ ಕಡೆಗೆ ಇಳಿಯ ತೊಡಗಿದ್ದ. ಜಗದ್ವಲಯದಲ್ಲಿ ವಸಂತೋತ್ಸವ ಆಚರಿಸುತಿದ್ದ ಅಗಾಧವಾದ ಸುಡು ಬಿಸಿಲು ತಂಪು ತಳೆಯಲು ಆರಂಭಿಸಿತ್ತು.

ವಾತಾವರಣದ ಮೇಲೆ ಗಮನ ಹರಿಸಿದ್ದರೂ ವಿಮಲ ತೊಟ್ಟು ಕಳಚಿದಂತೆ ಉತ್ತರಿಸಿದಳು "ಇದೆಲ್ಲಾ ಅರ್ಥವಿಲ್ಲದ ದುರಭಿಮಾನ!"

ರಾಧೇಶ್ಯಾಂ ಒಮ್ಮೆಲೇ ಕೆಸರಿನಲ್ಲಿ ಮುಳ್ಳು ತುಳಿದಂತಾದ. ತಾನು ಅಷ್ಟೊಂದು ಹಿಂಜರಿದಿದ್ದರೂ ಅವಳ ಆ ಅಮಾಯಕ ಉತ್ತರ ಡಂಗು ಬಡಿಸಿತು. ತಟ್ಟನೆ ಪ್ರತಿವಾದ ಹೂಡಿದ,

"ಇದರಲ್ಲಿ ದುರಭಿಮಾನ ಇನಿತೂ ಇಲ್ಲ. ನ್ಯಾಯ ಶಾಸ್ತ್ರ ಮಕ್ಕಳಿಗೆ ಪಾಠ ಹೇಳಿದಷ್ಟು ಸರಾಗವಲ್ಲ!"

"ಆದರೂ... ಸ್ತ್ರೀಯರು ನಿರ್ವಹಿಸಲಾಗದಂತಹ ಕಾರ್ಯವೇನಲ್ಲ." ದೃಢವಾದ ಕಂಠದಿಂದ ನಿರಾಕರಿಸಿದಳು ವಿಮಲ.

ಹಠಾತ್ತಾಗಿ, ಅನಿರೀಕ್ಷಿತವಾಗಿ ಪ್ರದರ್ಶಿತವಾದ ಆಕೆಯ ಆಂತರಂಗಿಕ ಪ್ರಬಲ ವಿರೋಧವನ್ನು ಕಂಡು... ಸ್ತ್ರೀ ಸ್ವಾತಂತ್ರ್ಯವನ್ನು ಅಂದಿಂದಿಗೂ ಅಲ್ಪ ವಿಚಾರವೆಂದು ಬದಿಗೊತ್ತುತ್ತಲೇ ಬಂದಿದ್ದ ರಾಧೇಶ್ಯಾಂ ಸ್ವಲ್ಪ ವಿಚಲಿತನಾದ. ಅವಳ ಸಹಕಾರವನ್ನು ಎರಡೂ ಕೈಗಳಿಂದ ಆತ್ಮೀಯವಾಗಿ ಹೃತ್ಪೂರ್ವಕವಾಗಿ ಪಡೆಯುವ ಮೊದಲೇ ಅನುಭವಕ್ಕೆ ಬಂದ ಈ ಜಿಹಾಸಾ ಪೂರ್ಣ ವಿಚಾರಧಾರೆ ಮನವನ್ನು ಕೊರೆಯುತೊಡಗಿತು.

"ನಿಮ್ಮಲ್ಲಿ ಒಂದು ಪ್ರಶ್ನೆ....?"

"ಏನು ಹೇಳಿ!"

ಒಡನೆ ಕಾಮನಬಿಲ್ಲಿನಂತಹ ಹುಬ್ಬುಗಳು ಏರಿ ಇಳಿದುವು. ರಂಗೊರೆದ ನಸುಗೆಂಪಿನ ತುಟಿಗಳಲ್ಲಿ ಮಂಗಳಕಾಂತಿಯುಕ್ತ ಮುಗುಳ್ನಗೆಯನ್ನು ಸೂಸಿ ಏಕನಿಷ್ಠೆಯಿಂದ ಉತ್ತರವನ್ನು ನಿರೀಕ್ಷಿಸಿದಳು.

ರಾಧೇಶ್ಯಾಂ ಪುಳಕಿತನಾದ. ಆ ಆಲೋಚನಾಶೀಲೆಯ ಪ್ರಶ್ನೆ ಮನವನ್ನು ಸೂಜಿಗಲ್ಲಿನಂತೆ ಸೆರೆಹಿಡಿಯಿತು. ಪ್ರಯತ್ನಿಸಿದರೂ ಅವಳಿಂದ ದೃಷ್ಟಿಯನ್ನು ಹಿಮ್ಮರಳಿಸಲಾಗಲಿಲ್ಲ, ಯುಗಯುಗಾಂತರಗಳ ಕವಿಪುಂಗವರು ಹೃದಯ

ತಂತುಗಳಲ್ಲಿ ಒಮ್ಮೆಗೇ ರಾಗಾರುಣತಾನವನ್ನು ಮಿಾಟಿದಂತಾಗಿ ಮೈ ರೋಮಾಂಚನಗೊಂಡಿತು. ಜನ್ಮ ಜನ್ಮಗಳ ಜೀವನ ಸಾರ್ಥಕತೆಗಾಗಿ ಅಂತ ರ್ವಾಣಿ ಧೀಂಕಿಡುತಿತ್ತು,

ಸ್ವಲ್ಪ ಹೊತ್ತು ರುದ್ರಮೌನ ರಾಜ್ಯಭಾರ ನಡೆಸಿತು.

ಆ ಮುಹೂರ್ತದಲ್ಲಿ ಗಿಡಗಳಲ್ಲಿ ಅತ್ತಿತ್ತ ಹಾರಾಡುತ್ತ ಕೇಳೀ ಕಲಹ ನಡೆಸುವ ಕಲವಿಂಕ ದಂಪತಿಗಳು ದೃಷ್ಟಿಗೆ ಬಿದ್ದರು. ಅಲ್ಲಿಂದ ಮೆಲ್ಲೆಲರ ಲೀಲೆಯಲ್ಲಿ ಮರ್ಮರಿಸುವ ಹಸುರೆಲೆಗಳ ನೆಲೆಯಲ್ಲಿ ಪುಷ್ಪಿತ ಪುಷ್ಪಲೋಕ ದಲ್ಲಿನ ವರ್ಣವರ್ಣಾಂತರದಲ್ಲಿ ನಿರಾತಂಕವಾಗಿ ಹರಿದಾಡಿತು. ರಾಧೇಶ್ಯಾಂ ಬಿಸಿಯುಸಿರು ಬಿಟ್ಟ. ಅಂತರ್ನಿಹಿತ ರಾಗಾರುಣದರ್ಪಣ ಚಿತ್ತಾಗ್ನಿಯನ್ನು ಒಡಿದು ಭೀಮಿಸಹತ್ತಿತು. ಆತನ ಮುಖದ ಮೇಲಿನ ವಿವಿಧ ಭಾವಧಾರೆ ಯನ್ನು ಗಮನಿಸಿ ಹಾಸ್ಯರಸಪೂರ್ಣವಾಗಿ ಪ್ರಶ್ನಿಸಿದಳು ವಿಮಲ,

"ಏನು....ಸಮಾಚಾರ ? ಆರೋಗ್ಯವಾಗಿದ್ದೀರಷ್ಟೆ ?"

ಒಡನೆ ಇಬ್ಬರ ಮುಖದಲ್ಲೂ ನಗುವಿನ ಚಿಲುಮೆ ಉಕ್ಕಿ ಹರಿಯಿತು.

ಅವಳ ತುಂಟತನವನ್ನೂ, ಧೈರ್ಯವಿಶೇಷವನ್ನೂ, ರೂಪಮಾಧುರ್ಯ ವನ್ನೂ ಒಮ್ಮೆಗೇ ಕಂಡುಕೊಂಡು ಭ್ರಾಂತನಾದರೂ ತನ್ನನ್ನು ತಾನೇ ಹತೋಟಿಯಲ್ಲಿಟ್ಟುಕೊಂಡು ಸುಸ್ವರದಿಂದ ನುಡಿದ,

"ವಿಧಾತನ ಸೌಂದರ್ಯಭಂಡಾರ ಪುಷ್ಪಲೋಕವನ್ನು ನಿರ್ಮಿಸಿದ ನಂತರ ನಿಶ್ಯೇಷವಾಗಲೇಬೇಕಿತ್ತು. ಆದರೆ ಅದೆಷ್ಟು ವಿರಾಟವಾದುದೋ ಇಂದಿಗೂ, ಎಂದೆಂದಿಗೂ ಅದು ಮುಗಿಯುವ ಸೂಚನೆ ಸಹ ಕಾಣಿಸುತ್ತಿಲ್ಲ. ಮೇಲಾಗಿ, ಈ ಸ್ತ್ರೀಲೋಕವನ್ನು ಇಷ್ಟೊಂದು ತೇಜಃಪುಂಜವಾಗಿ ಸೃಷ್ಟಿಸಲು ಇನ್ನಾವ ಸಾಧನವನ್ನು ಬಳಸಿಕೊಂಡನೋ ಊಹಿಸುವುದು ಕಷ್ಟ. ಆತನ ಸಾಧನೆಯೇ ಸಾಧನೆ!"

ವಿಮಲ ಕಿಲಕಿಲ ನಗುತ್ತ "ಓ....! ಇದುವರೆಗೆ ನೀವು ಸ್ತ್ರೀಯಲ್ಲಿ ತೇಜ ವನ್ನು ಮಾತ್ರ ಕಂಡುಕೊಂಡಿದ್ದೀರಿ ?"

"ಹೌದು ! ಪ್ರಪಂಚ ವಿಶಾಲವಾದುದು ; ಒಂದೇ ಬಾರಿಗೆ ಅಳೆಯು ವುದು ಕಷ್ಟ."

ಇಬ್ಬರ ಮುಖದಲ್ಲೂ ಮುಗುಳ್ನಗು ಮೂಡಿ ಮಾಯವಾಯಿತು.

"ನೀವು ಮುಂದೆಯೂ ಉದ್ಯೋಗವನ್ನು ಕೈಕೊಳ್ಳಲಿರುವಿರಾ ?"

"ಹೌದು." ಎಂದ ವಿಮಲ ಸ್ವಲ್ಪಹೊತ್ತು ಯೋಚಿಸಿ ನಿತಾಂತ ಗಾಂಭೀರ್ಯದಿಂದ ಪುನಃ ನುಡಿದಳು "ಅಷ್ಟು ಮಾತ್ರವೇ ಅಲ್ಲ, ಎಂ.ಎ., ಓದುವ ಅಭಿಲಾಷೆಯೂ ಉಂಟು !"

ಈಗ ರಾಧೇಶ್ಯಾಂ ಚಿಂತಿತ ಮಾತ್ರವೇ ಅಲ್ಲ, ಭಯಭರಿತನೂ ಆದ. ಮುಖಭಾವದಲ್ಲಿ ಅಂಗಾಂಗಗಳಲ್ಲಿ ಸ್ಫುರಿಸುತ್ತಿದ್ದ ಭಾವಧಾರೆಯನ್ನು ಅತೀ ಸೂಕ್ಷ್ಮವಾಗಿ ಅವಳ ಚಿತ್ತ ಗಮನಿಸುತಿತ್ತು. ತಂಗಾಳಿಯ ಲೀಲಾಧರಕ್ಕೆ ಮಣಿದು ಅತ್ತಿತ್ತಲುಗುವ ಮುಂಗುರುಳಿನ ಮೋಹಕತೆಯನ್ನು ಆಶಾಭರಿತ ಲೋಚನಗಳಿಂದ ನಿಟ್ಟಿಸುತ್ತ ತುಸು ಭಾರವಾದ ಧ್ವನಿಯಲ್ಲಿ ಕೇಳಿದ,

"ಒಂದುವೇಳೆ ನಿಮ್ಮ ಭಾವೀ ಪತಿಯು ಒಪ್ಪದೇ ಹೋದರೆ....?"

ಸಣ್ಣ ತಿರಸ್ಕಾರದ ನಗೆ ನಕ್ಕು ಉತ್ತರಿಸಿದಳು ವಿಮಲೆ,

ನನಗೆ ಅಂತಹವರ ಸಹವಾಸವೇ ಬೇಡ. ಯಾರು ವಿಶಾಲ ದೃಷ್ಟಿಯನ್ನು ಹೊಂದಿರುತ್ತಾರೋ ಅಂತಹವರ ಸಹಭಾಗಿಯಾಗುವೆ."

"ಅಂತೂ ದೃಢ ಮನಸ್ಸು ಮಾಡಿದ್ದೀರಿ !"

"ಹೌದು !"

ರಾಧೇಶ್ಯಾಂ ಸ್ವಲ್ಪಹೊತ್ತು ಗಾಢವಾಗಿ ಚಿಂತಿಸಿದ.... ಸುತ್ತಮುತ್ತಿನ ಪಕ್ಷಿಲೋಕ ಸ್ವಚ್ಛಂದವಾಗಿ ನಲಿಯುತಿತ್ತು. ಬಣ್ಣದ ಚಿಟ್ಟೆಗಳು ಭ್ರಮಿತ ಭ್ರಮರಗಳು ತಮ್ಮದೇ ಆದ ವಿಚಿತ್ರ ವೈಖರಿಯಲ್ಲಿ ವಾಯುವಿಹಾರ ಲೋಲುಪ್ತಿಯಿಂದ ಹಾರಾಡುತ್ತಿವೆ. ಅಷ್ಟೇ ಏನು ? ಸಕಲ ಜೀವಕೋಟಿ ಸ್ವಾತಂತ್ರ್ಯ ಸಾಧನೀಭೂತವಾಗಿವೆ-ಸ್ತ್ರೀಕೋಟಿ ವಿನಾ !

ಒಮ್ಮೆ ಕೊರಳೆತ್ತಿ ವಿಶಾಲವಾದ ವಿಶ್ವಾತ್ಮಕ ಪ್ರಪಂಚವನ್ನು ನಿಟ್ಟಿಸಿದ. ದೂರದ ನೀಲಿ ನಗುತ್ತಿದೆ... ರಜತವಾರಿರಾಶಿಯಂತೆ ಹಬ್ಬಿದ ಬೆಳ್ಮೋಡಗಳು ಗಗನವ್ಯಾಪಿಯಾಗಿವೆ. ಸೂರ್ಯ ಪಡುವಣ ಸೀಮೆಯಲ್ಲಿ ತಂಗಿದ್ದಾನೆ; ನಕ್ಷತ್ರಗಳು ಆಗಲೇ ಒಂದೊಂದಾಗಿ ಕಾಣಿಸತೊಡಗಿವೆ.

ಅಂತರ್ವಾಣಿ ಮೆಲ್ಲನೆ ಉದ್ಗಾರ ತೆಗೆಯಿತು....ಹರಿಯುವ ನೀರಿಗೆ ದೊಣ್ಣೆನಾಯಕನ ಅಪ್ಪಣೆಯೇ ?

ಆದರೆ....!

ನರನಾಡಿಗಳು ಸೀಳಿ ಹೋಗುವಂತೆ ಹರಿದಾಡುವ ಸಂಜಿನ ಲಹರಿ.... ದೇಹ ಸಮಸ್ತವನ್ನೂ ಸುಡುವಂತಹ ಮಹಾ ಕಾಲಕೂಟ....ಪ್ರತಿ ಅವಯವಗಳಲ್ಲಿ ಪ್ರಸಾರವಾಗುವ ಭಾವವಿಭಾವಗಳ ವಿಚಿತ್ರ ವೈಖರಿ....!

ಸತಿ....ಸಹಧರ್ಮಿಣಿ....ತನ್ನ ಅಧೀನತೆಯಲ್ಲಿಲ್ಲದಿದ್ದರೆ ಜೀವನ ರಥ ಮುಗ್ಗರಿಸುವುದೇ ಸೈ. ಪಾಶ್ಚಾತ್ಯ ಸಂಸ್ಕೃತಿಯನ್ನು ನಮ್ಮ ಜೀವನ ಕ್ಷೇತ್ರದ ನೈರ್ಮಲ್ಯಕ್ಕೆ ಹೊಲಸು ಅಂಟಿಸುವಂತೆ ಅಳವಡಿಸುವುದು ಬೇಡವೇ ಬೇಡ.... ಈ ಕಾಲದಲ್ಲಿ ಹೆಣ್ಣಿಗೇನು ಕೊರತೆ? ಈ ಹೆಣ್ಣಲ್ಲದಿದ್ದರೆ ಆ ಹೆಣ್ಣು! ಆ ಹೆಣ್ಣಲ್ಲದಿದ್ದರೆ ಓ ಹೆಣ್ಣು!

ಅಂತರಂಗದಲ್ಲಿ ತಿರಸ್ಕಾರದ ಲಹರಿಗಳು ಬೆಂಕಿಯ ಕಿಡಿಗಳಂತೆ ಮೂಡಿದುವು.

ಆದರೆ, ಘಳಿಗೆಘಳಿಗೆಗಳು ಮರುಘಳಿಗೆಯ ಆವರ್ತನಕ್ಕೆ ಸಿಕ್ಕಿ ಧೂಳೀಪಟವಾದಾಗ ಆ ಭಾವನೆಯೇ ಬುಡಮೇಲಾಗುತ್ತಿರುವುದು ತನಗೆ ಸ್ಪಷ್ಟವಾಗಹತ್ತಿತು. ಕಣ್ಮುಂದಿನ ಸ್ತ್ರೀ ಚೇತನ ತನುಮನಗಳನ್ನು ಯಾಂತ್ರಿಕವಾಗಿ ತನ್ನೆಡೆಗೆ ಸೆಳೆದುಕೊಳ್ಳಹತ್ತಿ, ಜೇಡ ಬಾಂಧವನ ನವುರಾದ ತಂತುಗಳಲ್ಲಿ ಸಿಕ್ಕಿ ಮಿಲಿಮಿಲಿ ಒದ್ದಾಡುವ ಕೀಟದಂತಾಯಿತು-ಚಿಂತಿತ ಚಿತ್ತ. ಅಲ್ಲಿಂದಲ್ಲೇ ಪದಚಾರಣ ಮಾಡುತ್ತ ನಿರ್ಮಲೆಯನ್ನು ಸ್ಮರಣೆಯ ಹಾದಿಯಲ್ಲಿ ಸಂಧಿಸಿದ. ಇವಳಿಗಿಂತ ಅವಳೇ ಉತ್ತಮ ಎಂದು ನರನರಗಳೂ ಹೇಳುತ್ತಿವೆ. ಯಾವ ರೀತಿಯಲ್ಲಿ ತನ್ನ ಜೀವನ ಕ್ಷೇತ್ರದ ಸಹಭಾಗಿನಿಯನ್ನು ಆರಿಸಿಕೊಳ್ಳಬೇಕೋ ಅರ್ಥವಾಗುತ್ತಿಲ್ಲ. ನವಯೌವನಭರಿತ ಅನುರಾಗವು ರೋಮರೋಮಗಳಲ್ಲೂ ದ್ರವಿಸುತಿತ್ತು, ಒಂದೆರಡು ಘಳಿಗೆ ಅಂತರ್ಮುಖಿಯಾಗಿ ಜೀವನ ಕ್ಷೇತ್ರದಲ್ಲಿ ಅಡ್ಡಾಡಿದ.

ಪಿಂಗಲವರ್ಣದ ಸೂರ್ಯಬಿಂಬ ಪಿಂಗಲ ಕಾಂತಿಯನ್ನು ಸೂಸಿ ಅಸ್ತಮಿಸಿತ್ತು.

ದಿಗ್ದೇವತೆಯ ಘನ ತರಲ ದೇಹಪ್ರಭೆಯಿಂದ ಸಮ್ಮೋಹಿನಿಯಾಗಿ ರಂಜಿಸುತಿದ್ದಾಳೆ.

ಸ್ವರ್ಣಕಾಂತಿಯಲ್ಲಿ ಮಿಂದು ಪುನೀತಳಾದಳೋ ಎಂಬಂತೆ ಏನೋ ಒಂದು ಬಗೆಯ ಸೌಮ್ಯ ವಿಶ್ವಸ್ತಭಾವದಿಂದ ವಿಮಲ ಮಂಡಿಸಿದ್ದಾಳೆ. ಚಿತ್ತ

ಪ್ರಪಂಚವನ್ನು ಮುಸುಗಿದ ಅಮಾಯಕ ವಿಚಾರಧಾರೆಯಲ್ಲಿ ಸಂಪೂರ್ಣ ಮುಳುಗಿದಂತಿದ್ದ ಆ ಕಮನೀಯ ಮೂರ್ತಿಯನ್ನು ಒಂದೆರಡು ಬಾರಿ ಸೂಕ್ಷ್ಮ ವಾಗಿ ಗಮನಿಸಿದನಂತರ ರಾಧೇಶಾಂ ಮೌನ ಮುರಿದ,

"ನಿರ್ಮಲೆಯ ಮದುವೆಯ ವಿಚಾರ ಏನಾಯಿತು ?"

"ಗೊತ್ತಿಲ್ಲ." ಯಾಂತ್ರಿಕವಾಗಿ ಉತ್ತರಿಸಿದಳು ವಿಮಲೆ.

"ಈ ಸಾಲಿನಲ್ಲಿ ಮಾಡಿಕೊಳ್ಳುವ ಅಭಿಪ್ರಾಯವಿದೆಯೆ ?"

"ಅದಿನ್ನೂ ತೀರ್ಮಾನವಾಗಿಲ್ಲ."

"ಪರಸ್ಪರ ಒಪ್ಪಿಕೊಂಡಿದ್ದಾರೆಯೆ ?"

"ಅದೂ ಸಹ ತಿಳಿಯದು."

ಬಹುಶಃ ಅವಳು ಬೇಕಾಗಿಯೇ ಮುಚ್ಚಿಡುತಿದ್ದಾಳೆ ಎನಿಸಿತು ರಾಧೇ ಶ್ಯಾಮನಿಗೆ. ಪುನಃ ತನ್ನಲ್ಲಿ ತಾನೇ ವಿಷಯ ಮಂಥನದಲ್ಲಿ ತೊಡಗಿದ. ವಿಮಲ ಬೆಚ್ಚಿಬಿದ್ದು ನೋಡಿದಳು. ಯೋಜನೆಯಲೆಯಲ್ಲಿ ಸಿಕ್ಕಿದ ಆತನ ಮಂತ್ರಮುಗ್ಧ ಮೋಹಕ ಶೈಲಿ, ಶ್ರುತಿಬದ್ಧ ಪದವಿನ್ಯಾಸ, ಹೃದಯಹಾರೀ ಚೇತನ ಸೂಜಿ ಗಲ್ಲಿನಂತೆ ಸೆಳೆಯುತಿತ್ತು. ಅಭೂತಪೂರ್ವ ಸಹಭಾಗೀ ಉತ್ಸಾಹ ಆತನ ಕರಕಮಲಗಳಲ್ಲಿ ತನ್ನನ್ನು ಆಗಲೇ ಅರ್ಪಿಸಿಕೊಂಡು ಬಿಟ್ಟಿದೆ. ರಕ್ತದ ಪ್ರತಿ ಕಣವೂ ಲಜ್ಜಾಭಾವದಿಂದ ತುಳುಕುತ್ತಿರುವಂತೆ ಭಾಸವಾಗಿ ಸ್ತಬ್ಧ ಚೇತನ ಪುಳಕಿತವಾಯಿತು.

ಸಂಧ್ಯಾವಿಹಾರಿಗಳಾದ ರಸಿಕರು ಆ ಬೃಹದ್ ವನವಲಯದಲ್ಲಿ ಎಲ್ಲಿಂದ ಎಲ್ಲಿಯವರೆಗೂ ಕಾಣಿಸುತಿದ್ದರು. ಮಾತುಕತೆಯ ಮೊರೆತ ಕಿವಿಯ ಮೇಲೆ ಅಪ್ಪಳಿಸಿ ಹೊಡೆದಂತೆ ಬೀಳುತಿತ್ತು. ಅರ್ಧಚಂದ್ರನ ವಿಲಾಸಯುತ ಕಾಂತಿಯಲ್ಲಿ ಕಾರು-ಜನ-ಪಶು-ಪಕ್ಷಿಗಳ ವರ್ಣರಂಜಿತ ದೃಶ್ಯ ದರ್ಶನೀಯವಾಗಿತ್ತು. ಸಾಯಂಸಮಯದ ತಂಪು ಮನೋಹರ ಭಂಗಿಯಲ್ಲಿ ಆರಂಭವಾಗಿತ್ತು. ಅದ್ಭುತ ಜಗದ್ವ್ಯಾಪಾರವನ್ನು ಮರೆತು ಆಂತರಂಗಿಕ ವ್ಯವಹಾರದಲ್ಲಿಯೇ ಮುಳುಗಿದ್ದು ಎಚ್ಚೆತ್ತಾಗ ನಿಶಾರಾಣಿ ಕೃಷ್ಣ ಕೌಶೇಯ ಉತ್ತರೀಯವನ್ನು ಸೆಳುವಾಗಿ ಹರಡುತಿದ್ದಳು.

ರಾಧೇಶ್ಯಾಂ ಅನುನಯದ ಗಣಿಯಾಗಿ ಪ್ರಶ್ನಿಸಿದ "ಈಗ ಹೇಳಿ, ನೀವು ಹೇಳುವುದು ಏನಾದರೂ ಇದೆಯೇ ?" ಕಣ್ಣುಗಳಲ್ಲಿ ವಿನೂತನ ಆಶಾಭಾವನೆ

ಮಿಂಚುತಿತ್ತು.

"ನಾನೇ .. ?"

ಪ್ರಸನ್ನ ಮುಖಿಯಾಗಿ ಅವಳು ಕೇಳಿದಾಗ ಅತ್ಯಂತ ಆಕರ್ಷಣೀಯ ವಾಗಿ ಕಂಡಳು.

"ಹೌದು ನೀವೆ! ನೀವಲ್ಲದೆ ಇನ್ಯಾರು ಹೇಳಬೇಕು ಹೇಳಿ."

"ನಾನು ಹೇಳುವಂತಾದ್ದು ಏನಿದೆ....?"

ಆ ಅಮಾಯಕ ಉತ್ತರ ಮನದಾಳಕ್ಕೆ ಇಳಿಯಿತು. ಪುನಃ ಅವಳನ್ನು ಪ್ರಶ್ನಿಸಬೇಕೆನಿಸಲಿಲ್ಲ. ಇಬ್ಬರೂ ಮನೆಯ ಕಡೆ ಹಾದಿ ಹಿಡಿದರು. ಪದ ತಾಡನದಿಂದುಂಟಾಗುವ ಮರಳು-ಜಲ್ಲಿ-ಕಲ್ಲುಗಳ ಸಣ್ಣ ಶ್ರುತಿಯೊಂದಿಗೆ ಹೆಜ್ಜೆ ಗಳು ತಾಳಲಯ ಬದ್ಧವಾದುವು.

ದೂರದಲ್ಲಿ ಬಾನುಲಿಯಿಂದ ಹರಿದು ಬರುತಿದ್ದ ಸವಿಗೊರಲಿನ ಸಂಗೀತ ಕರ್ಣಪಟಲಗಳ ಮೇಲೆ ಮೃದುವಾಗಿ ಬೀಳುತಿತ್ತು....ತಲ್ಲಣಿಸದಿರು ಕಂಡ್ಯಾ ತಾಳು ಮನವೇ! ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ.....

ಮಧುರ ಗಾನ....ದಿವ್ಯ ಸಮಾಧಾನ!

## ೨೭

ಶಾಲೆಯ ಆವರಣಕ್ಕೆ ಕಾಲಿಟ್ಟಾಗಲೇ ಆತ್ಮೀಯ ಗೆಳತಿ ಲೀಲಾ ಕೂಡಿ ಕೊಂಡಳು.

ಪ್ರಸನ್ನ ಮುಖಿಯಾಗಿ ಲೀಲಾ ಪ್ರಶ್ನಿಸಿದಳು "ಏನು ವಿಶೇಷ?"

"ಏನೂ ಇಲ್ಲವಲ್ಲಾ." ಎಂದಿನಂತೆ ಉತ್ತರಿಸಿದಳು ನಿರ್ಮಲ. "ನಿನಗೆ ಬರೀ ತಮಾಷೆ!"

"ಇಲ್ಲಮ್ಮಾ! ನಿನ್ನಲ್ಲಿ ಏನೋ ಒಂದು ಬಗೆಯ–ಅದರಲ್ಲೂ ಹೊಸ ರೀತಿಯ ಉತ್ಸಾಹ ಕಾಣಿಸುತ್ತಿದೆ ಇಂದು!"

"ಸರಿ; ಸರಿ."

ಇಬ್ಬರ ಮುಖಮಂಡಲಗಳೂ ಎಳೆನಗುವಿನಿಂದ ಕೂಡಿ ಮಂಗಳ ಮಯವಾದುವು.

ಶಾಲಾ ಪ್ರದೇಶದಲ್ಲಿ ಸಣ್ಣದೊಡ್ಡ ಮರಗಳನೇಕವು ಹಚ್ಚಹಸುರಾಗಿ

ಂತಿವೆ. ಮುಂಗಾರು ಮಳೆಯ ಹೊಡೆತ ಉಷ್ಣ ವಾತಾವರಣವನ್ನು ತಂಪುಗೊಳಿಸಿತ್ತು. ವನವಿಹಾರೀ ವೀಚಿವಾಯು ಎಲ್ಲೆಡೆಯೂ ಸಂಚರಿಸುತಿತ್ತು. ವಾತಾವರಣದ ಮೋಹಕತೆಗೆ ಮನಸೋತಿತ್ತು ಇಬ್ಬರೂ ಕಲ್ಲು ಬೆಂಚಿನ ಮೇಲೆ ಕುಳಿತರು. ಅಲ್ಲಲ್ಲಿ ಹಸುರು ಮೊಳೆತ ನೆಲದ ಮೇಲೆ ನೋಟ ಹರಿಯಿತು. ಭ್ರಮರಭಾರದಿಂದ ವಿಗಲಿತ ಪುಷ್ಪಪರಾಗ ಚಿತ್ರಿತ ರಂಗೋಲಿಯಂತೆ ಹಸುರಿನ ಮೇಲೆ ಮನೋರಮ ವೈಖರಿಯಲ್ಲಿ ಹರಡಿತ್ತು.

ಲೀಲಳ ಚಂಚಲ ನೇತ್ರಗಳಲ್ಲಿ ಜೀವನ ಜ್ಯೋತಿ ಬೆಳಗುತಿತ್ತು. ನೇರ ಬೈತಲೆ ಸಿಂಧೂರ ಭೂಷಿತವಾಗಿತ್ತು. ಅವಳು ಅಲಂಕಾರ ಪ್ರಿಯೆಯಾಗಿದ್ದರೂ ಅದರಲ್ಲಿ 'ಮಿತಿ' ಇದ್ದುದರಿಂದ ತುಂಬ ಲಕ್ಷಣವಾಗಿ ಕಾಣಿಸುತ್ತಾಳೆ. ಸ್ನೇಹ ಪರವಶತೆಯಿಂದ ಅವಳ ಕೈಗಳನ್ನು ಬಿಗಿಯಾಗಿ ಅದುಮಿ ಹಿಡಿದುಕೊಂಡು ಆಂತರಿಕ ವೇದನೆಯಿಂದ ನುಡಿದಳು ನಿರ್ಮಲ.

"ನನಗೆ ಟ್ಯೂಶನ್ ಹೇಳುವಾಗ ಧಾರುಣಿಯನ್ನು ಮರೆಯುವುದಕ್ಕೇ ಆಗುವುದಿಲ್ಲ ಲೀಲಾ....! ಅವಳ ಪರಿಚಯವಾದಾಗಿನಿಂದ ಏನೋ ಒಂದು ಬಗೆಯ ಆತ್ಮೀಯತೆ ಬೆಳೆದುಕೊಂಡಿತ್ತು. ಅದು ಎಷ್ಟು ಬೇಗನೆ ಬೆಳೆದು ಕೊಂಡಿತೋ ಅಷ್ಟೇ ಬೇಗನೆ ಕಡಿದು ಕೊಂಡಿತು. ಪಾಪ, ಬಲು ಚಟುವಟಿಕೆಯಾದ ಹುಡುಗಿ!"

ಮಾತು ಮುಗಿದಾಗ ಧ್ವನಿ ನಸು ಕಂಪಿಸಿದುದನ್ನು ಅವಳು ಗಮನಿಸಲಿಲ್ಲವೇನೋ....ವಿಚಾರ ಬದ್ಧಳಾಗಿ ನುಡಿದಳು ಲೀಲಾ "ಅಲ್ಪಾಯಸ್ಸಿನ ಮಕ್ಕಳು ಬಲು ಬುದ್ಧಿವಂತರು !"

ಸ್ವಲ್ಪ ಹೊತ್ತು ಇಬ್ಬರ ತುಟಿಗಳೂ ಬಿರಿಯಲಿಲ್ಲ.

ಅನಂತರ ಲೀಲಾ ಕೇಳಿದಳು,

"ಈ ಸಲ ನೀನು ಎಂ. ಎ.,ಗೆ ಸೇರುವುದು ಖಚಿತವೇ ?"

"ಆರ್ಥಿಕ ಪರಿಸ್ಥಿತಿ ಅಷ್ಟು ಆಶಾದಾಯಕವಾಗಿಲ್ಲ. ಆದರೂ ಸೇರುವ ಮನಸ್ಸಿದೆ. ಇನ್ನೂ ನಿರ್ಧಾರ ಮಾಡಿಲ್ಲ. ಪರಿಸ್ಥಿತಿಗೆ ಅನುಗುಣವಾಗಿ ಹೊಂದಿಕೊಳ್ಳಬೇಕು."

ಉತ್ತರ ಯಾಂತ್ರಿಕವಾಗಿ ಹೊರಬಿತ್ತು. ತದನಂತರ ಸಂಸಾರಿಕವಾಗಿ ಪರಸ್ಪರ ವಿಚಾರ ವಿನಿಮಯ ಮಾಡಿಕೊಂಡಾಗ ಆಂತರಿಕ ವ್ಯವಹಾರಗಳೂ

ಹೊರಬಿದ್ದುವೇನೋ....ಹೆಚ್ಚುಕಡಿಮೆ ಅದೇ ಸಮಯಕ್ಕೆ ಅಮರನಾಥ ಅಲ್ಲಿ ಪ್ರತ್ಯಕ್ಷನಾದ. ಕಣ್ಣುಗಳಲ್ಲಿ ಭಾವ ಸ್ಫೂರ್ತಿ ಮಿಂಚುತಿತ್ತು.

"ಏನಾಯ್ತು, ನಿಮ್ಮ ಹೈದರಾಬಾದ್ ಕರೆ ?"

"ಹಾಗೇ ಇದೆ. ಇನ್ನೂ ಒಪ್ಪಿಗೆ ಕೊಟ್ಟಿಲ್ಲ."

ಆ ಮುಹೂರ್ತದಲ್ಲಿ ಅಂತಃಪಟಲದ ಮೇಲೆ ಪ್ರತಿಫಲಿತ ಯಾವುದೋ ಮಧುರಾನುಭೂತಿಯಿಂದ ಪುಳಕಿತನಾಗಿದ್ದರೂ ಅದನ್ನು ತೋರಗೊಡದಂತೆ ತನ್ನನ್ನು ತಾನು ನಿಗ್ರಹಿಸಿಕೊಳ್ಳುತ್ತ ನುಡಿದ,

"ನಾವೊಂದು ಬಯಸಿದರೆ ವಿಧಿ ಇನ್ನೊಂದು ಬಯಸುತ್ತದೆ....ಯಾವುದನ್ನೇ ಆಗಲಿ ನಾವು ನಿರ್ಣಯಿಸುವುದು ಸಾಧ್ಯವಿಲ್ಲ....ಕರ್ತವ್ಯ-ನಿಷ್ಠೆಗಳ ನೇಮದಲ್ಲಿ ದಿನವೂ ತೊಳಲುವುದೇ ಆಗಿದೆ."

"ಜೀವನದೊಡನೆ ಆಟವಾಡಿದರೆ ಸಮಸ್ಯೆಯನ್ನು ಬಗೆಹರಿಸಿದಂತೆ ಆಗುತ್ತದೆಯೇ ಅಮರನಾಥ ಬಾಬೂ ?" ಎಂದಳು ಲೀಲಾ. ತುಂಟನಗೆ ತುಟಿಗಳಲ್ಲಿ ನಲಿಯುತಿತ್ತು.

"ಜೀವನದಲ್ಲಿ ಆಟವಾಡುವುದೇನಿದೆ ? ಮುಖ್ಯವಾಗಿ ಹೊಣೆಗಾರಿಕೆಯಃ ಉದ್ಭ್ರಾಂತತೆ ನಮ್ಮನ್ನು ಬಡಿದು ಕೂಡಿಸುತ್ತದೆ !"

"ಬಿಡಿ, ಬಿಡಿ. ಹೊಣೆಗಾರಿಕೆ ನಿಮಗೆ ಮಾತ್ರವೇ ಅಲ್ಲ; ನಮಗೂ ಇವೆ; ಎಂಬ ಸಜೀವ ಸತ್ಯವನ್ನು ನೀವು ಯಾವಾಗಲೂ ಮರೆಯುತ್ತಿರುತ್ತೀರಿ....ಅದು ಆಶ್ಚರ್ಯವೇ ! ಅದರಿಂದ ನಮಗೆ ಎಂತಹ ದುಃಖವುಂಟಾಗುತ್ತದೆ ಎಂಬುದು ಯಾರಿಗಾದರೂ ತಿಳಿಯುತ್ತದೆಯೇ ?"

ಅಮರನಾಥ ನಿಶ್ಚಲಭಂಗಿಯಲ್ಲಿ ಕೇಳಿದ. ಆಕೆಯ ವಾಕ್ಯಸರಣಿ ನಿರ್ಮಲೆಯ ಆಂತರಂಗಿಕ ಪ್ರತಿಧ್ವನಿಯಂತೆಯೇ ಮೊಳಗಿತು. ಆಗ ಒಮ್ಮೆಗೇ ಸ್ತ್ರೀಜನರ ಸಮಸ್ತ ದುಃಖವನ್ನು ಅಳೆದು ಸುರಿದು ನೋಡಿದಂತಾದರೂ ಅದನ್ನು ತುಂಬಿಕೊಳ್ಳಲಾಗಲೀ ಅಥವಾ ಸಹಾನುಭೂತಿಯನ್ನು ತೋರಲಾಗಲೀ ತನ್ನ ಅಂತರಂಗದಲ್ಲಿ ಸ್ಥಳವೇ ಸಾಲುತ್ತಿಲ್ಲ. ಆದರೂ ಒಮ್ಮೆ ಕಿಂಚಿತ್ ಕನಿಕರದಿಂದ ಹುಬ್ಬೆತ್ತಿ ನೋಡಿದ. ಅವಳ ಆತ್ಮಪ್ರಭೆ ಮುಖಬಿಂಬದಲ್ಲಿ ಜ್ವಲಿಸುತಿತ್ತು, ಆದರೇನು? ಆ ಪೂರ್ಣಜ್ಞಾನಮಯಿಯ ಮುಂದೆ ತಾನೊಂದು 'ಅಲ್ಪವಸ್ತು' ಎಂಬಂತೆ ಸೋಲೊಪ್ಪಿಕೊಳ್ಳಲು ಮನಸ್ಸು ಸರ್ವಥಾ ನಿರಾಕರಿಸಿತು.

ಅಂತಲೇ ತನ್ನನ್ನು ತಾನು ಸಾವರಿಸಿಕೊಳ್ಳುತ್ತ ರಾಜಗಾಂಭೀರ್ಯದಿಂದ ನುಡಿದ,

"ನನಗೆ ಇದುವರೆಗೂ ಜೀವನದ ಕಡೆ ದೃಷ್ಟಿ ಹಾಯಿಸಲು ಬಿಡುವೇ ಆಗಲಿಲ್ಲ; ಎಂದರೆ ನೀವು ಒಪ್ಪಿಕೊಳ್ಳುತ್ತೀರಷ್ಟೆ?"

"ಹಾಗಾದರೆ....?" ಲೀಲಾ ತುಂಟನಗೆ ಬೀರಿದಳು.

"ಈಗ ಅನಾವಶ್ಯಕ ಮಾತು ಬೆಳೆಸುವುದೇಕೆ? ವೃಥಾ ಜಿಹಾಸೆ" ಎಂದಳು ನಿರ್ಮಲ; ನೈರಾಶ್ಯಪೂರ್ಣ ವಾಣಿ ಎದೆಯಾಳದಿಂದ ಹರಿದುಬಂತು. ಆತ್ಮಗ್ಲಾನಿಯಿಂದ ಮುಖಮುಂಡಲ ಬಾಡಿಹೋಗಿತ್ತು.

ಇಬ್ಬರಿಗೂ ಉತ್ತರವಾಗಿ ಏಕಕಂಠದಿಂದ ನುಡಿದ ಅಮರನಾಥ್ "ಇನ್ನೂ ಬೇಕಾದಷ್ಟು ಸಮಯವಿದೆ. ಈಗಲೇ ಅವಸರಿಸುವ ಅಗತ್ಯವಿಲ್ಲ."

"ಮೂರ್ಖತನ!" ದೃಢಕಂಠದಿಂದ ಬಿತ್ತರಿಸಿದಳು ಲೀಲಾ. ನೋಟ ಗೆಳತಿಯ ಕಡೆ ಒಂದೆರಡು ಕ್ಷಣ ಹೊರಳಿ ಹಿಮ್ಮರಳಿತು.

ಅವನು ನಸುನಾಚಿದಂತೆ ತೋರಿಬಂದರೂ ತನ್ನನ್ನು ತಾನು ಸಮರ್ಥಿಸಿಕೊಂಡ "ನೀವು ಹೇಳಿದ್ದು ಸರಿ! ಖಂಡಿತವಾಗಿಯೂ ನಾವು ಅನೇಕ ವಿಚಾರಗಳಲ್ಲಿ ಮೂರ್ಖರೇ ಹೌದು....!"

ಅವನ ಸಮರ್ಥನೆಗೆ ಪ್ರತಿವಾದನೆ ಹೂಡಲು ಇಬ್ಬರಿಗೂ ಮನಸ್ಸಾಗಲಿಲ್ಲ. ಅವನು ನಾನೇ ತಾನಾಗಿ ಮುಂದುವರಿದ,

"ನಾನು ಜೀವನದೊಡನೆ ಆಟ ಆಡುವಷ್ಟು ಎಳೆಯನಲ್ಲ. ಎಷ್ಟೇ ಪ್ರಯತ್ನಿಸಿದರೂ ಕಾರ್ಯಕಾರಣಗಳಿಗೆ ಹೊಂದಿಕೆಯಾಗುತ್ತಲೇ ಇಲ್ಲ. ಬಹುಶಃ ಕಾಲ ಪರಿಪಕ್ವವಾಗಿಲ್ಲ ಎಂದರೆ ತಪ್ಪಾಗಲಾರದು."

"ಅದಕ್ಕೇನಂತೆ? ಸೋಲಿಗೆ ನೂರು ಕಾರಣಗಳನ್ನಾದರೂ ಕೊಡ ಕೊಡಬಹುದು." ಎಂದಳು ನಿರ್ಮಲ.

ಅಮರನಾಥ ನಿರುತ್ತರನಾದ. ಮನಸ್ಸು ಸೋಲೊಪ್ಪಿಕೊಂಡಿತು.

ಅನಂತರ ಮೂವರೂ ತಮ್ಮ ತಮ್ಮ ತರಗತಿಗಳಿಗೆ ಹೊರಟರು. ಪಾಠ ಪ್ರವಚನಗಳನ್ನು ಮುಗಿಸಿ ನಿರ್ಮಲ ಮನೆಯನ್ನು ಸೇರಿದಾಗ ಹೊತ್ತು ಐದರ ಅಂಚಿನಲ್ಲಿ ವಿರಮಿಸಿತ್ತು. ರಜೆ ತೆಗೆದುಕೊಂಡಿದ್ದ ವಿಮಲ ಮನೆಯಲ್ಲೇ ಉಳಿದಿದ್ದಳು. ಕುರ್ಚಿಯ ಮೇಲೆ ಮಂಡಿಸಿದ್ದ ರಾಧೇಶ್ಯಾಂ ಎದ್ದುನಿಂತು

ಗೌರವ ತೋರಿ ಅಭಿನಂದಿಸಿದ.

ನಿರ್ಮಲ ಪ್ರತಿವಂದನೆ ಸಲ್ಲಿಸಿದಳು.

"ಇಂದು ಬಹಳ ಮುಂದಾಗಿಯೇ ನಿಮ್ಮ ಕೋರ್ಟ್ ವ್ಯವಹಾರ ಮುಗಿದಂತಿದೆ....?"

"ಹೌದು. ಸ್ವಲ್ಪ ಮುಂಚಿತವಾಗಿಯೇ ಮನೆಗೆ ಬಂದಿದ್ದೆ."

"ಪರವಾಯಿಲ್ಲ....ಅಲ್ಪ ವಿರಾಮ."

"ಪರಕೀಯರ ವ್ಯವಹಾರ ಮನಸ್ಸಿಗೆ ಅಸಹ್ಯವಾದಾಗ ಸ್ವಕೀಯ ಚಿಂತನೆ ಮೂಡುತ್ತದೆ!"

ಮೂವರ ಮುಖದಲ್ಲೂ ಎಳೆನಗುವಿನ ಲಹರಿ ಉಕ್ಕಿ ಹರಿಯಿತು.

ವಿಮಲ ಹುಬ್ಬೆತ್ತಿ ನೋಡಿದಳು. ಅವನ ಮುಖಭಾವ, ಮಾನಸಿಕ ಕ್ಷೋಭೆ, ಮಾತಿನ ಕಂಠಸ್ವನ ಮೆಲ್ಲಮೆಲ್ಲನೆ ತನ್ನಂತರಂಗದಲ್ಲಿ ಕೈಯಾಡಿಸಿದಂತಾಗಿ....ರಾಗಾನುರಾಗದಿಂದ ಕೂಡಿದ ಭಕ್ತಿಭಾವದಿಂದ ಮೈ ಪುಲಕಗೊಂಡಿತು. ಒಂದೆರಡು ಕ್ಷಣ ಮೈಮರೆತಳೇನೊ. ಆ ಮುಹೂರ್ತದಲ್ಲಿ ತನ್ನ ವಿನಾ ಪ್ರಕೃತಿ ಸಮಸ್ತವೂ ಜಾಗೃತಗೊಂಡಂತೆ ತೋರಿತು.

ಅವಳ ಭಾವೋನ್ಮಾದವನ್ನು ಸೂಕ್ಷ್ಮವಾಗಿ ಗಮನಿಸುತಿದ್ದ ರಾಧೇಶ್ಯಾಂ-"ನಿಮ್ಮ ಉಪಾಧ್ಯಾಯ ವೃತ್ತಿಯು ಸರಸ್ವತೀ ಪ್ರಸಾದಯುಕ್ತ ಮಾರ್ದವತೆಯಿಂದ ಮನಃಪ್ರಾಣಗಳನ್ನು ಜಾಗೃತಗೊಳಿಸುತ್ತದೆ. ಮೇಲಾಗಿ, ಕಷ್ಟ ಕಾರ್ಪಣ್ಯಗಳಿಂದ, ರೋಗ-ರುಜಿನಗಳಿಂದ ಕೂಡಿದ ಜನ ಸಮುದಾಯಕ್ಕೆ ಸಾಂತ್ವನ ನೀಡುವುದರಲ್ಲಿ ಅತ್ಯಂತ ಉಪಯುಕ್ತವಾಗುತ್ತದೆ....ನ್ಯಾಯವಾದಿತ್ವ ಸಹ ಅಷ್ಟೆ; ಆದರೆ ಭಿನ್ನ ಭಿನ್ನ ತಳಹದಿಯ ಮೇಲೆ ಪ್ರತಿಷ್ಠಿತವಾಗಿ.... ಅತ್ಯಂತ ಕ್ಲಿಷ್ಟತರವಾದ ಸಮಸ್ಯೆಗಳಿಂದ ಉದ್ಭೂತವಾಗಿದೆ. ವಿಜಯ ಕೇತನದಲ್ಲಿ ಪಕ್ಷಕ್ಷೇಪವಿರಬಹುದು ಆದರೆ ಅದು ಅನಿವಾರ್ಯ."

ಅಂದ ಮೇಲೆ....?

"ನೀವು ನಮ್ಮ ಉದ್ಯೋಗವನ್ನೇಕೆ ವಿರೋಧಿಸುತ್ತೀರಿ?"

"ಇಂತಹ ಪ್ರಶ್ನೆಗಳಿಗೆ ಉತ್ತರಿಸುವುದು ಕಷ್ಟ."

"ಅಂದರೆ ...?"

"ಇದು ಕೇವಲ ಅಭಿಪ್ರಾಯದ ಮಾತು. ಎಲ್ಲರಿಗೂ ಅವರವರದ್ದೇ

ಆದ ಭಿನ್ನಭಿನ್ನ ಅಭಿಪ್ರಾಯಗಳಿರುತ್ತವೆ, ಎಂದರೆ ಒಪ್ಪುತ್ತೀರಷ್ಟೆ?" ರಾಧೇಶ್ಯಾಂ ನಗುತ್ತ ನುಡಿದ.

"ಚೆನ್ನಾಗಿದೆ....!"

ಆ ಮಧುರ ಕಂಠಸ್ವನ ಅತ್ಯಂತ ಪ್ರಶಾಂತವಾಗಿ ಹರಿದಿದ್ದರೂ ಅದೆಂತಹ ಉತ್ತರ? ಅಣಕವನ್ನೂ ಅಣಕಿಸುವಂತಹ ನುಣುಪು! ಅವಳಿಗೂ ತನಗೂ ಹೇಳಿಕೊಳ್ಳಬಹುದಾದಂತಹ ಅಂತರಂಗಿಕ ನಂಟು ಇನ್ನೂ ಮೂಡಿರಲಿಲ್ಲವಾದರೂ ಸರಳ ಸಂಭಾಷಣೆಯಲ್ಲಿಯೇ ಬಗ್ಗು ಬಡಿಯುವಂತಹ ಆತ್ಮೀಯತೆ! ಸಮ್ಮೋಹಿನೀ ಮಂತ್ರಕ್ಕೊಳಗಾದವನಂತೆ ಹಾಗೇ ಅಲುಗದೆ ನಿಂತ. ತೆರೆದ ತುಟಿಗಳಲ್ಲಿ ಹರಡಿದ ಮುಗುಳ್ನಗೆ ವಾಪಸಲಿಲ್ಲ. ಮನಃಪ್ರಾಣಗಳನ್ನು ಮೂಟೆ ಕಟ್ಟಿದಂತಾಯಿತು. ಜೀವನನಾಟಕವನ್ನು ಅತ್ಯಂತ ಕುತೂಹಲದಿಂದ ನೋಡುತ್ತಿರುವಾಗಲೇ ಕಣ್ಣುಗಳಿಗೆ ಮಂಜು ಆವರಿಸಿದಂತಾಯಿತು. ಮರು ಘಳಿಗೆಯಲ್ಲಿ ಎಚ್ಚತ್ತು ತನಗೆ ತಾನೇ ಅಂಕುಶವಾಗಿ ಆ ಅಪೂರ್ವ ಪೂರ್ವಾವಸ್ಥೆಯಿಂದ ಹೊರಬಿದ್ದು ಪ್ರಶ್ನಿಸಿದ "ಏಕೆ.. ?"

ವಿಮಲೆಯ ಬಿಚ್ಚಿದ ಕೂದಲು ಅಪರದ್ವೇಶದಲ್ಲಿ ಕಾಳಮೇಘದಂತೆ ಸ್ವತಂತ್ರವಾಗಿ ಹರಿದಾಡುತಿತ್ತು. ಕೆಂಪು ಹೂವಂಚಿನ ಹಸುರು ಸೀರೆಯ ಮೋಹಕತೆಯಲ್ಲಿ ಮರಕತ ಸಲಾಕೆಯಂತೆ ಸುಂದರ ತನ್ವಂಗಿಯಾದ ಆ ಶರೀರ ಸಂಪತ್ತಿಯ ಸಿಮ್ನೋನ್ನತ ಪ್ರದೇಶಗಳ ಮೇಲೆ ದೃಷ್ಟಿಯನ್ನು ಸ್ವಚ್ಛಂದವಾಗಿ ಹರಿಯಬಿಟ್ಟ ರಾಧೇಶ್ಯಾಂ. ಚಿತ್ತ ಮಂತ್ರಮುಗ್ಧವಾಯಿತು.

ವಿಮಲ ಉದ್ದನೆಯ ಬಾಚಣಿಗೆಯಿಂದ ಕೂದಲನ್ನು ಬಾಚಿಕೊಳ್ಳತೊಡಗಿದುದನ್ನು ನೋಡಿ ನಲ್ಮೆಯ ಭಾವದಿಂದ ನಿರ್ಮಲ ತಂಗಿಯನ್ನು ಕುರಿತು ಹೇಳಿದಳು "ಈ ಕಡೆ ಬಾ. ನಾನೇ ಹೆರಳು ಹಾಕುವೆ."

"ಇನ್ನೂ ಸಿಕ್ಕು ಬಿಡಿಸಲಿಲ್ಲ. ಕೂದಲು ಬಿಚ್ಚಿದಾಗಲೇ ರಾಧೇಶ್ ಬಂದರು. ಅದು ಹಾಗೆಯೇ ಉಳಿಯಿತು."

"ಇರಲಿ, ನಾನೇ ಬಾಚುವೆ."

ವಿಮಲ ಬಾಚಣಿಗೆಯನ್ನು ಅಕ್ಕನ ಕೈಗೆ ಕೊಟ್ಟು ಬಾಚಿಸಿಕೊಳ್ಳಲು ಮುಂದಾದಳು. ಅವಳ ಕೂದಲನ್ನು ಬಾಚುತ್ತ ನಿರ್ಮಲ ರಾಧೇಶ್ಯಾಮನನ್ನು ಪ್ರಶ್ನಿಸಿದಳು.

"ನಿಮ್ಮ ರೀತಿ-ನೀತಿಯನ್ನು ಗಮನಿಸಿದರೆ....ನಿಮ್ಮ ಕೈ ಹಿಡಿಯುವ ಗೃಹಿಣಿ ಬಹಳ ಶಿಷ್ಟಾಚಾರಿಣಿಯಾಗಿರಬೇಕು ಅನಿಸುತ್ತೆ...."

ಆ ಪ್ರಶ್ನೆಯಲ್ಲಿನ ತಿಳಿಹಾಸ್ಯವನ್ನು ಗಣನೆಗೆ ತೆಗೆದುಕೊಂಡು ರಾಧೇಶ್ಯಾಂ ಪ್ರಸನ್ನಭಾವದಿಂದ ನುಡಿದ,

"ನಮ್ಮ ಮನೆಯವರು ತುಂಬ ಸಂಪ್ರದಾಯ ಶರಣರು."

"ಹಾಗಾದರೆ ಹಳ್ಳಿಯ ಮುಗ್ಧ ಹೆಣ್ಣಾದರೆ ತುಂಬ ಒಳ್ಳೆಯದು!" ಹುಬ್ಬೇರಿಸಿದಳು ನಿರ್ಮಲ.

ರಾಧೇಶ್ಯಾಂ ಆ ಅಭಿಪ್ರಾಯವನ್ನು ವಿನಯ ವಿಶೇಷದಿಂದ ಸ್ವೀಕರಿಸಿದರೂ ಕಣ್ಣು ತುಟಿಗಳಲ್ಲಿ ಅನುಭಾವದ ಅಮಾಯಕ ಕಳೆ ನಲಿಯುತಿತ್ತು. ಸಚ್ಚಿದಾನಂದ ವಿಶೇಷದಿಂದ ಅಂದ "ಹೇಳಿ, ಹೇಳಿ. ಪರವಾಯಿಲ್ಲ."

ವಿಮಲ ಭ್ರೂಭಂಗ ಮಾಡಿ ತುಂಟಭಾವದಿಂದ ಪ್ರಶ್ನಿಸಿದಳು,

"ನಾಟಕ ನೃತ್ಯಗಳನ್ನು ಕಲಿತವಳಾದರೆ ?"

ಒಡನೆ ಮೂವರ ಮುಖದಲ್ಲೂ ನಗುವಿನಲಹರಿ ಉಕ್ಕಿ ಹರಿಯಿತು.

"ನನ್ನ ಸಾಹಸಕ್ಕೆ ಕ್ಷಮೆ ಇರಲಿ ರಾಧೇಶ್! ಇದು ಸರಿಯಾದ ಸಮಯ ಅಲ್ಲ ಎಂಬುದು ಸಲಸಲಕ್ಕೂ ಮರೆತು ಹೋಗುತ್ತೆ."

ವಿಮಲ ಪುನಃ ತುಂಟಭಾವದಿಂದಲೇ ನುಡಿಯನ್ನು ಹೊರಹಾಕಿದಳು. ಅಕ್ಷರ ಅಕ್ಷರವೂ ಪರಿಹಾಸ ಪೂರ್ವಕವಾಗಿ ಅಂತಃಸ್ಥಲವನ್ನು ಮುಟ್ಟಿದುವು. ಆ ಸುಶಿಕ್ಷಿತ ಯುವತಿಯ ಧೈರ್ಯಸಾಹಸವನ್ನು ಕಂಡು ಬೆರಗಾದವನಂತೆ ಅತ್ತಲೇ ನೋಡುತ್ತ ನಿಂತ. ಒಡಲಿನ ಕಡಲಿನಲ್ಲಿ ಯಾವುದೋ ಕಾಣದ ಕೈ ಕಲಕಿದಂತೆ ಭಾಸವಾಯಿತು.

೨೮

....ಪೂರ್ವ ದಿಶೆಯಲ್ಲಿ ನವನವೋಜ್ವಲ ಬಾಲರವಿಯ ಉತ್ಥಾನ!

....ಶ್ರಾವಣಮಾಸ ಕಾಲೀನ ಶಾಂತ ಪ್ರಶಾಂತ ವಾತಾವರಣ....

ವರ್ಷಭೈರವ ಒಮ್ಮೊಮ್ಮೆ ಭೋರಿಟ್ಟರೂ ಇನ್ನೊಮ್ಮೆ ಸುಮ್ಮನಾಗಿ ಬಿಡುವ. ನೆಲ ಜಲಮಯವಾಗಿ ಎಲ್ಲೆಲ್ಲೂ ಹಸುರು ಒಡೆದು ಮೂಡಿ ಹಸು

ರುಕ್ಕುವ ವನಧಾತ್ರಿ !

ಹೇಮಾಂಗಿನಿ ಹಠಾತ್ತನೆ ಮದುಮಗಳಾಗಿ ಸಿಂಗರಿಸಲ್ಪಟ್ಟಾಗ ಅಪೂರ್ವ ಸುಂದರಿಯಾಗಿ-ಭಾಪೋನ್ಮಾದಿನಿಯಾಗಿ ಕಂಡುಬಂದಳು. ಹೃದಯ ರಂಗ ವಿನೂತನ ಗಂಡುಗಲಿಯ ಸ್ವಾಗತಕ್ಕೆ ಸಜ್ಜುಗೊಳ್ಳುತ್ತಿತ್ತು. ಆಕೆಯ ಆನಂದೋತ್ಸಾಹದಲ್ಲಿ ಸಂಪೂರ್ಣ ಭಾಗಿಯಾದ ವಿಮಲ ಆನಂದ-ಅನುನಯ ಗಳ ಆಗರವಾಗಿ ಹಾಸ್ಯಾತ್ಮಕ ವಾಣಿಯಲ್ಲಿ ಪ್ರಶ್ನಿಸಿದಳು,

"ಏನಮ್ಮಾ ? ಹೇಗಿದ್ದಿ ? ಏನೆನ್ನಿಸುತ್ತೆ ? "

"ಅದಕ್ಕೆ ನೀನೇ ಉತ್ತರ ಹೇಳಬೇಕು !"

"ಅದು ಹೇಗೆ ಸಾಧ್ಯ ?"

"ನನ್ನನ್ನು ನೋಡುತ್ತಲೇ ಇದ್ದೀ....ಎಲ್ಲಾ ವಿಚಾರವೂ ನಿನಗೆ ಕರ ತಲಾಮಲಕ...."

"ಅದೇನಿದ್ದರೂ ಬಹಿರ್ಮುಖ. ನನ್ನದು ಅಂತರಂಗಿಕ ಪ್ರಶ್ನೆ."

"ಆ ಅನುಭವ ಸದ್ಯದಲ್ಲಿ ನಿನಗೂ ಆಗಲಿದೆ ಸುಮ್ಮನಿರು."

ಹೇಮಾಂಗಿನಿಯ ಅಣ್ಣ ದೂರ ಪ್ರದೇಶದಲ್ಲಿ ನೆಲೆನಿಂತುದರಿಂದ ಅವಳು ತನ್ನ ಸಂಸಾರವನ್ನು ತಂದೆಯ ಮನೆಯಲ್ಲೇ ಆರಂಭಿಸುವುದು ಅನಿವಾರ್ಯ. ಆ ಯೋಜನೆ ಹೊಸದಲ್ಲವಾದರೂ ಸುಸೂತ್ರವಾಗಿ ಕೈಗೂಡಿ ಬಂದುದು ಅನುಪಮ ಆನಂದವನ್ನು ತಂದಿತ್ತು. ನಾಲ್ಕೈದು ವರ್ಷಗಳ ಹಿಂದೆ ಗೃಹಿಣಿ-ಹೇಮಾಂಗಿನಿಯ ತಾಯಿ ಗತಿಸಿದ್ದುದರಿಂದ ಹೇಮಾಂಗಿನಿ ಇಲ್ಲದೆ ಆ ಮನೆ ನಡೆಯುವಂತೆಯೂ ಇರಲಿಲ್ಲ. ವೃದ್ಧ ತಂದೆ ಬಹಳ ಸಂಭ್ರಮದಿಂದ ಮಗಳ ವಿವಾಹ ಪೂರ್ವಭಾವೀ ಸಿದ್ಧತೆಯಲ್ಲಿ ಸಂಪೂರ್ಣ ನಿಮಗ್ನನಾಗಿದ್ದ. ಹೃದಯ ದಾಹೀ ಪ್ರೇಮಾಗ್ನಿ ಜ್ವಲಿಸುತ್ತಿತ್ತು.

ವಿಮಲೆಯ ಹಸ್ತಗಳನ್ನು ಬಿಗಿಯಾಗಿ ಹಿಡಿದುಕೊಂಡು ಸುಖ-ದುಃಖ ಗಳ ಸಂಜೀವಿನಿಯಾಗಿ ನುಡಿದಳು ಹೇಮಾಂಗಿನಿ,

"ಈ ಜೀವನವನ್ನು ಏಕಾಂಗಿಯಾಗಿ ನಡೆಸಿಕೊಳ್ಳುವುದು ಎಂದೂ ನಮ್ಮಂತಹವರಿಂದ ಆಗದ ಮಾತು. ಎಷ್ಟೇ ಶಕ್ತರಾದಾಗ್ಯೂ ವಿಶ್ರಾಂತಿಗೆ-ರಕ್ಷಣೆಗೆ ಒಂದು ಸುಖಾಶ್ರಯ ಬೇಕೇ ಬೇಕು. ಅದು ಎಲ್ಲಾ ಸಚರ ಜೀವಿ ಗಳಲ್ಲೂ ಅನಿವಾರ್ಯ. ಈ ನನ್ನ ನಿಯೋಜಿತ ಜೀವನ ಸಮಂಜಸವಾಗಿ

ದ್ದರೂ ವಿಚಿತ್ರವಾಗಿದೆ ಎನ್ನದಿರಲಾರೆ. ಮೇಲಾಗಿ ಹೇಗಾಗುತ್ತೋ ಏನೋ ಎಂಬ ಭಯ ಮನವನ್ನು ಆವರಿಸಿಬಿಟ್ಟಿದೆ...ನೀನು ನಿಜವಾಗಿಯೂ ಹೇಳು ಹೇಗಿರುತ್ತೆ ನನ್ನ ಬಾಳು ?"

"ಹೇಗೇ ಇರಲಿ, ಉದ್ಯಾನದ ಹಾದಿಯಂತೆ ಸುಖವಾಗಿ ಸಾಗಲಿ ಎಂದು ಆಶಿಸುವುದು ಮಾನವ ಸಹಜಗುಣ. ಅದರಂತೆಯೇ ಶುಭ ಹಾರೈಸುವೆ. ಈಗಿನಿಂದಲೇ ಇಲ್ಲದ್ದನ್ನು ಕುರಿತು ಚಿಂತಿಸಿ ತಲೆಯೇಕೆ ಕೆಡಿಸಿಕೊಳ್ಳಬೇಕು ?"

"ನಿನಗಿನ್ನೂ ಆ ಅನುಭವ ಆಗಿಲ್ಲ. ಅಂತಲೇ ಬಹಳ ಧೈರ್ಯವಾಗಿದ್ದಿ."

"ನಾನು ನಿನ್ನಷ್ಟು ಮೃದುವಲ್ಲ."

"ನೀವು ಪರಸ್ಪರ ಅರಿತುಕೊಂಡಿದ್ದೀರಿ. ಅದು ಧೈರ್ಯಕ್ಕೆ ಕಾರಣ. ನನ್ನದು ಹಾಗಲ್ಲ; ಅಪರಿಚಿತರಿಗೆ ಸರ್ವಭಾರವನ್ನೂ ಒಂದೇ ಬಾರಿಗೆ ವಹಿಸುವಾಗ ಅಳುಕು ಮೂಡುವುದು ಸಹಜ ಅನುಭವ ಆಲೋಚನೆ ಏಕಾಂತ ರೂಪ ಹೊಂದಲೆಂದು ಜೀವನ ಬಂಧಕ್ಕೆ ಸಂಕಲ್ಪ ಮಾಡಿರುವೆ....ಈ ಜೀವನಾರಣ್ಯದ ನಿರಾಶಾನಿಶೆಯಲ್ಲಿ ಒಂಟಿಯಾಗಿ ನಡೆಯುವ ಧೈರ್ಯ ಸಾಹಸ ನನ್ನಲ್ಲಿ ಸ್ವಲ್ಪವೂ ಇಲ್ಲ." ಎಂದಳು ಹೇಮಾಂಗಿನಿ; ದನಿಯಲ್ಲಿ ಅನಿರೀಕ್ಷಿತವಾಗಿ ಲಘುಕಂಪನ ಸಂಭವಿಸಿತು.

"ಯೋಚಿಸಬೇಡ; ಸಂಕಲ್ಪ ಎಂದೂ ಅಲ್ಪವಾಗುವುದಿಲ್ಲ." ಎನ್ನುತ್ತ ಭಾವಗಾಂಭೀರ್ಯದಿಂದ ಕಣ್ಣರಳಿಸಿದಳು ವಿಮಲ.

"ಸರಿ ವಿಮಲೂ, ಇನ್ನು ಈ ವಿಚಾರದಲ್ಲಿ ಚರ್ಚಿಸಿ ಕಳವಳ ತುಂಬಿಕೊಂಡು ನಿನ್ನ ಮನಸ್ಸಿಗೆ ನೋವುಂಟುಮಾಡುವುದಿಲ್ಲ. ಹೇಗೂ ಸದ್ಯದಲ್ಲೇ ಈ ಅನುಭವ ನಿನಗೆ ಉಂಟಾಗಲಿದೆ."

ಹೊರ ಅಂಗಳದಲ್ಲಿ ಸಾಲುಸಾಲಾದ ಪಾತಿಗಳಲ್ಲಿ ಅರಳಿ ನಳನಳಿಸುತ್ತಿರುವ ಸೇವಂತಿಗೆ ಹೂಗಳು ವಸಂತೋತ್ಸವ ಆಚರಿಸುತ್ತಿವೆ. ಇನ್ನೊಂದೆಡೆ ಗುಲಾಬಿ, ಸುಗಂಧರಾಜ ಮಲ್ಲಿಗೆಗಳು ಮನಃಪ್ರಾಣಗಳನ್ನು ಸೆಳೆಯುವಂತಿವೆ. ಹೇಮಾಂಗಿನಿ ಕಿಟಕಿಯ ಸರಳುಗಳನ್ನು ಹಿಡಿದುಕೊಂಡು ಅತ್ತಲೇ ದೃಷ್ಟಿಯನ್ನು ಹಾಯಿಸಿದ್ದಳು. ತಂಗಾಳಿಗೊಲಿದು ಅವು ತಲೆದೂಗುವಾಗ ಇತ್ತ ಹೊರಳಿ ತನಗೆ ಸಹಾನುಭೂತಿ ತೋರುತ್ತಿವೆಯೋ ಎಂಬಷ್ಟು ಆಶಾಭಾವನೆ ಮೂಡುತಿತ್ತು. ಹಾಗೇ ನೋಡುತ್ತ ನಿಂತಳು ಹೇಮಾಂಗಿನಿ.

ದೂರ ದಿಗಂತದಂಚಿನಲ್ಲಿ - ನೀಲ ಗಗನದ ಹಿನ್ನಲೆಯಲ್ಲಿ - ಪ್ರಾತಃ ಸೂರ್ಯನ ಸುವರ್ಣಕಾಂತಿಯಲ್ಲಿ ಬೆಳ್ಮೋಡಗಗಳು ನಿಶ್ಚಲವಾಗಿವೆ. ಸ್ವಚ್ಛ ನೀಲಿಮೆ ಅನುರಾಗಿಣಿಯಾದ ನವವಧುವಿನಂತೆ, ಶೋಭಾ ಸಮುದ್ರದ ನಿಶ್ಶಬ್ದ ತರಂಗದಂತೆ ಶಾಂತ ಮನೋಹರತೆಯಿಂದ ರಂಜಿಸುತಿತ್ತು. ನಿತ್ಯ ಗಗನ ವಿಹಾರಿಗಳಾದ ಪಕ್ಷಿ ಸಮೂಹ ಕರಿಯ ಚುಕ್ಕಿಗಳಂತೆ ಅಲ್ಲಲ್ಲಿ ಕಂಗೊಳಿಸುತ್ತವೆ.

ಮನೆಯೆಲ್ಲಾ ಅತಿಥಿ ಅಭ್ಯಾಗತರಿಂದ ಆಳುಕಾಳುಗಳಿಂದ ತುಂಬಿ ಹೋಗಿತ್ತು. ಮೂಲೆ ಮೂಲೆಯಲ್ಲೂ ಮಾತಿನರವ ನಗುವಿನಲಹರಿ ವಿಜೃಂಭಿಸುತಿತ್ತು. ಹೊರಗಡೆ ರಾಮಕೃಷ್ಣರಾಯನೊಂದಿಗೆ ಮದುವೆಯ ವ್ಯವಸ್ಥೆಯ ಬಗ್ಗೆ ಇದುವರೆವಿಗೂ ಮಾತುಕತೆ ನಡೆಸುತಿದ್ದ ಹೇಮಾಂಗಿನಿಯ ತಂದೆ-ನರಸಿಂಹಯ್ಯ ಒಳಬಂದಾಗ ಗವಾಕ್ಷಿಯ ಬಳಿ ನಿಂತು ಹೊರಜಗತ್ತಿನಲ್ಲಿ ಮನನೆಟ್ಟ ಹೇಮಾಂಗಿನಿ ಪಾದಸಪ್ಪಳವನ್ನು ಕೇಳಿಸಿಕೊಳ್ಳಲಿಲ್ಲ. ಮಂತ್ರಮುಗ್ಧಳಂತೆ ನಿಶ್ಚಲಭಂಗಿಯಲ್ಲಿ ನಿಂತಿದ್ದ ಅವಳ ಬೆನ್ನಿನಮೇಲೆ ಕೈಯಿಟ್ಟು ಅಮಿತಾನಂದದಿಂದ 'ಹೇಮಾಂಗಿನಿ' ಎಂದ. ಮಗಳು ಬೆಚ್ಚಿ ಬಿದ್ದು ಹಿಂತಿರುಗಿ ನೋಡಿದಳು.

"ಏನು ಅಪ್ಪಾಜೀ ?"

ಪ್ರಾಸಂಗಿಕವಾಗಿ ಪ್ರಶ್ನೆ ಹೊಮ್ಮಿದರೂ ಮೈಮೇಲಿನ ಅಭೂತಪೂರ್ವ ಅಲಂಕರಣ ಕೆನ್ನೆಗಳಿಗೆ ಲಜ್ಜೆಯ ರಂಗೊರೆಯಿತು. ಪ್ರಭಾತ ಸೂರ್ಯಾತಪವು ಚೆಲ್ಲಿ ಮನಮೋಹಕವಾದಂತೆ ಕಂಡ ಮಗಳ ವ್ಯಕ್ತಿತ್ವ ಮನಸ್ಸಿಗೆ ಆನಂದೋಲ್ಲಾಸ ಮೂಡಿಸಿತು. ನರಸಿಂಹಯ್ಯ ಹಸನ್ಮುಖಿಯಾಗಿ ಪ್ರಶ್ನಿಸಿದ,

"ವಿಮಲ ಏನು ಹೇಳುತ್ತಾಳೆ? ನಮ್ಮ ವ್ಯವಸ್ಥೆ ಅವಳಿಗೆ ಮೆಚ್ಚಿಗೆಯಾಗಿದೆಯೇ ?"

ಯಾವುದೋ ಕೆಲಸದ ನಿಮಿತ್ತ ಒಳಹೋಗಿದ್ದ ವಿಮಲ ಅದೇ ವೇಳೆಗೆ ಅಲ್ಲಿಗೆ ಬರುತ್ತಲೂ ಅತ್ಯಂತ ಆತ್ಮೀಯ ಭಾವದಿಂದ ಕೇಳಿದ "ಏನು ಹೇಳುತ್ತೀಯಮ್ಮ ? ಇದುವರೆಗೆ ನೀನು ಒಳಗೆ-ಹೊರಗೆ ಎಲ್ಲಾ ಕೆಲಸ-ಕಾರ್ಯಗಳನ್ನೂ ನೋಡಿದ್ದೀಯಷ್ಟೆ? ನಿನಗೆ 'ಸರಿ' ಎನ್ನಿಸುತ್ತದೆಯೇ, ಹೇಗೆ?"

"ಯಾವ ಕೊರತೆಯೂ ಕಾಣಿಸುತ್ತಿಲ್ಲ. ಎಲ್ಲವನ್ನೂ ಸರಿಯಾಗಿಯೇ ನಿರ್ವಹಿಸಿದ್ದೀರಿ. ನೀವು ನಮ್ಮಂತಹವರನ್ನು ಕೇಳುವುದರಿಂದ ಲಾಭವಿಲ್ಲ."

ಮುಗುಳು ನಕ್ಕಳು ವಿಮಲ.

"ಏಕಮ್ಮ ? ನಿನಗಿರುವಷ್ಟು ಸೂಕ್ಷ್ಮಬುದ್ಧಿ ಎಲ್ಲರಿಗೂ ಇದ್ದರೆ ಸಾಕಲ್ಲ ?"

ವಿಮಲ ಮಾತಾಡದೆ ಮುಗುಳು ನಕ್ಕಳು.

"ಅವಳು ನಮ್ಮಂತಲ್ಲ ಅಪ್ಪಾಜೀ ! ಸುಖ–ದುಃಖ, ಒಳಿತು-ಕೆಡಕು, ಎಲ್ಲದರಲ್ಲೂ ಸಮಭಾವನೆ ಅವಳಿಗಿದೆ." ಎಂದಳು ಹೇಮಾಂಗಿನಿ. ಕಣ್ಣುಗಳಲ್ಲಿ ಸ್ನೇಹಾನುರಾಗ ನಲಿಯುತಿತ್ತು.

ವೃದ್ಧ ಸಂತೋಷ-ಸಮಾಧಾನಗಳ ಗಣಿಯಾಗಿ ಹಿಂದಿರುಗಿದ.

ವಿಮಲ ಆನಂದ ಪ್ರಮತ್ತಳಾಗಿ ಗೆಳತಿಯ ಕಡೆ ನಿಟ್ಟಿಸಿದಳು. ಪೀತಾಂಬರ ಸಮಾವೃತ ಅಂಗಯಷ್ಟಿಯ ಲಾವಣ್ಯಪ್ರಭೆ ಅದೃಶ್ಯ ಸೌಭಾಗ್ಯದಂತೆ ಅಂಗಾಂಗಗಳಲ್ಲಿ ನಿರ್ಗತವಾಗ ತೊಡಗಿತ್ತು. ಅಲಂಕಾರದಲ್ಲಿ ಸರಳತೆಯೂ, ಮಿತಿಯೂ ಇದ್ದುದರಿಂದ ಆಕೆ ಸುಂದರಿಯಾಗಿ ಕಂಗೊಳಿಸಿದಳು. ಅವಳ ಭುಜದ ಮೇಲೆ ಕೈಯಿಟ್ಟು ವಿಚಾರಪರ ದನಿಯಲ್ಲಿ ನುಡಿದಳು,

"ಹೇಮಾ, ಸ್ತ್ರೀ ಜೀವನದಲ್ಲಿ ಇದೊಂದು ಅತ್ಯಂತ ಸೌಭಾಗ್ಯಯುಕ್ತ ಘಟಕ. ನಾವು ಇಂದು ಎಷ್ಟೊಂದು ಸಂಭ್ರಮದಿಂದ ಶುಭ ಮಹೋತ್ಸವವನ್ನು ಆಚರಿಸಿದರೂ, ಮುಂದೆ ಕಣ್ಣೀರು ಕರೆಯಬಹುದಾದಂತಹ ಅನೇಕ ಘಟನೆಗಳನ್ನು ಎದುರಿಸಬೇಕಾಗುತ್ತದೆ. ಅಂತಹ ಕಹಿ ಪ್ರಸಂಗಗಳು ನಿನ್ನ ಜೀವನದಲ್ಲಿ ಬಾರದಿರಲಿ ಎಂದು ಭಗವಂತನಲ್ಲಿ ಪ್ರಾರ್ಥಿಸುವೆ."

"ತುಂಬ ವಂದನೆಗಳು ವಿಮಲೂ !" ಎಂದ ಹೇಮಾಂಗಿನಿ ಪ್ರಶಾಂತ ಮುಖಿಯಾಗಿ ಪುನಃ ನುಡಿದಳು "ಆ ಭಗವಂತ ನಿನ್ನ ಪ್ರಾರ್ಥನೆಗೆ ಕಿವಿಗೊಟ್ಟು ನಮ್ಮನ್ನು ಅನುಗ್ರಹಿಸಲಿ !" ಕಂಠಸ್ವನ ಸುಖದುಃಖಗಳ ಹೊನಲಾಗಿ ಹರಿಯಿತು. ಮುಖಬಿಂಬ ಭಾವೋದ್ವೇಗದಿಂದ ಚಂದನವೊರೆದಂತೆ ರಂಗು ಮೂಡಿತು.

ವಿಮಲ ಅವಳ ಕಂಠಾಭರಣವನ್ನು ಸರಿಪಡಿಸುತ್ತ ಸಾಂತ್ವನಗೈಯ್ಯುವ ದನಿಯಲ್ಲಿ ಬಿತ್ತರಿಸಿದಳು,

"ಜೀವನ ಬಂಧ ಯಾರಿಗಿಲ್ಲ ? ಅದಕ್ಕಾಗಿ ಅಳುಕಬಾರದು. ನೀನಿಂದು ಪಡೆಯಬೇಕಾದುದು ಧೈರ್ಯ ಸಾಹಸ ಮಾತ್ರವಲ್ಲ, ಮುಖ್ಯವಾಗಿ ನಿರ್ಲಿಪ್ತತೆ

ಬಲಿಯಬೇಕು."

"ನೀನು ಏನೆಲ್ಲಾ ಹೇಳುತ್ತಿರುವೆಯೋ ಅದೆಲ್ಲ ಸ್ವಪ್ನಾವಸ್ಥೆಯಲ್ಲಿ ಸುಳಿದಂತೆ ಭಾಸವಾಗುತ್ತಿದೆ."

ಅದೇ ವೇಳೆಗೆ ಆಗಮಿಸಿದ ರಾಧೇಶ್ಯಾಂ ನಗುತ್ತ ಅಂದ,

"ಇದೀಗ ಸರಿ....! ಮನುಷ್ಯನ ಅಸ್ಥಿರವಾದ ಮನೋವಾಕ್ಕಾಯಗಳಲ್ಲಿ ಕೆಲವು ಸ್ಥಿರವಾದ ವಿಚಾರಗಳು ಪ್ರವೇಶಿಸದಿದ್ದರೆ ಈ ಪ್ರಪಂಚದ ಇತಿಹಾಸ ಇನ್ನಾವ ರೂಪ ತಳೆಯುತಿತ್ತೋ....?"

"ನೀವೇ ಒಮ್ಮೆ ಇದರ ಬಗ್ಗೆ ಯೋಚಿಸಿನೋಡಿ! ಭಾಗಶಃ ಅದು...." ಅಷ್ಟಕ್ಕೇ ಮಾತನ್ನು ತುಂಡುಗಡಿದು ಮರ್ಮಾಂತಿಕ ದೃಷ್ಟಿಯನ್ನು ಬೀರಿದಳು ವಿಮಲ.

"ನಮ್ಮಂತಹ ಸ್ಥಿರ ಪ್ರಜ್ಞರು ಕೆಲವರಾದರೂ ಇರುವಾಗ ಆ ಚಿಂತೆಯೇಕೆ?" ಹುಬ್ಬೇರಿಸಿದಳು ಹೇಮಾಂಗಿನಿ.

"ಬೂಟಾಟಿಕೆ....!"

"ಬೂಟಾಟಿಕೆಯಲ್ಲ ರಾಧೇಶ್ಯಾಂ! ಜಾಗತಿಕ ಸತ್ಯ!" ದೀಪ್ತಕಂಠದಿಂದ ಚಿತ್ತರಿಸಿದಳು ಹೇಮಾಂಗಿನಿ. ಪಿಂಗಲ ವರ್ಣರಂಜಿತ ತುಟಿಗಳಲ್ಲಿ ಮೋಹಕ ನಗೆ ಅರಳಿತು.

ರಾಧೇಶ್ಯಾಂ ಅತ್ಯಂತ ದೃಢವಾದ ಸ್ವರದಲ್ಲಿ ಹೇಳಿದ,

"ನೀವೀಗ ಎರಡು ಪ್ರಶ್ನೆಗಳಿಗೆ ಉತ್ತರ ಕೊಡಬೇಕಾಗುತ್ತದೆ."

"ಅದಕ್ಕೇನಂತೆ? ಬದುಕಿದ್ದರೆ ಎಂದಾದರೂ ಉತ್ತರ ನಿಮಗೆ ಲಭಿಸುತ್ತದೆ. ನಾವು ಎಂದೂ ನಿಮ್ಮನ್ನು ವಂಚಿಸುವವರಲ್ಲ." ಎಂದಳು ವಿಮಲ. ಮೃದು ಮಂದಹಾಸ ತುಟಿಗಳಲ್ಲಿ ನಲಿಯಿತು. ನರನಾಡಿಗಳಲ್ಲಿ ಉತ್ಸುಕತೆ ಹರಿದಾಡುತಿತ್ತು. ಒಂದೆರಡು ಘಳಿಗೆ ತಡೆದು ಪುನಃ ಮುಂದುವರಿದಳು "ನೀವು ಯಾವ ಪ್ರಶ್ನೆಯನ್ನು ಮುಂದಿಡಲಿದ್ದೀರೋ ಅದರ ಅಂತರಾರ್ಥ ಆಗಲೇ ನಮ್ಮ ಅನುಭವಕ್ಕೆ ಬಂದಿದೆ!"

"ಹಾಗಾದರೆ....ನಿಮ್ಮಲ್ಲಿ ಒಂದನ್ನು ಯಾಚಿಸಬಹುದೇ?"

"ಏನು ಹೇಳಿ!"

"ನೀವು ಯಾವ ಆಧಾರದ ಮೇಲೆ ವಾದವಿವಾದ ಹೂಡುವಿರೋ

ಅದು ಧಾರ್ಮಿಕರೂಪ ತಳೆಯುವವರೆಗೂ ಅದರಲ್ಲಿ ಏನೋ ಒಂದು ವಿಧವಾದ ಕೊರತೆ, ಮತ್ತೇನೋ ಒಂದು ಬಗೆಯ ನ್ಯೂನ್ಯತೆ ಇದೆಯೆಂಬ ಅನುಭೂತಿ ನನಗೆ ಉಂಟಾಗಿದೆ. ಕರ್ತವ್ಯಕ್ಕಿಂತಲೂ ಧರ್ಮ ಉನ್ನತವಾದುದು. ಮಾನವತೆಯನ್ನು ಮರೆತರೆ ಮಾಯೆ ನಮ್ಮನ್ನು ಆಳುತ್ತದೆ. ಅಂತಲೇ ಹೆಜ್ಜೆಯನ್ನು ಮುಂದಿಡುವಾಗ ಒಂದು ಪರಿಮಿತಿಯೇ ಇಡುವುದು ಒಳ್ಳೆಯದು!"

"ಹಾಗಾದರೆ....ನಮ್ಮ. ನಿಲುವು ಅಧರ್ಮದ ಅಡಿಗಲ್ಲಿನ ಮೇಲೆ ಎಂದಂತಾಯಿತು!"

"ಛೀಃ! ಛೀಃ! ಹಾಗಲ್ಲ...."

ಅವನ ಮಾತನ್ನು ಮುಂದುವರಿಸಗೊಡದಂತೆ ನಡುವೆ ಬಾಯಿ ಹಾಕಿದಳು ಹೇಮಾಂಗಿನಿ,

"ಇಲ್ಲಿ ಕೇಳಿ! ನಿಷ್ಕಲ್ಮಶ ಚರಿತ್ರೆಗೆ ಆಂತರಂಗಿಕ ತೃಪ್ತಿಗೆ ಮಾಯಾ ಮಮತೆಗಳ ಅನುಬಂಧ ಪೂರಕವಲ್ಲ....ನಿಮ್ಮ ಅಭಿಪ್ರಾಯ ಕೇವಲ ಪುರುಷ ದೃಷ್ಟಿಯ ಕಾಮ ವಿಕಾರ!"

ರಾಧೇಶ್ಯಾಂ ಮನದಲ್ಲಿಯೇ ಬಾಧೆ ಪಟ್ಟುಕೊಂಡಂತೆ ಸುಮ್ಮನಾದ.

ವಿಲಾಸಯುತವಾದ ಕಣ್ಣುಗಳಿಂದ ನೋಡುತ್ತ ಸ್ವಾಭಾವಿಕ ನಿಗ್ರಹ ದೂರವಾಗಿ ನುಡಿದಳು ಹೇಮಾಂಗಿನಿ,

"ನಿಮ್ಮ ಹೃದ್ಗತ ರಹಸ್ಯ ಸಾಮಾನ್ಯವಾದುದಲ್ಲ. ಅದಕ್ಕೆ ನ್ಯಾಯಶಾಸ್ತ್ರ ಭದ್ರ ಬುನಾದಿ ಹಾಕಿದೆ!"

ಒಡನೆ ವಿಮಲ ಮಧುರಕಂಠಸ್ವರದಿಂದ ಹಾಸ್ಯಪ್ರಧಾನವಾದ ಮಾತಿನ ಚಟಾಕಿ ಹಾರಿಸಿದಳು,

"ನ್ಯಾಯಶಾಸ್ತ್ರ ಕೋವಿದರು ಈ ಪ್ರಪಂಚವನ್ನು ಅರ್ಥೈಸುವ ರೀತಿಯೇ ಬೇರೆ. ಭಗವಂತನ ಸೃಷ್ಟಿ ವಿಧಾನವೇ ಬೇರೆ."

ರಾಧೇಶ್ಯಾಂ ಆ ವಾಗ್ಝೋರಣೆಯನ್ನು ಆಮೋದ ವಿಶ್ವಾಸದಿಂದ ಸ್ವೀಕರಿಸಿ ಅಭಿಮಾನಪೂರ್ಣ ಸ್ವರದಿಂದ ನುಡಿದ,

"ನೀವು ಎಷ್ಟೆಲ್ಲ ಟೀಕಿಸುತ್ತೀರೋ ಟೀಕಿಸಿರಿ. ಅವೆಲ್ಲಾ ಮುಂದಿನ ಅನರ್ಥಗಳಿಗೆ ಕಾರಣವಾಗದಿದ್ದಲ್ಲಿ ಏನೂ ಯೋಚಿಸಬೇಕಾಗಿಲ್ಲ."

"ಅಂದರೆ....?"

"ನೀವೇ ಊಹಿಸಿಕೊಳ್ಳಿ!"

"ಯಾವ ಆಧಾರದ ಮೇಲೆ ನೀವು ಆರೀತಿ ಹೇಳಿದಿರಿ?....ಆಗಲೇ ನಿಮಗೆ ಅಷ್ಟು ನಂಬಿಕೆ ಬಂದಿರುವುದೂ ಸಹ ಆಶ್ಚರ್ಯ! ವಿಮಲ ನನಗೆ ತಿಳಿಯದಂತೆ ನಿಮಗೆ ವಚನ ಕೊಟ್ಟಿದ್ದಾಳೆಯೇ?" ಎಂದಳು ಹೇಮಾಂಗಿನಿ ವಿಮಲೆಯ ಕಡೆ ಹುಬ್ಬು ಹಾರಿಸಿ. ಪ್ರಸನ್ನ ಭಾವದಲ್ಲಿ ತುಂಟತನ ನಲಿದಾಡಿತು.

"ಸ್ತ್ರೀ ಅಂದಮೇಲೆ ವಚನ ಕೊಡಬೇಕಾದಂತಹ ಕಟ್ಟು ನಿಟ್ಟೇನಿಲ್ಲ!"

"ಪರವಾಯಿಲ್ಲ....!" ಕಣ್ಣರಳಿಸಿದಳು ವಿಮಲ.

ಒಡನೆ ನಗುವಿನ ಲಹರಿ ಚಿಮ್ಮಿ ಹರಿಯಿತು. ಅನಂತರ ಎಷ್ಟೆಷ್ಟು ಬಗೆಯಲ್ಲಿ ಆತ್ಮವಿಮರ್ಶೆ ಮಾಡಿಕೊಂಡರೋ. ಅದರ ಪರಿಣಾಮವಾಗಿ ಹೇಮಾಂಗಿನಿ ಚಿಂತಿತಳಂತೆ, ವಿಚಲಿತಳಂತೆ ಲಘುಕಂಪನಯುಕ್ತ ಕಮನೀಯ ಕಂಠದಿಂದ ಹೇಳತೊಡಗಿದಳು,

"ಈ ಜೀವನವನ್ನು ಹೀಗೇ ಎಂದು ನಿರ್ಣಯಿಸುವವ ಬೇರೆ. ಯಾವ ವಿಚಾರವೇ ಆಗಲಿ, ಸ್ಪಷ್ಟವಾಗಿ ತಿಳಿಯುವ ಮುಂಚೆ ಲಘುವಾಗಿ ತೋರುವುದು ಸಹಜ...ಆದರೆ ವಿಷಯ ವಾಸ್ತವತೆಯನ್ನು ತಲುಪಿದಾಗ ಹೇಳುವುದೇನು? ಪ್ರಬಲವಾದ ಸಾಮಾಜಿಕ ವಿಧಾನವನ್ನು ತೊರೆಯುವುದರಿಂದ ನಾವು ಸುಖಿಯಾದೇವೆಂಬುವ ಭ್ರಾಂತಿಗೆ ಶರಣಾಗಿ, ಜೀವನಾರಣ್ಯದ ದುರ್ಗಮವಾದ ಹಾದಿಯಲ್ಲಿ ಏಕಾಂತವಾಗಿ ಪಯಣಿಸುವಾಗ ಅನುಭವಿಸುವ ದುಃಖ-ಗ್ಲಾನಿಗಳು ಚಾರಿತ್ರಿಕ ದೋಷಗಳಲ್ಲಿ ಪ್ರವಹಿಸುವುದರಿಂದ, ಅಂತರಂಗಿಕ ಪ್ರೇರಣೆಯನ್ನು ವಿಮರ್ಶಿಸುವುದು (ಮಾನಸಿಕ ವಿಕ್ಷೋಭೆಯಿಂದ) ಸಾಧ್ಯವಾಗುವುದಿಲ್ಲ....ಆದ್ದರಿಂದ ದ್ವಂದ್ವ ಮನೋಭಾವಗಳಿಗೆ, ಅತೀವ ಅಪಾರ್ಥಗಳಿಗೆ, ಮುಖ್ಯವಾಗಿ ಅಶಾಂತಿಗೆ ಕಾರಣವಾಗಿ ಬದುಕು ನೀರಸವಾಗುತ್ತದೆ. ಅಂತಲೇ ಜೀವನದಲ್ಲಿ ಮನಃಕ್ಲೇಶ ತಪ್ಪುವುದಿಲ್ಲ."

"ಆಗಲೇ ಅಷ್ಟೊಂದು ಬೆಲೆಯುಳ್ಳ ಅನುಭವ ನಿನಗೆ ಬಂದುದಾದರೂ ಹೇಗೆ?" ವಿಮಲ ಅತ್ಯಾಶ್ಚರ್ಯದಿಂದ ಕೇಳಿದಳು.

"ಮೊದಲು ಯಾರ ಹಸ್ತಗಳಲ್ಲಿ ನನ್ನನ್ನು ಅರ್ಪಿಸಿಕೊಳ್ಳಬಯಸಿದ್ದೆನೋ ಆ ಕೈಗಳು ಮೊದಲೇ ಹೊತ್ತ ಅನಂತಭಾರದಿಂದ ನಿರಾಕರಿಸಿದುವು.

ಈಗ ನನ್ನನ್ನು ಯಾವ ಕೈಗಳು ಸ್ವೀಕರಿಸಲಿವೆಯೋ ಅವು 'ಭಾರ'ವೇನೆಂಬು ದನ್ನು ಸರ್ವಥಾ ಅರಿಯವು. ಅಂತಲೇ ಈ ಜೀವನವನ್ನು ಕಂಡರೆ ಭಯವುಂಟಾ ಗುತ್ತದೆ." ನಿಡಿದಾದ ಉಸಿರು ಬಿಟ್ಟು ಪುನಃ ಸಾವಧಾನದಿಂದ ಮುಂದುವರಿ ದಳು "ಯುಗಯುಗಾಂತರಗಳಿಂದಲೂ ತೀವ್ರಗತಿಯಲ್ಲಿ ಮುಂದುವರಿಯುತ್ತಿ ರುವ ಸ್ತ್ರೀಪುರುಷರ ಪ್ರೇಮಚರಿತ್ರೆಯೇ ನಮ್ಮ 'ಸಂಸ್ಕೃತಿ'ಯ ಇತಿಹಾಸ. ಮಾನವ ತೇಜದ ಊರ್ಧ್ವಮುಖತ್ವಕ್ಕೆ ಸಹ ಈ ಚಾರಿತ್ರ್ಯವಾಹಿನಿಯೇ ಕಾರಣ. ಇದರ ಅಸ್ಖಲಿತ ಸಿದ್ಧಾಂತಗಳಿಂದ ಹರಿದ ಕಣ್ಣೀರಿನ ಕಡಲಿಗೆ ಯಾರು ಕಾರಣ ಎಂಬುದನ್ನು ಊಹಿಸಿ ಹೇಳುವುದು ಕಷ್ಟ."

ರಾಧೇಶ್ಯಾಂ ಕೇಳುತ್ತ ಭಾವಪರವಶತೆಯಿಂದ ವಿನೀತನಾಗಿ ನಿಂತು ಬಿಟ್ಟಿದ್ದ.

ವಿಮಲ ಸಹಾನುಭೂತಿಯನ್ನು ತೋರುವಂತೆ ಸ್ನೇಹ-ಪ್ರೇಮಗಳ ವಶೀ ಭೂತಳಾಗಿ ಬಿತ್ತರಿಸಿದಳು,

"ನೋಡು, ನಮಗೆ ಎಲ್ಲಾ ವಿಚಾರವೂ ಗೊತ್ತಿರುತ್ತದೆ. ಸೋಲು ಗೆಲುವುಗಳನ್ನೂ ಸಹ ವಿಮರ್ಶೆ ಮಾಡಬಲ್ಲೆವು. ಆದರೂ ಸಹ ಹಿಡಿಯುವುದು ಸೋಲಿನ ಹಾದಿಯನ್ನೆ. ಅದೇ ಮಾನವ ಇತಿಹಾಸದಲ್ಲಿ ಬಿಡಿಸಲಾಗದ-ಒಡೆ ಯಲಾಗದ ಸಮಸ್ಯೆ."

"ಆದರೂ ಸಹ, ಅನೇಕ ಸಂದರ್ಭಗಳಲ್ಲಿ ಸಮಸ್ಯೆಗಳು ಅಷ್ಟು ಜಟಿಲ ವಾಗಿರುವುದಿಲ್ಲ. ಅವುಗಳನ್ನು ಜಾಣ್ಮೆಯಿಂದ ಬಿಡಿಸಿಕೊಳ್ಳಲೂಬಹುದು. ಆದರೆ....ಆಗ 'ಪ್ರಯತ್ನ' ಎಂಬುದು ನಮ್ಮಿಂದ ದೂರವಾಗಿರುವುದರಿಂದ ವಿಷ ಯಗಳು ಬುಡಮೇಲಾಗುವುದು ಸಹಜ."

"ಅದಕ್ಕೇನೆನ್ನಬೇಕು ?"

"ವಿಧಿ !"

ಮೂವರ ಮುಖದಲ್ಲೂ ಮುಗುಳ್ನಗೆ ಮೂಡಿತು.

"ಆಧುನಿಕ ಸಭ್ಯತೆ ಮತ್ತು ಸಂಪ್ರದಾಯ ಇವುಗಳ ನಡುವಿನ ಜಾಯ ಮಾನದಲ್ಲಿ ದ್ವೈದೀಭಾವನೆಗಳಲ್ಲಿ ತೊಳಲಿದುದೇ ವಿನಾ ಅನುರೂಪವಾಗಿ ತಿದ್ದುವ ಸಾಮರ್ಥ್ಯ ಮೂಡಲಿಲ್ಲ. ಎಷ್ಟೋ ವೇಳೆ ಕಸಕ್ಕಿಂತಲೂ ಕಡೆಯಾದ ವಸ್ತುಗಳಿಗೆ ದೊರಕುವ ಸರ್ವಾಂಗೀಣ ಮಹತ್ವ ನಮ್ಮ ಮನಸ್ಸಿನ ಮೇಲೂ

ದುಷ್ಪರಿಣಾಮ ಬೀರುವುದರಿಂದ ಧ್ಯೇಯೋದ್ದೇಶಗಳು ಧೂಳೀಪಟವಾಗುತ್ತವೆ." ಯೋಚನಾಭಾರದಿಂದ ನುಡಿದಳು ವಿಮಲ.

"ಅದೂ ಸಹ ಹಣೆಬರಹ!" ಭಾವನಾಮಯಿಯಾಗಿ ಬಿತ್ತರಿಸಿದಳು ಹೇಮಾಂಗಿನಿ.

ರಾಧೇಶ್ಯಾಂ ಮುಗುಳುನಕ್ಕ.

ಆ ನಗೆಯಲ್ಲಿ ಸ್ವಲ್ಪವೂ ಅನುಭೂತಿ ಇದ್ದಂತೆ ತೋರಲಿಲ್ಲ. ಜಾಹೀರಾತಿನ ವನಿತೆಯರಂತೆ ಹರಿಸಿದ ಆ ಕಿರುನಗೆ ಯಾವ ಪ್ರೇರಣೆಯಿಂದ ಹರಿಯಿತೋ ಅದರ ವ್ಯಂಗ್ಯಾರ್ಥವನ್ನು ತನ್ನಲ್ಲೇ ಕಾಲ್ಪನಿಕ ಮೂಸೆಯಲ್ಲಿ ತರ್ಕಿಸಿದ ವಿಮಲ ಒಂದು ಬಗೆಯ ಆಶ್ಚರ್ಯಭಾವದಿಂದ, ಆಂತರಂಗಿಕ ಪ್ರೇರಣೆಯಿಂದ ಪ್ರಶ್ನಿಸಿದಳು,

"ಬಹುಶಃ ನಿಮಗೆ ಸ್ತ್ರೀಯರನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ ಅವಕಾಶ ಅಲಭ್ಯವಾಗಿರಬಹುದು....ಮುಂದೆ ಎಂದಾದರೂ ಲಭಿಸಿದಾಗ ಖಂಡಿತ ನನ್ನನ್ನು ನೆನಪಿಸಿಕೊಳ್ಳಿ!"

"ಒಂದು ವೇಳೆ ನಿನ್ನ ಮೂಲಕವೇ ಲಭಿಸಿದರೆ....?" ಹೇಮಾಂಗಿನಿ ತುಂಟನಗೆ ಬೀರಿ ಹಾಸ್ಯದ ಚಟಾಕಿ ಹಾರಿಸಿದಳು. ದೇಹದಾದ್ಯಂತ ಪುಲಕಗೊಂಡಂತೆ ಆನಂದ ಮಾಧುರ್ಯದ ಲಹರಿಗಳು ಹೊಮ್ಮಿದುವು.

"ಆಗ ನೀವೇ ಸಾಕ್ಷಿ!" ಸಾನಂದದಿಂದ ನುಡಿದ ರಾಧೇಶ್ಯಾಂ.

ವಿಮಲೆಯ ಮುಖ ಮಂಗಳಮಯವಾದಂತೆ ಮುಗುಳ್ನಗೆಯಿಂದ ಬೆಳಗಿತು.

ಹೊರಗಡೆ ಜನಗಳ ಗದ್ದಲ ಕೇಳಿಸುತಿತ್ತು. ಹೊಸದಾಗಿ ಆಗಮಿಸುವವರು ಒಬ್ಬೊಬ್ಬರಾಗಿ ಬರುತಿದ್ದಾರೆ. ಮಾತುಕತೆಯ ಗದ್ದಲದೊಂದಿಗೆ ನಗುವಿನ ಲಹರಿಯೂ ಹರಿಯುತಿತ್ತು. ವಾದ್ಯದವರು ಒಮ್ಮೆಂದೊಮ್ಮೆಲೇ ಕಿವಿಗಡಚಿಕ್ಕುವಂತೆ ತಲೆಬಾಗಿಲಿನಲ್ಲಿ ವಾದ್ಯ ಊದತೊಡಗುತ್ತಲೂ ರಾಧೇಶ್ಯಾಂ ಹೊರಹೋದ.

೨೯

ನಿಮ್ಮ ವಾದ “ಖಂಡಿತ ಹುರುಳಿಲ್ಲದ್ದು !”

“ನೀವು ಮೂಲಭೂತ ಸಂಸ್ಕೃತಿಯನ್ನೇ ಮರೆಯುತಿದ್ದೀರಿ! ಒಮ್ಮೆಗೇ ಮುನ್ನುಗ್ಗುವ ಹುಚ್ಚು ಸಾಹಸ ಇದು !”

“ಸಾಹಸಿಯಾಗದ ಹೊರತು ಜೀವನ ನೌಕೆಯ ಹುಟ್ಟು ಹಿಡಿಯುವುದೇ ತಪ್ಪು !”

ರಾಧೇಶ್ಯಾಂ ಒಂದೆರಡು ಘಳಿಗೆ ವಿಚಲಿತನಾದ.

ಅವಳು ನಿತಾಂತ ಗಂಭೀರವಾಣಿಯಲ್ಲಿ “ಈ ವಿಷಯವನ್ನು ಕಳೆದ ವಾರ ‘ಭಾರತಿ’ಎಂಬ ಮಾಸ ಪತ್ರಿಕೆಯಲ್ಲಿ “ಲಿಬರೇಶ಼ ಆಫ್ ಲೇಡೀಸ್”ಎಂಬ ಅಗ್ರ ಲೇಖನವನ್ನು ಬರೆದ ಅನಾಮಧೇಯ ವ್ಯಕ್ತಿಯೊಬ್ಬ ಅತ್ಯಂತ ಹೃದಯಂಗಮವಾಗಿ ಪ್ರಸ್ತಾಪಿಸಿದ್ದಾನೆ. ಹಿಂದೂಸ್ಥಾನದ ಸ್ತ್ರೀ ಜೀವನ ಎಷ್ಟು ಅದ್ಭುತವಾದುದು ಎಂಬುದನ್ನು ಅರಿಯಬೇಕಾದರೆ ಒಳಗಣ್ಣು ತೆರೆದು ನೋಡಬೇಕು; ಅಥವಾ ಆ ಲೇಖದ ಪ್ರತಿಯೊಂದು ಅಕ್ಷರ ಅಕ್ಷರವನ್ನೂ ಒರೆಗೆ ಹಚ್ಚಿ ಮನನ ಮಾಡುವ ದೃಷ್ಟಿಯಿಂದ, ತುಲನಾತ್ಮಕ ಶಕ್ತಿಯಿಂದ ಓದಬೇಕು....ಆದರೆ ಅದರಲ್ಲಿ ಒಂದು ಅಮಿತಾಶ್ಚರ್ಯವೆಂದರೆ ಅದನ್ನು ಬರೆದವನು ಅನಾಮಿಕ! ಈ ವಿಚಾರ ಸಂಪತ್ತಿಯನ್ನು ಕಾರ್ಯರೂಪಕ್ಕೆ ಇಳಿಸುವುದಿರಲಿ ಪ್ರಸ್ತಾಪಿಸಲೂ ಸಹ ಎಷ್ಟು ಹೆದರುತ್ತಾರೆ ನಮ್ಮ ಜನ ?!” ವಿಮಲ ಅತ್ಯಂತ ಆಶ್ಚರ್ಯಯುಕ್ತ ವಾಣಿಯಲ್ಲಿ ನುಡಿದಳು. ಕಣ್ಣುಗಳಲ್ಲಿ ದಿಟ್ಟತನ ಸುಳಿಸುಳಿದಾಡಿತು.

“ನೀವು ಯಾವ ಕಾರಣದಿಂದ ಈ ‘ಉದ್ರೇಕ’ದಲ್ಲಿ ಸಿಕ್ಕಿಕೊಂಡಿರೋ ಅರ್ಥವಾಗುವುದಿಲ್ಲ.”

“ದೇಶಕ್ಕೆ ಸ್ವಾತಂತ್ರ್ಯ ಬಂದಿದೆ. ಸ್ತ್ರೀಪುರುಷರೊಂದುಗೂಡಿ ಅದರ ಕೃಷಿ ನಡೆಸಿದ್ದಾರೆ. ವಿದ್ಯಾ ಸಂಸ್ಥೆಗಳು ನೂರಕ್ಕೆ ನೂರರಷ್ಟು ಮೇಲೆದ್ದುವು, ಆದರೆ, ಸ್ತ್ರೀ ಜನರ ಸ್ಥಿತಿಗತಿ ಯಥಾರೀತಿ ಅನ್ನೋಣವೇ ?”

“ಈಗ ಹೇಳಿ, ನಿಮ್ಮ ಸ್ವಾತಂತ್ರಕ್ಕೆ ಯಾವ ರೀತಿಯ ಧಕ್ಕೆ ಬಂದಿದೆ?”

“ನಮ್ಮ ವಿಚಾರ ಬಿಟ್ಟು ಬಿಡಿ. ವಿದ್ಯಾವಿನೋದಕತೆಯಲ್ಲಿ ಜೀವನಬಂಧ ತುಸು ಸಡಿಲಗೊಳ್ಳಬಹುದು.”

"ಅಂದ ಮೇಲೆ ಏಕೆ ತರ್ಕವಿತರ್ಕ ?"

"ಸರಿ, ಸರಿ. ತರ್ಕವಿಲ್ಲದೆ ಯಾವ ಕ್ಲಿಷ್ಟ ಸಮಸ್ಯೆಯೂ ಬಗೆ ಹರಿಯುವುದಿಲ್ಲ."

"ಹಾಗಾದರೆ ನೀವು 'ಪಾತಿವ್ರತ್ಯ'ವನ್ನು ಅಲ್ಪವೆಂದು ಪರಿಭಾವಿಸುವಿರಾ ?"

ಎಂತಹ ಪ್ರಶ್ನೆ ?

ನಿತಾಂತ ರಾಗಭಾವದಿಂದ ಕೂಡಿ ದನಿ ಹೆಜ್ಜೇನಿನ ಧಾರೆಯಂತೆ ಒಸರಿದ್ದರೂ ಕಿಷ್ಟಕರವಾದ ವಿಷಯವನ್ನು ಹಗುರವಾಗಿ, ಸೂಕ್ಷ್ಮವಾಗಿ, ಕಾರಣಬದ್ಧವಾಗಿ ಮುಂದಿಟ್ಟಿದ್ದಾನೆ !

ವಿಮಲ ಹುಬ್ಬೆತ್ತಿ ನೋಡಿದಳು. ಆ ಮುಹೂರ್ತದಲ್ಲಿ ರಾಗಮಯ ನಿಶ್ಚಲ ನೇತ್ರಗಳು ಸಮುಜ್ವಲವಾಗಿ ಬೆಳಗಿದುವು. ಅತ್ಯಂತ ಪ್ರಶಾಂತವಾದ ದನಿಯಲ್ಲಿ ತನ್ನ ಅಭಿಪ್ರಾಯವನ್ನು ವ್ಯಕ್ತಪಡಿಸಿದಳು,

"ಇಲ್ಲಿ ಕೇಳಿ! ನಾನೆಂದೂ 'ಪಾವಿತ್ರ್ಯ'ವನ್ನು ಅಲ್ಪವೆಂದು ಭಾವಿಸುವುದಿಲ್ಲ....ಆದರೆ ಅದಕ್ಕೇ ಎಲ್ಲಿಲ್ಲದ ಬೆಲೆಯನ್ನು ಕೊಟ್ಟು 'ಆತ್ಮವಿಶ್ವಾಸ' ಕಳೆದುಕೊಂಡು ಆಕೆಯ ಸುತ್ತ ಗಾಢವಾದ ಮೌಢ್ಯದ ಬಲೆಯನ್ನು ಹೆಣೆದರೆ ಅದು ಖಂಡಿತ ಸಣ್ಣತನವಾಗುತ್ತದೆ."

"ಅಂದರೆ ?"

"ಇಂದಿನ ನ್ಯಾಯ-ನೀತಿ ಕಣ್ಣುಕಟ್ಟಿಕೊಂಡು ಒಂದೇ ನೇರಕ್ಕೆ ಓಡುವ ಕುದುರೆಗಳಂತಾಗಿವೆ."

"ಅದು ಹೌದಾದರೂ ಎಲ್ಲಕ್ಕೂ ಒಂದು 'ಮಿತಿ' ಇದ್ದರೆ ತುಂಬ ಒಳ್ಳೆಯದು."

ಅಂದು ಅನಿರೀಕ್ಷಿತವಾಗಿ ಅವಳ ಭೇಟಿ ತೆಗೆದುಕೊಳ್ಳುವ ಪ್ರಸಂಗ ರಾಧೇಶ್ಯಾಮನಿಗೆ ಒದಗಿ ಬಂದಿತು. ಆತ ಮೈಯೆಲ್ಲಾ ಮನಸ್ಸಾಗಿ ಸ್ವಾಗತ ಬಯಸಿದ. ಹೃದಯದ ಹೊಂಗಡಲು ಒಮ್ಮೆಲೇ ಉಕ್ಕೇರಿ ಬಂತು. ವಿಮಲ ಹೇಮಾಂಗಿನಿಯ ವಿವಾಹಾನಂತರ ಅವಳೊಂದಿಗೆ ಅವಳ ಪತಿಯ ಗೃಹಕ್ಕೂ ಹೋಗಿ ಒಂದೆರಡು ದಿನಗಳನ್ನು ಆನಂದದಿಂದ ಕಳೆದು ಹಿಂದಿರುಗಿದಂದಿನಿಂದ ಉತ್ತೇಜಿತ ಚಿತ್ತಶ್ರೀ ಹಲವಾರು ದಿಶೆಗಳಲ್ಲಿ ಸಂಸಾರಿಕ ಕ್ಷೇತ್ರಕ್ಕೆ ಸುಗ್ಗಿ ತೊಡ

ಗಿತ್ತು. ಉದ್ದಗಲಕ್ಕೂ ಶೃಂಖಲಾಬದ್ಧವಾಗಿ ಬೆಳೆದ ಬೃಹದ್ ಸಮಾಜದಲ್ಲಿ ಯಾವ ರೀತಿ ವಿಧಿವತ್ತಾದ ಜೀವನಕ್ಕೆ ಪದಾರ್ಪಣೆ ಮಾಡಬೇಕೆಂಬುದು ಇನ್ನೂ ಅರ್ಥವಾಗದ, ಇತ್ಯರ್ಥವಾಗದ ವಿಷಯ. ಅದೇ ವಿಚಾರಪರತೆಯಲ್ಲಿ ಮನಸ್ಸು ತುಂಬಿ ಹೋಗಿದ್ದರೂ ವಾದವಿವಾದಕ್ಕೆ ಆಸ್ಪದವಾಗುವಂತೆ ವಾಗ್ಝರಿ ಈ ದಿಶೆಯಲ್ಲಿ ಹರಿದುದು ಸಹ ವಿಶೇಷವೇ !

ರಾಧೇಶ್ಯಾಂ ಹಣೆಯಮೇಲೆ ಮೂಡಿದ ತುಂತುರು ಹನಿಗಳನ್ನು ಒರಿಸಿ ಕೊಳ್ಳುತ್ತ ಭಾವೋದ್ವೇಗದಿಂದ ಅಂದ,

"ಇದೆಲ್ಲ ಅರ್ಥರಹಿತ ದುರಭಿಮಾನ! ಬಿ. ಎ., ಓದಿ ಶಾಲಾ ಶಿಕ್ಷಕಿ ಯಾದಾಕ್ಷಣ ಏನು ಸಾಧಿಸಿದ ಹಾಗಾಯಿತು ? ಅದರಿಂದ ಸ್ವಲ್ಪ ಮಟ್ಟಿಗೆ ಆರ್ಥಿಕ ಲಾಭ ಪಡೆಯಬಹುದು; ಮಕ್ಕಳಿಗೆ ವಿದ್ಯಾದಾನ ಮಾಡಿದ ಪುಣ್ಯ ಲಾಭವೂ ದೊರೆಯಬಹುದು. ಅಷ್ಟೇ ತಾನೆ? ಈ ಜೀವನದಲ್ಲಿ ಅದಕ್ಕಿಂತ ಉತ್ತಮ ಘಟಕಗಳು ಬೇಕಾದಷ್ಟಿವೆ. ಅಲ್ಲಿಯವರೆಗೆ ನಿಮ್ಮ ಗಮನ ಹರಿಯ ದಿರುವುದೂ ಸಹ ಆಶ್ಚರ್ಯವೇ !"

"ಗಮನ ಅಲ್ಲಿಂದಾಚೆಗೆ ಹರಿಯಲಿಲ್ಲ ಎಂದೇನಿಲ್ಲ. ಆದರೆ ಎಲ್ಲಕ್ಕೂ ಕಾಲಾವಕಾಶಬೇಕು. ನಾವೀಗ ಹೆಜ್ಜೆ ಆರಂಭಿಸಿದ್ದೇವೆ. ಇನ್ನೂ 'ಅ ಆ' ಘಟಕ ಮುಗಿಯಲಿಲ್ಲ. ಒಂದಾದನಂತರ ಒಂದನ್ನು ಸಾಧಿಸಬೇಕೇ ಹೊರತು ಒಮ್ಮೆಲೇ ಎಲ್ಲವನ್ನೂ ಸಾಧಿಸಲು ಸಾಧ್ಯವಿಲ್ಲ."

"ಹಾಗಾದರೆ...." ಮುಂದೆ ಹರಿಯಬೇಕಾಗಿದ್ದ ವಾಕ್ಯಸರಣಿ ಅಷ್ಟಕ್ಕೆ ಮೊಟಕಾಯಿತು. ರಾಧೇಶ್ಯಾಂ ತುಸು ಚಿಂತಿತನಾದ. ವಿಷಯ ಗಂಟಲ ಗಾಣ ವಾಗಿ ಸ್ವಲ್ಪಹೊತ್ತು ಗಂಭೀರ ಗತಿಯಲ್ಲಿ ಉರುಳಿತೇನೋ....ಅನಂತರ ಅವಳೇ ಮಾತು ಆರಂಭಿಸಿದಳು,

"ಸ್ತ್ರೀ ಜಾತಿ ವೈಯ್ಯಕ್ತಿಕ ಸ್ವಾತಂತ್ರ್ಯ ಹೊಂದಿದಲ್ಲಿ ಅನೈತಿಕ ವ್ಯವ ಹಾರಕ್ಕೆ ಇಳಿಯುತ್ತೆಂಬ ಭಾವನೆ ಖಂಡಿತ ಸರಿಯಲ್ಲ. ಇದು ಅತ್ಯಂತ ಸ್ವಾರ್ಥ ಮನೋಭಾವ !"

"ಅಷ್ಟು ಪ್ರಾಜ್ಞತೆ ನಮ್ಮಲ್ಲಿ ಇನ್ನೂ ಬೆಳೆಯಲಿಲ್ಲ."

ವಿಮಲ ಬಾಯ್ದೆರೆದು ಗಟ್ಟಿಯಾಗಿ ನಕ್ಕು ಬಿಟ್ಟಳು.

ರಾಧೇಶ್ಯಾಂ ತನ್ನ ದನಿಯನ್ನೂ ಹರಿಯಬಿಟ್ಟ.

"ಸಾಮೂಹಿಕವಾಗಿ ಬೆಳೆಯದಿರಬಹುದು, ಆದರೆ...."

ಮಾತನ್ನು ಮುಂದುವರಿಯಗೊಡಿಸದಂತೆ ರಾಧೇಶ್ಯಾಂ ನಡುವೆ ಬಾಯಿ ಹಾಕಿದ,

"ಹಾ! ಅಲ್ಲೇ ಇದೆ, ಸಮಗ್ರ ಕೊರತೆ!" ಅರಳು ಗಣ್ಣುಗಳಲ್ಲಿ ತುಂಟತನ ನಲಿಯಿತು. ತುಟಿಗಳಲ್ಲಿ ಹರಿದ ಸರಳ ಸ್ನಿಗ್ಧ ಸ್ಮಿತಧಾರೆ ಗೆಲುವಿನ ಹೆಮ್ಮೆಯನ್ನು ಸೂಸಿತು.

ವಿಮಲ ಅಷ್ಟಕ್ಕೆ ತಲೆ ಮಣಿಯಲಿಲ್ಲ. ಸೋಲೊಪ್ಪಿಕೊಳ್ಳದೆ ದೃಢಗತಿಯಲ್ಲಿ ಮುಂದುವರಿದಳು,

"ಈಗೇನು? ಎಲ್ಲಾ ಕಡೆಯಲ್ಲೂ ಶಾಲಾಕಾಲೇಜುಗಳು ತಲೆಯೆತ್ತುತ್ತಿವೆ. ಕಡ್ಡಾಯ ಶಿಕ್ಷಣ ಮೊದಲ ಹೆಜ್ಜೆ ಇಡುತ್ತಿದೆ. ಕಾಲಕ್ರಮೇಣ ಎಲ್ಲರೂ ಬುದ್ಧಿವಂತರಾಗುತ್ತಾರೆ. ಆ ಕಾಲ ಬಹಳ ದೂರವಿಲ್ಲ. ಈಗಿನಿಂದಲೇ ಸ್ವಾತಂತ್ರ್ಯ ಯಜ್ಞಾರಂಭ ಮಾಡಿದರೆ ಅಂದಿಗೆ ಸರಿಯಾಗಿ ಕೊನೆ ಮುಟ್ಟುತ್ತದೆ. ನೀವೇ ಈಗ ಯಜ್ಞಾರಂಭ ಮಾಡಿರಿ. ಬರಿಯ ಈ ವಾದೋಪವಾದಗಳಿಂದ ಯಾವ ಪ್ರಯೋಜನವೂ ಇಲ್ಲ."

ರಾಧೇಶ್ಯಾಂ ಹತಾಶನಾದ. ಚಿತ್ತ ವಿಚಿತ್ರಗತಿಯಲ್ಲಿ ಹಲವಾರು ಕಡೆ ಹರಿದಾಡುತಿತ್ತು.

ವಿಮಲ ಅತ್ಯಂತ ಗಂಭೀರ ನಿಲುವನ್ನು ತಳೆದಿದ್ದಳು.

ಇದುವರೆಗೂ ಪರಸ್ಪರ ವಾದವಿವಾದಗಳಲ್ಲಿ ತೊಡಗುವಷ್ಟು ದೂರ ಬೆಳೆದ ಸಲಿಗೆ-ಸಹಕಾರ, ಹಾಸ-ಪರಿಹಾಸಗಳ ಪ್ರತಿಫಲ ಸಾಮಾಜಿಕ ವಲಯದಲ್ಲಿ 'ಗುಸುಗುಸು' ಹಬ್ಬಿರುವುದನ್ನು ಇಬ್ಬರೂ ಊಹಿಸದೇ ಇರಲಿಲ್ಲ. ಕುಕಲ್ಪನೆ ಕೆಟ್ಟ ವದಂತಿ ಯಾವ ದಿಶೆಯಲ್ಲಿ ಹುಟ್ಟಿ ಇನ್ನಾವ ದಿಶೆಗೆ ಹರಡುತ್ತಿವೆಯೋ....ಬಹುಶಃ ಆ ಮಾತಾಳಿಗಳಿಗೆ ನಿಜ ಸ್ವಭಾವವನ್ನು ಕುರಿತು ಏನೇನೂ ತಿಳಿಯದು. ಕಂಡು-ಕೇಳಿ ತಿಳಿದಿರುವ ವಿಷಯ ಸಹ ಬಹಳಮಟ್ಟಿಗೆ ಅಸತ್ಯವೇ ಇರಬಹುದು. ಅದರಲ್ಲಿ ಅಲ್ಪಸ್ವಲ್ಪ ವಾಸ್ತವಾಂಶ ಇದ್ದರೂ ಅವಾಸ್ತವಿಕ ಬೆಟ್ಟದ ರಾಶಿಯಲ್ಲಿ ಹುಡುಕಿದರೂ ಸೂಜಿ ಮೊನೆಯಷ್ಟು ಸಿಗುವುದು ಸಹ ಅಸಂಭವ....

ಸ್ವಲ್ಪ ಹೊತ್ತು ಸುಮ್ಮನಿದ್ದು ವಿಮಲ ತನ್ನ ಅಭಿಪ್ರಾಯವನ್ನು ಹೊರ

ಹಾಕಿದಳು,

"ಈ ಬಾಳಿನಲ್ಲಿ ಅದೃಷ್ಟಾದೃಷ್ಟಗಳು, ಸ್ವಾತಂತ್ರ್ಯಾಸ್ವಾತಂತ್ರಗಳು ಯಾವುವೂ ಶಾಶ್ವತವಲ್ಲ; ಅವುಗಳ ಮೂಲಕ ಪಡೆಯುವ ಅನುಭವವೊಂದೇ ಶಾಶ್ವತವಾದುದು. ಆದರೂ ಸಹ...."ಯಾವುದೋ ಯೋಚನಾವಳಿಯಲ್ಲಿ ಸಿಕ್ಕಿ ಅಷ್ಟಕ್ಕೆ ಸುಮ್ಮನಾದಳು. ಹಣೆಯಮೇಲೆ ತುಂತುರು ತುಂತುರಾಗಿ ಸ್ವೇದಬಿಂದುಗಳು ಮುತ್ತಿನ ಮಣಿಗಳಂತೆ ಮೂಡಿದುವು. ತಿಲಕಯುಕ್ತ ಲಲಾಟ ಶ್ವೇತ ಪತ್ರದ ಮೇಲಿನ ಹಿಮಮಣಿಗಳ ಮಧ್ಯೆ ಶೋಭಿತ ಗುಲಗಂಜಿಯಂತೆ ಕಂಗೊಳಿಸುತಿತ್ತು; ಉಜ್ವಲ ನೇತ್ರಗಳ ನಿಶ್ಚಲ ತೇಜ ಮಾನವೀಯತೆಯನ್ನು ಪ್ರದರ್ಶಿಸಿದಂತಿತ್ತು. ಒಂದೆರಡು ಕ್ಷಣ ತಡೆದು ಯೋಚನೆಯ ಭಾರದಿಂದ ತಾನೇ ತಾನಾಗಿ ಮುಂದುವರಿದಳು,

"ಮುಖ್ಯವಾಗಿ ಈ ಜೀವನವೇ ಅಶಾಶ್ವತ. 'ದುರಾಸೆ' ಎಂಬುದು ಚಿತ್ತ ಕಲ್ಪದ ಮೇಲೆ ತೆರೆಯನ್ನೆಳೆದು ಶಾಶ್ವತ ಸುಖದ ಗೀಳು ಹಿಡಿಸಿ ನಾನಾ ಪ್ರಕಾರವಾಗಿ ನಮ್ಮನ್ನು ಕಾಡುತ್ತದೆ. ಅದೃಷ್ಟ-ದುರದೃಷ್ಟಗಳಿಂದ ಉಂಟಾಗುವ ಅನುಭವ ಅನುಪಮ ಭಾಗ್ಯವೇ ಆಗಬಹುದು. ಇರಲಿ, ಈ ವಾದವಿವಾದಗಳಿಂದ ಮೂಡಿದ ಅನುಭೂತಿಯನ್ನು ಕ್ಷಣಿಕಾನಂದದ ಮುಂದೆ ಹಗುರವಾಗಿ ಕಾಣಬೇಡಿರಿ. ನಿಮಗಿರುವಷ್ಟೇ ಆಶೆ-ಆಕಾಂಕ್ಷೆಗಳು ಪ್ರತಿಯೊಬ್ಬರ ಸೊತ್ತು, ಎಂಬುದು ಈಗ ನಿಮಗೆ ಮನದಟ್ಟಾಗಿರಬಹುದು."

ರಾಧೇಶ್ಯಾಂ ಸ್ವಲ್ಪಹೊತ್ತು ಸುಮ್ಮನೆ ಚಿಂತಿಸಿ ಬಿಸಿಯುಸಿರು ಬಿಟ್ಟು ಹೇಳಿದ,

"ಸ್ತ್ರೀಯರೊಡನೆ ವಾದ ಹೂಡಿ ಯಾವ ಪುರುಷನಾದರೂ ಗೆಲ್ಲುವನೇ ಹೇಳಿ ?"

"ಅಂದರೆ....? ನಾವು ಮೊಂಡು ವಾದ ಹೂಡುತ್ತೇವೆಂದೇ ?"

ರಾಧೇಶ್ಯಾಂ ಆಕೆಯ ಮುಖಬಿಂಬವನ್ನು ಸಂಭ್ರಮಯುಕ್ತ ದೃಷ್ಟಿಯಿಂದ ನೋಡುತ್ತ ಮುಗುಳು ನಕ್ಕ.

ಸಾಯಂಸಮಯದ ಸುಂದರ ಸೊಂಪು ಸ್ವರ್ಣವರ್ಷದಂತೆ ಮನಃಪ್ರಾಣಗಳನ್ನು ಸೆಳೆಯುವಂತಿತ್ತು. ವಿದ್ಯುತ್ ದೀಪಾಲೋಕದ ಕ್ಷೀಣರಶ್ಮಿಗಳು ಆಗಲೇ ಉದಿತವಾಗಿದೆ. ಲೋಕವಿಹಾರೀ ವಾಯುದೇವ ಸೀಕರ ಸಿಕ್ತ ತರಂಗ

ಗಳನ್ನು ಎಲ್ಲೆಡೆ ಪಸರಿಸುತಿದ್ದಾನೆ. ದಿಗ್ದೇಶದಲ್ಲಿ ಇಂದೀವರಮಾಲೆಯಂತಹ ಬೆಳ್ಮೋಡಗಳ ಸಾಲು ರಾಗವನ್ನು ರಂಜಿಸುವಂತಿದ್ದುವು. ರಾಜಮಾರ್ಗದ ಇಕ್ಕೆಲಗಳ ಅದ್ಭುತ ಸೌಧಗಳ ಉದ್ಯಾನಗಳು ಮನವನ್ನು ಸೆಳೆಯುವಂತಿದ್ದುವು. ಅರ್ಧಸ್ಫುಟ ಕುಸುಮ ಸಂಪತ್ತಿ ಮನಮೋಹಕವಾಗಿತ್ತು. ಕಲುಷ ಮಾನಸದ ವಿಕಾರಗಳನ್ನು ಕಿತ್ತು ಬಿಸುಡುವಂತಹ ಅನುಭೂತ ಅದ್ಭುತ ಶಾಂತಿಯು ಎದುರಾಳಿಯ ಸರಳ ಸ್ವಾಭಾವಿಕ ತಾರಳ್ಯಕ್ಕಾಗಿ ಸಹಾನುಭೂತಿಯ ವರ್ಷಣ ಮೂಡಿಸಿತು. ರಾಗಾನುರಾಗಗಳ ಗಣಿಯಾದ ರಾಧೇಶ್ಯಾಂ ಮನಃಪ್ರಾಣ ಪುಳಕಿತನಾದ. ಸ್ವಯಮಾನ ಮುಖಮಂಡಲ ಕರುಣರಸದಿಂದ ಪ್ಲಾವಿತಗೊಂಡಿತ್ತು. ಸ್ವಲ್ಪಹೊತ್ತು ಅವಳತ್ತ ನೋಟವನ್ನು ಚೆಲ್ಲಿಕೊಟ್ಟು, ಗಂಭೀರ ಚಿಂತಾಪ್ರಾಕಾರದಿಂದ ಹೊರಬಿದ್ದು ಏನೋ ಒಂದು ರೀತಿಯ ಸಮಾಧಾನದಿಂದ ಬಿತ್ತರಿಸಿದ,

"ಮನುಷ್ಯ ಹೆಜ್ಜೆ ಹೆಜ್ಜೆಗೂ ಅವಾಸ್ತವಿಕತೆಯೊಡನೆ ಸಂಧಿ ಮಾಡಿಕೊಳ್ಳಲು ಬಯಸಿದರೆ ಜೀವನದ ಮೌಲ್ಯವೇ ನಷ್ಟ ಹೊಂದುತ್ತದೆ. ಆದ್ದರಿಂದ ಆಳವಾಗಿ ಪರಾಮರ್ಶಿಸುವುದು ಲೇಸು. ಅದಕ್ಕೆ ಸಾಕಷ್ಟು ಸಮಯ ಮತ್ತು ಪರಿಜ್ಞಾನ ಎರಡೂ ಇವೆ, ಅವಸರ ಪಡಬೇಕಾಗಿಲ್ಲ."

ದನಿ ಶೀತದೇಶದ ಶೈತ್ಯಕ್ಕಿಂತಲೂ ಶೀತಲವಾಗಿ ಹರಿಯಿತು.

ಹಾದಿ ನಿಧಾನಗತಿಯಲ್ಲಿ ಸಾಗುತ್ತಲೇ ಇತ್ತು. ರಸ್ತೆಯಲ್ಲಿ ಪಥಿಕರು ಅವಿರಳವಾಗಿ ಕಾಣಿಸುತಿದ್ದಾರೆ. ವಾಹನಗಳಿಗೂ ಕೊರತೆ ಇಲ್ಲ. ದೂರದಲ್ಲಿ ಜನ ಸಮುದಾಯದ ಮಧ್ಯೆ ಶೋಕರಾಗ ಹರಿದು ಬರುತಿತ್ತು. ಶವವಾಹಕರು ತಮಟೆ ವಾದ್ಯಗಳೊಂದಿಗೆ ಇತ್ತಲೇ ಬರುತಿದ್ದಾರೆ. ಗುಂಪು ಅಂತಹ ಚಿಕ್ಕದೇನೂ ಅಲ್ಲ. ಸಂಪ್ರದಾಯ ದ್ಯೋತಕವಾದ ಘಟದೊಡನೆ ಮೃತರ ಕುಟುಂಬ ಮುಂಭಾಗದಲ್ಲಿ ನಡೆಯುತಿತ್ತು. ಒಮ್ಮೆ ಅತ್ತ ದೃಷ್ಟಿ ಹೊರಳಿಸಿ ಬಿಸಿಯುಸಿರು ಬಿಟ್ಟಳು ವಿಮಲ.

....ಎಷ್ಟೇ ಹೊಡೆದಾಡಿದರೂ ಈ ಜೀವನ ಇಷ್ಟೆ....ಕೇವಲ ಕೈದೀವಿಗೆಯ ಸಹಾಯದಿಂದ ಕೈಕೊಂಡ ಮಾರ್ಗಯೋಗದಲ್ಲಿ ಗಮ್ಯಸ್ಥಾನವನ್ನು ಸೇರುವುದೂ ಸಹ ಕಷ್ಟ. ಬದುಕು ಸುದೀರ್ಘವೇ ಆದರೂ ಸಂಕುಚಿತವೇ ಆದರೂ ಎಲ್ಲಿಯವರೆಗೆ ಈ ಶಕ್ತಿ ಸಾಮರ್ಥ್ಯಗಳು ಇರುತ್ತವೆ ಎಂಬುದನ್ನು

ಊಹಿಸಲಾಗುವುದಿಲ್ಲ. ಆದರೂ ಸಹ ಪರದಾಟ....

ವಿಷಯ ಮನದಲೆಯಲ್ಲಿ ಧುಮುಧುಮಿಸುತಿತ್ತು. ಯೋಚನಾವಳಿಯಲ್ಲಿ ಸಿಕ್ಕಿದ ವಿಮಲ ಮತ್ತೊಂದು ಮಾತಾಡದೆ ವಾಸ್ತವಿಕತೆಯನ್ನು ತಲ್ಪಿದಂತೆ ಸುಮ್ಮನಾದಳು.

ರಾಧೇಶ್ಯಾಂ ಗಡಿಯಾರದ ಕಡೆ ನೋಡಿಕೊಂಡ, ಮನಸ್ಸು ಆಫೀಸಿನ ಮಾರ್ಗವನ್ನು ಹಿಡಿಯುವ ತರಾತುರಿಯಲ್ಲಿತ್ತು. ವಿಮಲೆಯ ಕಡೆ ನೋಟವನ್ನು ಹರಿಸಿ ಅಂದ,

"ನನಗೆ ಆಫೀಸಿಗೆ ಹೋಗಲು ಹೊತ್ತಾಯಿತು. ನಾಳೆ ಸಂಜೆ ನಿಮ್ಮ ಮನೆಯ ಕಡೆ ಬರುವೆ."

ವಿಮಲ ಮೈಮರೆತವಳಂತೆ ಒಂದೆರಡು ಕ್ಷಣ ನಿಟ್ಟಿಸಿದಳು. ಆದರೆ, ಈಗೇಕೋ ನಾಳೆಯವರೆಗೂ ಮುಂದೂಡಲು ಮನಸ್ಸು ಒಪ್ಪುತ್ತಲೇ ಇಲ್ಲ. ಮುಂದಿನ ಏಕಾಂತ ಪಯಣ ಮನಸ್ಸಿಗೆ ಭಯವನ್ನೂಡಿಸುತ್ತಿದೆ. ಸ್ವಲ್ಪ ಹೊತ್ತು ಗಂಭೀರಗತಿಯಲ್ಲಿ ಯೋಚಿಸಿದಳು. ಅನಿರೀಕ್ಷಿತ ಭಯ-ಕಳವಳ ಉತ್ತರಿಸಲು ಅವಕಾಶ ಕೊಡುತ್ತಲೇ ಇಲ್ಲ. ತಕ್ಷಣ ಕೊರಳೆತ್ತಿ ದೈನ್ಯಭಾವದಿಂದ ಅವನನ್ನು ನಿಟ್ಟಿಸಿದಳು. ಅವನ ಮುಖದಲ್ಲಿ ಹೊಮ್ಮಿದ ಸೌಮ್ಯ-ಪ್ರಸನ್ನಭಾವನೆ ಎಂದಿಲ್ಲದ ಸಹಕಾರವನ್ನು ಸೂಸುವಂತಿತ್ತು. ಅತ್ಯಂತ ಆಕುಲತೆಯಿಂದ ಕೇಳಿಕೊಂಡಳು.

"ಇಂದು, ದಯವಿಟ್ಟು ಮನೆಯವರೆಗೂ ನನ್ನನ್ನು ತಲ್ಪಿಸಿ ಹೋಗುವಿರಾ ?"

"ಇದೇನು ?....ಹೊಸ ವಿಧಾನ ?" ಹಾಸ್ಯಭರಿತ ಮಧುರವಾಣಿಯಲ್ಲಿ ಪ್ರಶ್ನೆ ಹೊರಬಿತ್ತು

ಆವುದೋ ಅನುಭಾವ ತರಂಗಗಳು ತಲೆಯ ಸುತ್ತ ಸುಳಿಸುತ್ತುತಿದ್ದುವು. ನಸು ಚಿಂತಾಮಗ್ನಳಾದಂತೆ ಉತ್ತರಿಸಿದಳು "ಕತ್ತಲಾಗುತ್ತಿದೆ........ಇನ್ನೂ ಬಹಳಷ್ಟು ದೂರ ನಡೆಯಬೇಕಲ್ಲ."

"ಈ ಪ್ರಪಂಚದ ಕಟುತ್ವದ ಅನುಭವ ನಿಮಗಾಗಿಯೇ ಇಲ್ಲ ಎಂದುಕೊಂಡಿದ್ದೆ ನಾನು !"

"ಆಗದೆ....ಕತ್ತಲಾದ ಮೇಲೆ ಒಬ್ಬಳೇ ಹೋಗುವುದು ಸಾಧ್ಯವಿಲ್ಲ

ಎಂಬುದು ಮನೋವೇದ್ಯ."

ರಾಧೇಶ್ಯಾಂ ಗಟ್ಟಿಯಾಗಿ ನಗುತ್ತ ಅವಳ ಮೃದು ಹಸ್ತವನ್ನು ಅದುಮಿ ಹಿಡಿದುಕೊಂಡು ಅತ್ಯಾದರದಿಂದ ಅಂದ "ನಡೆಯಿರಿ....ಹೋಗೋಣ."

ಇಬ್ಬರೂ ಮನೆಯನ್ನು ಮುಟ್ಟಿದಾಗ ಹೊತ್ತು ಎಂಟರ ಅಂಚಿನಲ್ಲಿತ್ತು, ಅವನು ಒಳಗಡೆ ಬರದೆ ಅವಳು ಒಳ ಹೋಗುವವರೆಗೂ ಕಾದಿದ್ದು ಹಿಂದಿರುಗಿದ. ತಾಯಿ ಮತ್ತು ಅಕ್ಕ ಇಬ್ಬರೂ ಅವಳ ನಿರೀಕ್ಷೆಯಲ್ಲಿದ್ದರು. ಒಳ ಬರುತ್ತಲೇ ತಾಯಿ-"ಇಷ್ಟೊತ್ತು ಏಕಾಯ್ತು ವಿಮಲೂ !"

ವಿಮಲ ಏನೋ ಒಂದು ಕಾರಣವನ್ನು ಹೇಳಿ ದಿನಚರಿಯಲ್ಲಿ ತೊಡಗಿದಾಗ ನಿರ್ಮಲ ಅತ್ಯಂತ ಭಾವುಕತೆಯಿಂದ ಹೇಳಿದಳು,

"ಈ ಜೀವನಕ್ಕೆ ಜೀವನಾದರ್ಶನಕ್ಕೆ ನಾವು ಕಟ್ಟುವ ಬೆಲೆಯನ್ನು ಸರಿಯಾಗಿ ತುಲನೆ ಮಾಡಬಲ್ಲವರು ಅತೀ ವಿರಳ, ವಿಮಲೂ !"

ಎಲ್ಲಿಂದಲೋ ಹಳೆಯ ಗಡಿಯಾರ ಸಂಗೀತ ವೈಖರಿಯಲ್ಲಿ ಎಂಟು ಘಂಟೆ ಬಾರಿಸಿತು. ಅದರ ಒಂದೊಂದು ಬಡಿತವೂ ಪಾಷಾಣ ಮೂರ್ತಿಯ ಅಂತರಂಗದಲ್ಲಿ ಹುದುಗಿರುವ ಮಾರ್ದವ ಭಾವನೆಯಂತೆ ಕೇಳಿಸುತಿತ್ತು. ಸ್ವಲ್ಪಹೊತ್ತು ಅತ್ತ ಕಿವಿಗೊಟ್ಟು ಅನಂತರ ಅತ್ಯಂತ ಮಾರ್ಮಿಕವಾಗಿ ಉತ್ತರಿಸಿದಳು ವಿಮಲ,

"ಒಂದಿಷ್ಟು ಶ್ರೀಗಂಧ ಅರೆದು ಸಮುದ್ರದಲ್ಲಿ ಕದಡಿದರೆ ಏನಾದೀತು ಹೇಳು ? ಇಲ್ಲಿಯವರೆಗೆ ನಮ್ಮ ಜನವಾರ್ಧಿಗೆ ಲಭಿಸಿರುವ ಸರಸ್ವತೀ ಪ್ರಸಾದವಾದರೂ ಅಷ್ಟೆ. ಅಂದಮೇಲೆ ಇದಕ್ಕಿಂತ ಹೆಚ್ಚಿಗೆ ನಿರೀಕ್ಷಿಸುವುದು ಪ್ರಯೋಜನವಿಲ್ಲ."

"ಅಲ್ಲ....ಅದಲ್ಲ...."

ಮಾತು ಮುಂದುವರಿಯಗೊಡದಂತೆ ನಡುವೆ ಬಾಯಿ ಹಾಕಿದಳು ವಿಮಲ,

"ಒಂದು ವಿಷಯವನ್ನು ನಾವು ಯಾವಾಗಲೂ ನೆನಪಿನಲ್ಲಿಟ್ಟುಕೊಂಡು ಮುಂದುವರಿಯಬೇಕು. ಇಂಗ್ಲೀಷರ ಆಳ್ವಿಕೆಯಲ್ಲಿ ಪತನವಾದ ನಮ್ಮ ಸಂಸ್ಕೃತಿ ಪುನರಪಿ ಚೇತರಿಸಿಕೊಳ್ಳಬೇಕಾದರೆ ಇನ್ನೂ ಎಷ್ಟು ಕಾಲ ಬೇಕೋ ...ನಾವು ಅನನ್ನೂ ಕೂಡ ಯೋಚಿಸಬೇಕು."

"ನಿಜ" ಎಂದ ನಿರ್ಮಲ ಸ್ವಲ್ಪ ಹೊತ್ತು ಸುಮ್ಮನಿದ್ದು ಮುಂದುವರಿದಳು "ಕಲಿತ ವರ್ಗದಲ್ಲೇ ಧಾರ್ಮಿಕ ಕೊರತೆ ಕಾಣಬರುತ್ತಿರುವುದು ತುಂಬ ವಿಷಾದಕರ."

"ಪಾಶ್ಚಾತ್ಯರ ಸಹವಾಸ ಮತ್ತು ಅನುಕರಣೆ !"

ನೀಳವಾದ ನಿಟ್ಟುಸಿರು ಬಿಟ್ಟಳು ನಿರ್ಮಲ. ಮನಃಕ್ಷೋಭೆಯಿಂದ ಮುಖಮಂಡಲ ಗಂಭೀರವಾಯಿತು; ಚಿತ್ತ ಪ್ರಪಂಚದಲ್ಲಿ ಅಮರನಾಥ ಸುಳಿದಳಿದ. ತನ್ನ ಅಂತರಂಗಕ್ಕೆ ಸಂಬಂಧಿಸಿದ ಅದ್ಭುತ ವ್ಯವಹಾರವನ್ನು ತನ್ನಲ್ಲಿಯೇ ವಿಮರ್ಶಿಸಿಕೊಳ್ಳುತ್ತ ಯಾವ ರೀತಿಯಲ್ಲಿ ಬಗೆಹರಿಸಿಕೊಳ್ಳಬೇಕೋ ಅರ್ಥವಾಗುತ್ತಿಲ್ಲ ಎಂದುಕೊಂಡಳು; ನರನರಗಳೂ ನೆತ್ತರಿನ ಅತೀವ ಒತ್ತಡದಿಂದ ಸೀಳಿಹೋಗುತ್ತಿರುವಂತೆ ಭಾಸವಾಯಿತು. ಅನುರಾಗಪೂರ್ಣ ಹೃದಯ ಒಡಕು ಘಟದಂತಾಗಿತ್ತು. ಯೋಚನಾವಳಿಯಲ್ಲಿ ಸಿಕ್ಕಿ ಎಲ್ಲವನ್ನೂ ಭಗವಂತನಿಗೆ ಬಿಟ್ಟುಬಿಡುವುದು ಒಳ್ಳಿತು ಎಂಬ ಆಂತರಂಗಿಕ ಅಭಿಲಾಷೆಗೆ ಶರಣಾಗಿ ನುಡಿದಳು,

"ಈ ಜೀವನ ನಾವು ಬಯಸಿದಂತೆ ಇರುವುದು ಸಾಧ್ಯವೂ ಇಲ್ಲ. ಆದರೂ ಅದನ್ನು ನಮ್ಮಿಂದಾದಷ್ಟು ದುರಸ್ತಿ ಪಡಿಸಿಕೊಳ್ಳುವುದು ಲೇಸು. ಆದರೆ ಮನುಷ್ಯ ಸಿದ್ಧನೂ ಅಲ್ಲ; ಪ್ರಬುದ್ಧನೂ ಅಲ್ಲ."

"ತುಪ್ಪದ ಹೀರೇಕಾಯಿಯಲ್ಲಿ ತುಪ್ಪವೇ ಇಲ್ಲದಂತೆ ಮನುಷ್ಯನಲ್ಲಿ ಮನುಷ್ಯತ್ವವೇ ಇಲ್ಲ !"

ಇಬ್ಬರ ತುಟಿಗಳಲ್ಲೂ ಏನೋ ಒಂದು ಬಗೆಯ ತಿರಸ್ಕಾರದ ನಗೆ ಮಿನುಗಿ ಮಾಯವಾಯಿತು.

## ೩೦

ಬಹಳ ದಿನಗಳನಂತರ ಪ್ರಫುಲ್ಲ ಸುದೀರ್ಘವಾದ ಪತ್ರ ಬರೆದಿದ್ದ. ಅದರಲ್ಲಿ ಅರ್ಧ ಭಾಗವೆಲ್ಲಾ ಮುಂಬೈ ಜೀವನದ ಕಲುಷಿತ ವಾತಾವರಣವನ್ನು ಸಖೇದಾಶ್ಚರ್ಯದಿಂದ ವಿವರಿಸುವುದರಲ್ಲಿ ಕಳೆದಿತ್ತು. ಮುಂದಿನ ಬಹುಭಾಗ ತನ್ನ ಜೀವನ ವಿಕಾಸ ಮತ್ತು ಉದ್ದೇಶಗಳ ಕಡೆ ಹರಿಸಿ, ಕೊನೆಯ

ಪ್ಯಾರಾದಲ್ಲಿ ವಿಮಲೆಯ ಮದುವೆಗೆ ಪತ್ನೀಸಮೇತನಾಗಿ ಬರುವುದಾಗಿ ಬರೆದು ಪೂರ್ಣವಿರಾಮ ಹಾಕಿದ್ದ.

ಆ ಕಾಗದವನ್ನು ನೋಡಿದ ಜಾನಕಿ ಸಂತೃಪ್ತಳಾದಳು,

ಎರಡೂ ಕಡೆಯವರು ಸರಳ ಸಮಾರಂಭವನ್ನು ಬಯಸಿದುದರಿಂದ ವಿಮಲೆಯ ಮದುವೆಗೆ ವಿಶೇಷ ಏರ್ಪಾಡುಗಳೇನೂ ನಡೆಯಲಿಲ್ಲ. ಒಂದು ಸುಂದರ ಪ್ರಾತಃಕಾಲದಲ್ಲಿ ಅವಳ ವಿವಾಹಕ್ಕೆ ಲಗ್ನ ನಿಶ್ಚಿತಾರ್ಥ ನಡೆಯಿತು. ಆ ಮಹೂರ್ತಕ್ಕೆ ಇನ್ನೂ ಎರಡು ವಾರಗಳ ಕಾಲಾವಕಾಶವಿದ್ದುದರಿಂದ ವಿಮಲ ಉತ್ಸಾಹದಿಂದ ನವಜೀವನ ಸಮೃದ್ಧಿಗೆ ತಯಾರಿ ನಡೆಸತೊಡಗಿದಳು. ರಾಧೇಶ್ಯಾಂ ಹೊಸಮನೆಯೊಂದನ್ನು ಬಾಡಿಗೆಗೆ ಗೊತ್ತುಮಾಡುವುದರಲ್ಲಿ ನಿಯುಕ್ತನಾಗಿದ್ದ. ದಂಪತಿಗಳಿಬ್ಬರೂ ಹೊರಗಡೆ ಕೆಲಸ ಮಾಡುವವರಾದುದರಿಂದ ಅತೀ ಸಂಪ್ರದಾಯಸ್ಥರಾದ ತಮ್ಮವರಿಂದ ಬೇರೆಯಾಗಿರುವುದು ಲೇಸು ಎಂಬ ತೀರ್ಮಾನಕ್ಕೆ ಶರಣಾಗಿ ಅದಕ್ಕೆ ತಮ್ಮವರ ಒಪ್ಪಿಗೆಯನ್ನು ಪಡೆದುಕೊಂಡಿದ್ದ. ಅಲ್ಲಿಗೆ ಅವರ ಸಮಸ್ಯೆಗಳೆಲ್ಲವೂ ಒಮ್ಮತದಿಂದ ಬಗೆಹರಿದುವು ಎಂಬ ಸಮಾಧಾನ ಎಲ್ಲರಿಗೆ.

....ಸಾಯಂಸಮಯದ ಅಭೂತಪೂರ್ವ ಸೌಂದರ್ಯರಾಶಿ ಅನುಭೂತವಾಗಿತ್ತು.

....ಪ್ರಥ್ವಿ ಶಾಂತ ಮನೋಹರೆಯಾಗಿ ವಿಜೃಂಭಿಸುತಿದ್ದಾಳೆ.

ಕೆಲಸ ಕಾರ್ಯಗಳನ್ನು ಮುಗಿಸಿದ ಮಂದಿ ಗೃಹಾಭಿಮುಖವಾಗಿ ಹೆಜ್ಜೆ ಹಾಕುತ್ತ ನಗೆ ಮಾತುಗಳ ಕಡೆ ಗಮನ ಹರಿಸಿದ್ದಾರೆ. ಸಂಜೆಯ ಪಾಳಿಯಲ್ಲಿ ತೊಡಗುವವರು ಆಗಲೇ ತೊಡಗುತಿದ್ದಾರೆ. ಜಗತ್ತು ಸುಖ-ದುಃಖಗಳನ್ನು ನಾನಾ ರೀತಿಯಲ್ಲಿ ಸಂಪೋಷಿಸುತ್ತಿರುವುದನ್ನು ನೋಡುತ್ತ ರಾಮಕೃಷ್ಣ ಒಳಹೆಜ್ಜೆಯಿಟ್ಟ. ಕಣ್ಣುಗಳಲ್ಲಿ ಸಖೇದಾಶ್ಚರ್ಯದ ಛಾಯೆ ತೆರೆಯ ಹಿಂದಿನ ಹೆಣ್ಣಿನಂತೆ ಇಣಕುತಿತ್ತು. ತಲೆಬಾಗಿಲಿನಲ್ಲಿ ಎದುರಾದ ವಿಮಲ ಭಾವೀ ಮಾವಂದಿರಿಗೆ ಸ್ವಾಗತ ಬಯಸಿ ಸ್ವಲ್ಪ ಅರುಗಾಗಿ ನಿಂತಳು. ಮುಖಬಿಂಬದಲ್ಲಿ ನಿತಾಂತ ಪ್ರಸನ್ನ ಭಾವದಿಂದ ಮೋಹಕ ನಗು ಅರಳಿತು. ಅಂದು ಮಾಡಿದ ತಪ್ಪನ್ನು ಇಂದು ಪ್ರಯತ್ನ ಪೂರ್ವಕವಾಗಿ ನಿವಾರಿಸಿಕೊಂಡಳು.

"ದೀರ್ಘ ಸುಮಂಗಲೀ ಭವ!"

ಉಚ್ಛ ಸ್ವರದಲ್ಲಿ ಮನಃಪೂರ್ವಕವಾದ ಆಶೀರ್ವಚನ ಹೊರಬಿತ್ತು: ನಾರೀಜನೋಚಿತವಾದ ನಸು ಲಜ್ಜಾಭಾರದಿಂದ ಕೆಂಪು ತಳೆದಳು ಅವಳು. ರಾಮಕೃಷ್ಣರಾಯ ಹಲವಾರು ವಿಚಾರಗಳ ಆವಾಸಸ್ಥಾನವಾಗಿ ಭಾರವಾದ ಶರೀರದಿಂದ ಒಳಬಂದು ಮಂಡಿಸಿದ. ಆತನ ವಿಚಾರವನ್ನಿಷ್ಟು ಹೇಳುವುದಾದರೆ :

....ಒಂದು ಕಾಲದಲ್ಲಿ ತಾನು ಹಿಡಿದಿದ್ದ ವೃತ್ತಿ....ಇಂದು ತನಗೆ ಬರುವ ನಿವೃತ್ತಿವೇತನ ಏನೋ ಒಂದು ರೀತಿಯ ತೃಪ್ತಿಯನ್ನೇ ಕೊಟ್ಟವೆ. ಬಾಳುದ್ದಕ್ಕೂ ಅಕ್ಷರಶಃ ಪಾಲಿಸಿಕೊಂಡು ಬಂದ ಧಾರ್ಮಿಕ ವಿಧಾನ....ಆರ್ಥಿಕ ಮುಗ್ಗಟ್ಟಿನಿಂದ ಕುಂಟುತ್ತ ಸಾಗುತಿದ್ದ ಸಂಸಾರ ರಥ....ಒಂದಕ್ಕೊಂದು ಪೂರಕವಾಗಿಯೇ ಇದ್ದುವು. ತನ್ನ ಸಂಸಾರದ ಹೊರಗಡೆ ಮತ್ತೊಂದು ಭವ್ಯ ಪ್ರಪಂಚವಿದ್ದು, ಅದು ನವಚೈತನ್ಯ ತರಂಗಗಳಿಂದ ಕೂಡಿ ಅನಂತ ಶಕ್ತಿಯಿಂದ ಉಸಿರಾಡುತ್ತಿದೆಯೆಂದು ಅರ್ಥಮಾಡಿಕೊಳ್ಳುವಷ್ಟು ಸಮಯ-ಸಹನೆ ಎರಡೂ ಈ ಬಳಿಯಲ್ಲಿ ಸುಳಿದಿರಲಿಲ್ಲ. ಹೊರ ಪ್ರಪಂಚದ ಭೀಷಣ ತರಂಗಗಳು ಇತ್ತೀಚೆಗೆ ತನ್ನ ಮನೆಯವರೆಗೆ ವ್ಯಾಪಿಸಿರುವುದೂ ಗೊತ್ತು. ಎಷ್ಟು ಯೋಚಿಸಿದರೂ ಆ ವಿಚಿತ್ರ ಜಗತ್ತಿನ ಪ್ರಯೋಜನ, ಉಪಯೋಗ, ಉಪಾದಾನ ಒಂದೂ ಅರ್ಥವಾಗದ ವಿಷಯ. ಮೇಲಾಗಿ, ಯಾವ ಮೂಲೆಯಲ್ಲೇ ಆಗಲಿ, ಯಾರಾದರೂ ಒಂದು ವಿಚಿತ್ರ ಆಟ ಹೂಡಿದರೆ ಅದಕ್ಕೆ ಪ್ರತಿಯಾಗಿ ಎಲ್ಲಾ ಕಡೆಯೂ ಅಂಕದ ಕೋಳಿಗಳಂತೆ ಪಂದ್ಯಕ್ಕೆ ಇಳಿಯುವುದಂತೂ ಆಶ್ಚರ್ಯ....ಆ ಮರುಳುತನಕ್ಕಾಗಿ ಎಷು ನಕ್ಕರೂ ಸಾಲದು ಎಂಬಷ್ಟು ಪರಿಹಾಸ.

ಇನ್ನು ಸಂಸಾರವನ್ನು ಕುರಿತು ಬಣ್ಣಿಸುವುದಾದರೆ :

ಪ್ರಥಮ ಪತ್ನಿ ಸೀತಮ್ಮ....ಆಕೆಯನ್ನು ಪಾಣಿಗ್ರಹಣ ಮಾಡಿಕೊಂಡಾಗ ಉಂಟಾದ ಆನಂದಾನುಭೂತಿ ಒಮ್ಮೆಗೇ ಆತನನ್ನು ಅಂಬರಕ್ಕೇರಿಸಿತ್ತು. ಅಕ್ಷರ ಜ್ಞಾನವಿಲ್ಲದ ಮುಗ್ಧೆ. ಎಣೆಯಿಲ್ಲದ ದುಡಿಯುವ 'ಯಂತ್ರ'. ಅಲ್ಲಿಂದಿಲ್ಲಿಗೆ ಜಿಂಕೆಯಂತೆ ಹಾರಾಡುತ್ತ ಚಾಚೂ ತಪ್ಪದಂತೆ ಕೆಲಸ ನಿರ್ವಹಿಸಿ, ನಾಲ್ಕು ಮಕ್ಕಳನ್ನು ಸಂಸಾರಕ್ಕೆ ನೀಡಿ, ಐದನೆಯ ಶಿಶುವನ್ನು ಗರ್ಭದಲ್ಲಾಂತು ಬೆಳಕು ಕಾಣುವ ಮುನ್ನ ಹಾಯಾಗಿ ಕಣ್ಮುಚ್ಚಿದಳು. ಜೀವನದಲ್ಲಿ ಆಸೆ-ಅಭಿಲಾಷೆ-ಧ್ಯೇಯ ಮತ್ತೊಂದು ಮಗದೊಂದು ಅವಳ ಬಳಿ ಸುಳಿದಿರಲಿಲ್ಲ.

ಮುಸುರೆ ತೊಳೆಯುತ್ತ ಏಕಾದಶಿ ಮುಂತಾದ ವ್ರತಗಳನ್ನು ನಿಯಮಬದ್ಧವಾಗಿ ಆಚರಿಸುತ್ತ ಸಂಸಾರ ಬಂಧವನ್ನು ವ್ಯಥೆಯಿಲ್ಲದೆ ಹರಿದುಕೊಂಡ ಮಾನಿನಿ.

ಅನಂತರ,

ಎರಡನೆಯ ಮದುವೆ... ವಂಶೋದ್ಧಾರಕ್ಕೆ ನಾಲ್ಕು ಮಂದಿ ಮಕ್ಕಳಿದ್ದಾರೆ ಮತ್ತೇಕೆ ಮರುಮದುವೆ? ಎಂದರು ಕೆಲವರು. ಆದರೆ ಹೆಣ್ಣಿಲ್ಲದೆ ಸಂಸಾರ ನಿರ್ವಹಣೆ ಕಷ್ಟ. ಖಂಡಿತ 'ಮಾಡಿಕೊ' ಹುಡುಗಿ ಹತ್ತಿರದ ಸಂಬಂಧ. ಹೊತ್ತಿಗೂ ಗತಿಯಿಲ್ಲದ ಬಡಕುಟುಂಬ. ಕೈಹಿಡಿದು ಉದ್ಧರಿಸುವುದು ನಿನ್ನಂತಹವರ ಧರ್ಮ; ಸಂಕೋಚಿಸಲೇ ಬೇಡ. ಎಂದು ಹಿತವಾದ ಹೇಳಿದವರೇ ಬಹಳ. ಅಂತಲೇ ಅನುಭವಿಯೂ, ಸಂಪ್ರದಾಯಸ್ಥನೂ ಆದ ನರೋತ್ತಮನಿಗೆ ಧಾರಾಪೂರ್ವಕವಾಗಿ ಕನ್ಯಾದಾನ ಮಾಡಿ ಏಳೇಳು ಜನ್ಮಗಳ ಪುಣ್ಯವನ್ನು ಕಟ್ಟಿಕೊಂಡರು–ಆ ಹೆಣ್ಣು ಹೆತ್ತವರು. ಆಕೆಯಲ್ಲಿ 'ಯೌವ್ವನ' ಎಂಬುದೇನೋ ಇತ್ತು. ಅದರ ಉಷ್ಣೋಷ್ಣ ತೀಕ್ಷ್ಣತೆಗೆ ಬಹುವಾಗಿ ನಾಚಿಕೊಳ್ಳುತಿದ್ದುದೂ ಉಂಟು. ನಿರ್ಭಾಗ್ಯ ಜೀವನ ಆಕೆಗೆ ಅಂತಹ ಸುಖವನ್ನೇನೂ ಪ್ರಸಾದಿಸಲಿಲ್ಲ. ಹತ್ತಾರು ವರ್ಷಗಳ ಬಾಳ್ವೆಯ ಕರ್ಮಕಾಂಡದಲ್ಲಿ ಆಕೆ ಚೇತರಿಸಿಕೊಂಡುದುದೂ ಸಹ ವಿಶೇಷವೇ. ಪರಂಪರಾಗತವಾಗಿ ಹುಟ್ಟಲಾರದೆ ಹುಟ್ಟುತಿದ್ದ ಹಸುಗೂಸುಗಳಿಗೆ ಜನ್ಮಕೊಟ್ಟು ಒಂದನ್ನೂ ದಕ್ಕಿಸಿಕೊಳ್ಳಲಾರದೇ ಹೋದರೂ ಅದರಿಂದ ಅಂತಹ ದುಃಖವನ್ನೇನೂ ಆಕೆ ಹೊಂದಲಿಲ್ಲ. ಮೊದಲ ಸಂಸಾರದಲ್ಲಿ ಸಂಜನಿಸಿದ ನಾಲ್ವರು ಮಕ್ಕಳಲ್ಲಿ ಮೊದಲಿಗರಾದ ಇಬ್ಬರು ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸುವ ತೊಂದರೆಯನ್ನೂ ತೆಗೆದುಕೊಳ್ಳದೆ ಸಮಯಕ್ಕೊದಗಿದವರು 'ಸಭ್ಯ'ರೆಂದು ಕನ್ಯಾದಾನ ಮಾಡಿ ಜನ್ಮಜನ್ಮಾಂತರಗಳ ಪುಣ್ಯವಿಶೇಷದಿಂದ ತಮ್ಮ ಜವಾಬ್ದಾರಿಯನ್ನು ಕಳೆದುಕೊಂಡಿದ್ದರು ದಂಪತಿಗಳು. ನವಯುಗಧರ್ಮಕ್ಕನುಸಾರವಾಗಿ ಗಂಡು ಹುಡುಗರು ಶಾಲಾ ಕಾಲೇಜುಗಳನ್ನು ಸೇರಿದಾಗ ಅದೃಷ್ಟವಶಾತ್ ವಿದ್ಯಾರ್ಥಿವೇತನ ತುತ್ತತುದಿಯವರೆಗೂ ಬೆಂಬಲಿಸಿ ಉದ್ಧರಿಸಿತ್ತು. ಆದರೂ ಸಹ ಬಾಳಿನ ಸಂಜೆಯಲ್ಲಿ ಸತೀ ಸಹಧರ್ಮಿಣಿಯು ಹೊಂದಿರುವ 'ಆಸ್ತಿ' ಎಂದರೆ ಒಂದು ಮುರುಕು ಮರದ ಪೆಟ್ಟಿಗೆ. ಅದರಲ್ಲಿ ಒಂದೆರಡು ರಂಗು ಮಾಸಿದ ಸೀರೆ ರವಿಕೆಗಳು

ಹಲ್ಲು ಮುರಿದ ಬಾಚಣಿಗೆಗಳು, ಒಂದು ಸಣ್ಣ ಕನ್ನಡಿ: ಎಂದಾದರೊಮ್ಮೆ ಬಯಕೆಯಾದರೆ ಅವನ್ನೇ ಉಟ್ಟು-ತೊಟ್ಟು ದೇವಸ್ಥಾನದ ಕಡೆಗೋ, ಹರಿ ಕಥೆಯ ಕಡೆಗೋ ಹೋಗಿ ಬಂದರೆ ಅದೇ ಒಂದು ಬಗೆಯ ಸ್ವಾಸ್ಥ್ಯ ಮತ್ತು ಮನರಂಜನೆ. ಸಂಪೋಷಣೆ ದೊರೆಯದ ದೇಹ ಪ್ರಕೃತಿ ಅಕಾಲದಲ್ಲೇ ಜೀರ್ಣ ತಗೊಂಡು ಕೂದಲು ನೆರೆತು ಬೆಳ್ಳಿಯ ಮುಗುಟ ಧರಿಸಿತ್ತು.

ರಾಮಕೃಷ್ಣರಾಯ ಎಂದೂ ಧೃತಿಗೆಡಲಿಲ್ಲ ಎಂದೇನಿಲ್ಲ. ಜೀವನದು ದ್ದಕ್ಕೂ ಅನುಭವಿಸಿದ ಕಷ್ಟ ಪರಂಪರೆಗಳು-ರೋಗ ರುಜಿನಗಳ ಹಾವಳಿ-ಮಾರಣಹೋಮ ಇವುಗಳಿಂದಾಗಿ ಎಷ್ಟೋ ವೇಳೆ ಕಂಬನಿಗರೆಯುತ್ತಲೇ ಪಾಠ ಹೇಳುವ ಪ್ರಸಂಗ ಒದಗುತಿತ್ತು. ಭಾರತೀಯ ವಿದ್ಯೆ ಪ್ರತಿಪಾದಿಸಿರುವ ಕರ್ಮಫಲ ಹಾಗೂ ಪುನರ್ಜನ್ಮದ ಸಿದ್ಧಾಂತ ರಕ್ತಗತವಾಗಿದ್ದುದರಿಂದ ಮರು ಘಳಿಗೆಯಲ್ಲಿ ತನ್ನನ್ನು ತಾನೇ ಸಾವರಿಸಿಕೊಳ್ಳುವ. ಪುರಾಣ ಪ್ರಥಿತ ಗ್ರಹ ದೇವತೆಗಳ ಆರಾಧನೆ ದಿನಚರಿಗೆ ಕ್ವಚಿತ್ತಾಗಿ ಅಳವಟ್ಟಿತು. ಅದರಿಂದ ಗ್ರಹ ಮೈತ್ರಿ ಲಭಿಸಲಿ ಅಥವಾ ಲಭಿಸದಿರಲಿ ಕೃತಕೃತ್ಯತೆಯ ಫಲವಾಗಿ ಶಾಂತಿ ಸಮಾಧಾನಗಳು ಮೂಡುತಿದ್ದುವು. ಆತ ಆಶ್ವಸ್ತನಾಗುತಿದ್ದ.

ಹುಡುಗರಿಬ್ಬರೂ ವಿದ್ಯಾರ್ಥಿ ಜೀವನ ಮುಗಿಸಿದಾಗ ಸಂಭ್ರಮದಿಂದ ಹೃದಯಸ್ತಬ್ಧವಾದುದುಂಟು. ಉಸಿರು ಬಿಗಿ ಹಿಡಿದು ಅಂದಿನವರೆಗೂ ಉಂಡಿದ್ದ ಸಮಸ್ತ ಕ್ಷೋಭೆಯನ್ನು ಒಂದೇ ಬಾರಿಗೆ ತೊಳೆದುಬಿಟ್ಟಿದ್ದ. ಹಿರಿಯವ ಬ್ಯಾಂಕಿನಲ್ಲಿ ಗುಮಾಸ್ತನಾಗಿ ವಿಧೇಯಕ ಹೊಂದಿದಾಗ ಜೀವ ನಿರಾಳವಾಗಿ ಉಸಿರಾಡಿತ್ತು. ಎರಡನೆಯವ ನ್ಯಾಯವಾದಿ ಎನಿಸಿ ಕರಿಯ ಕೋಟು ತೊಟ್ಟಾಗ ತನಗೂ ಸ್ವರ್ಗಕ್ಕೂ ಮೂರೇ ಗೇಣು ಎಂಬಷ್ಟು ಅದ್ಭುತ ಮದ ಧಾರೆ ಮನವನ್ನು ಆವರಿಸಿತ್ತು. ಅಂದಿಂದಿಗೂ ಆತನ ಬಗ್ಗೆ ಅತೀವ ಹೆಮ್ಮೆ. ತನ್ನ ವಂಶಾವಳಿಯಲ್ಲಿ ಆತನೇ ಮೊದಲ ನ್ಯಾಯಶಾಸ್ತ್ರಕೋವಿದ. ಅದೇ ನೇರಕ್ಕೆ ಅತ ತನ್ನ ಯಾವ ಸಂಪ್ರದಾಯವನ್ನೂ ಅನುಸರಿಸುತ್ತಿಲ್ಲ ಎಂಬ ಮನಃಕ್ಷೋಭೆಯೂ ಇಲ್ಲದಿಲ್ಲ. ಮೇಲಾಗಿ ತನಗೆ ಸಲ್ಲಬೇಕಾದ ಗೌರವಾದರಗಳು ಸಲ್ಲುತ್ತಿಲ್ಲ ಎಂಬ ಕೊರಗು. ಈ ಜೀವ ಸೋತಮೇಲೆ ಅದರ ಕತೆಯೇನೋ ಎಂಬ ಚಿಂತೆ. ಇಂತಿಂತ ಸುಖ-ದುಃಖಗಳ ಕತ್ತಿಯಲುಗು ಕರುಳಿನ ಮೇಲೆ ಅವ್ಯಾಹತವಾಗಿ ಹರಿದಾಡುವುದು. ಇದುವರೆಗೆ ಯಾರಿಗೂ ತಲೆ

ಬಾಗುವ ಪ್ರಸಂಗ ಬಂದಿರಲಿಲ್ಲ. ಮುಂದೆಯೂ ಅದು ಬರಬಾರದು ಎಂಬ ಆಶಯ. ಬಾಳಿನ ಅಂತ್ಯದವರೆಗೆ ಇಂತೆಯೇ ಲವಲವಿಕೆಯ ಜೀವನ ನಡೆಸಬೇಕು ಎಂಬ ದೃಢ ಸಂಕಲ್ಪ.

ಅಂದಮೇಲೆ....!

ನವಯುಗಧರ್ಮವನ್ನರಿತು ನಾಗರಿಕತೆಯ ಹೊಸ್ತಿಲೇರಿ ಉಚ್ಛೃಂಖಲ ಪೌರುಷಮೋಹಿನಿಯಾದ ವಿದ್ಯಾಪಾರಂಗತ ಭಾವೀ ಸೊಸೆ ಮುಂದೆ ಯಾವ ರೀತಿ ತನ್ನನ್ನು ಕಾಣುವಳೋ ಎಂಬ ಆಶಂಕೆ ಮನವನ್ನು ಕೊರೆಯುವ ಕೀಟದಂತೆ ಅಂಟಿತ್ತು. ಅಂತಲೇ ಆಕೆಯಮೇಲೆ ಎಲ್ಲಿಲ್ಲದ ಗಮನ.... ಸೂಕ್ಷ್ಮದೃಷ್ಟಿ.

ಅದೇ ನೇರಕ್ಕೆ ಆ ತೀಕ್ಷ್ಣ ಬುದ್ಧಿಯ ವ್ಯಕ್ತಿಯೊಡನೆ ಯಾವ ರೀತಿ ಮಾತು ಆರಂಭಿಸಬೇಕೆಂಬುದೇ ಹೊಳೆಯಲಿಲ್ಲ ವಿಮಲಳಿಗೆ. ಇನ್ನೊಮ್ಮೆ ಆತನ ಟೀಕೆಗೆ ಒಳಗಾಗುವುದು ಬೇಡವಾಗಿತ್ತು. ಹಾಗೇ ಕರುಣಗಂಭೀರ ದೃಷ್ಟಿಯಿಂದ ನೋಡುತ್ತ ನಿಂತು ಬಿಟ್ಟಳು.

"ಏನಮ್ಮಾ, ಹೇಗಿದ್ದಿ ?" ಎಂದ ರಾಮಕೃಷ್ಣರಾಯ ಅವಳು ಉತ್ತರಿಸುವುದರೊಳಗಾಗಿ ತಾನೇ ಪುನಃ ಮುಂದುವರಿದ "ಇನ್ನು ಅತೀತ ಯುಗಧರ್ಮಕ್ಕನುಗುಣವಾಗಿ ನಿನ್ನ ಬದುಕನ್ನು ರೂಪಿಸಿಕೊಳ್ಳಲಿದ್ದಿ. ನಿನ್ನ ಆತ್ಮಾಭಿಮಾನಕ್ಕೆ ಅದೊಂದು ದಿವ್ಯ ಶೋಭೆ. ಸಹಜ ಅನುಭಾವ ಜೀವನರಂಗಕ್ಕೆ ಭೂಷಣವಾಗಬಹುದು."

"ನಿಮ್ಮ ಕೃಪಾ ಬಲದಿಂದ...."

"ಜೀವನವಾಹಿನಿ ಸದಾ ಹರಿಯಬೇಕು ನಿಜ. ಆದರೆ ಪ್ರಳಯ ಪೂರವಾಗಬಾರದು."

"ದಿಟ."

"ನಮ್ಮ ಸಂಸ್ಕೃತಿ ಅದಕ್ಕೆಲ್ಲಾ ತಡೆ ಬಂಡೆ."

"ಗೊತ್ತು" ಎಂಬಂತೆ ಸಣ್ಣಗೆ ತಲೆದೂಗಿದಳು ವಿಮಲ. ಚೆಂದುಟಿಗಳ ಮೇಲೆ ಆರ್ದ್ರಮಂದಹಾಸ ತೇಲುತಿತ್ತು.

"ಈಗ ನನ್ನನ್ನು ನೋಡಿದರೆ ನಿನಗೆ ಪರಿಹಾಸ ಮೂಡುವುದಿಲ್ಲ ಅಲ್ಲವೇ ?"

"ಇಲ್ಲ, ಇಲ್ಲ." ಒಳಗಿಂದೊಳಗೇ ನಾಲಿಗೆ ಕಚ್ಚಿದಳು.

ರಾಮಕೃಷ್ಣರಾಯ ಕನಿಕರದಿಂದ ಸಿಟ್ಟಿಸಿದ. ರೂಕ್ಷ ತುಟಿಗಳಲ್ಲಿ ಶುಷ್ಕ ನಗು ಅರಳಿತು. ತುಟಿಗಳನ್ನು ನಾಲಿಗೆಯಿಂದ ಒರಿಸಿಕೊಂಡು ಸರಳವಾದ ದನಿಯಲ್ಲಿ ಮುಂದುವರಿದ "ನಾನು ನಿನ್ನನ್ನು ಹೀಯಾಳಿಸುತಿಲ್ಲಮ್ಮ. ಎಷ್ಟೋ ಸಂಸಾರಗಳಲ್ಲಿ ಈಗಿನ ಕಲಿತ ಹುಡುಗಿಯರಿಗೆ ನಮ್ಮಂತಹವರನ್ನು ಕಂಡರೆ ತುಂಬ 'ತಾತ್ಸಾರ' ಇರುವುದನ್ನು ಸ್ವಂತ ಕಣ್ಣುಗಳಿಂದ ಕಂಡಿರುವೆ. ಅದಕ್ಕೇ ಹೇಳಿದೆ....ಇನ್ನೇನೂ ಇಲ್ಲ."

"ಬೇರೆಯವರ ವಿಚಾರ ನಮಗೇಕೆ ಹೇಳಿ?" ನಮ್ರತೆಯಿಂದ ನುಡಿದಳು ವಿಮಲ.

"ಈ ಕಲಿಯುಗದ ವಿಚಾರ ನೋಡಿನೋಡಿ ಮನಸ್ಸು ಕೆಟ್ಟಿದೆ. ಬಹುಶಃ ನಿನಗೂ ಅದೆಲ್ಲ ಅರ್ಥವಾಗಿರಬಹುದು."

"ಹೌದು...." ಸರಳವೂ ಅಮಾಯಕವೂ ಆದ ಸ್ವರ ಅಲ್ಲಿಗೇ ತುಂಡುಗಡಿಯಿತು. ಮುಂದೆ ಮಾತು ಹೊರಡಲಿಲ್ಲ.

"ಹುಟ್ಟಿನಿಂದಲೂ ಕಷ್ಟಸುಖಗಳಲ್ಲಿ ತೊಳಲಿ ಬಳಲಿ ಪರಿಪಕ್ವವಾದ ಅನುಭವ ಹೊಂದಿ ಈ ವೃದ್ಧಾಪ್ಯದಲ್ಲಿ ಕಾಲಿಡುತಿದ್ದೇನಮ್ಮ. ಈ ಜನ್ಮದ ಆಳ ಅಷ್ಟಿಷ್ಟಲ್ಲ. ಅನುಭವ ಎಂಬುದು ಇಲ್ಲಿ ಹೆಪ್ಪುಗಟ್ಟಿದೆ" ಎನ್ನುತ್ತ ಹಣೆಯನ್ನು ಮುಟ್ಟಿತೋರಿದ. ಮುಖದ ಮೇಲಿನ ಅಸಂಖ್ಯಾತ ರೇಖೆಗಳ ನಡುವೆ ಪ್ರಸನ್ನ ಭಾವ ಮೂಡಿತು.

ವಿಮಲ ಮಾತಾಡಲಿಲ್ಲ. ಒಂದು ರೀತಿಯ ಸಹಜ ಅನುಭಾವ ಅವಳ ಮುಖಮಂಡಲದ ಮೇಲೆ ಆಚ್ಛಾದಿತವಾಗಿತ್ತು. ಅದನ್ನು ಅತಿಕ್ರಮಿಸಿ ಮರ್ಮಾಂತರ ನಿವೇದನೆಯನ್ನು ತಿಳಿಯುವುದಂತೂ ಆಗದು. ಆದರೂ ಅವಳ ಮೌನವನ್ನು ಗಮನಿಸಿ ರಾಮಕೃಷ್ಣರಾಯ ಮುಂದುವರಿದ "ನೀನೀಗ ನನ್ನನ್ನು ಸ್ವಲ್ಪಸ್ವಲ್ಪವಾಗಿ ಅರಿತುಕೊಂಡಂತೆ ತೋರುತ್ತೆ. ಬೇಷ್! ಇಲ್ಲಿ ಕೇಳು, ಚಿನ್ನವನ್ನು ಅಲಕ್ಷಿಸಿದರೂ ಅದರ ಬೆಲೆ ಕಡಿಮೆಯಾಗುವುದಿಲ್ಲ. ತಿಜೋರಿಯಲ್ಲೇ ಇಡು; ಅಥವಾ ತಿಪ್ಪೆಯಲ್ಲಾದರೂ ಬಿಸಾಡು. ಎಲ್ಲಿದ್ದರೂ ಅದು ಚೊಕ್ಕವೇ."

ವಿಮಲ ನಸುನಕ್ಕು ಹಾಲು ಹಣ್ಣುಗಳನ್ನು ಜೋಡಿಸಿ ತಂದು ಮುಂದಿಟ್ಟಳು.

ರಾಮಕೃಷ್ಣರಾಯ ಬರೀ ಹಾಲನ್ನು ತೆಗೆದುಕೊಂಡು ಸ್ವಲ್ಪ ಸ್ವಲ್ಪವಾಗಿ ಹೀರುತ್ತ ಅಂದ,

"ನಾನು ಮಾತಾಳಿಯೇನೋ ಹೌದು. ಆದರೆ ಅದೆಲ್ಲ ಬರೀ ಮಾತಿನ ಚಟವಲ್ಲ. ಇದ್ದದ್ದನ್ನು ಹೇಳುತ್ತಿರುವೆ. ನೀನು ನಮ್ಮ ವಿಚಾರದಲ್ಲಿ ತಿಳಿದುಕೊಳ್ಳಬೇಕಾದುದೂ ಬಹಳ ಉಂಟು."

"ಹೇಳಿ, ನೀವು ಏನು ಹೇಳಿದರೂ ಕೇಳಲು ಸಿದ್ಧ"

ಬಿಸಿಯನ್ನು ತಟ್ಟೆಯಲ್ಲಿಟ್ಟು ಒಳಗಡೆಯೆಲ್ಲಾ ಒಮ್ಮೆ ದೃಷ್ಟಿಯನ್ನು ಹೊರಳಿಸಿ "ನೀನು ಒಬ್ಬಳೇ ಇದ್ದಂತಿದೆ ?" ಅವರೆಲ್ಲ ಎಲ್ಲಿ ?" ಎಂದ.

"ಮಾರ್ಕೆಟ್ಟಿಗೆ ಹೋಗಿದ್ದಾರೆ."

"ಪ್ರಾಯಶಃ ಹಿಂದಿರುಗಿ ಬರಲು ನಿಧಾನವಾಗುತ್ತದೆ, ಅಲ್ಲವೇ ?"

"ಆಗಬಹುದು ಎಂದು ತೋರುತ್ತೆ."

ಅವಳು ಬಿಸಿ ಬಟ್ಟಲುಗಳನ್ನು ತೆಗೆದುಕೊಳ್ಳಲು ಮುಂದಾಗುತ್ತಲೂ ರಾಮಕೃಷ್ಣರಾಯ ನುಡಿದ,

"ಈ ದೇಶದಲ್ಲಿ ಯಾವುದಕ್ಕೆ ಕೊರತೆ ಬಂದರೂ ಅತಿಥಿ ಸತ್ಕಾರಕ್ಕೆ ಕೊರತೆ ಬರುವುದಿಲ್ಲಮ್ಮಾ, ಅದಕ್ಕೇ ಈ ವೃದ್ಧಜೀವ ಎಲ್ಲಿಗೆ ಹೋದರೂ ಅಲ್ಲಿ ಅಮೃತಪಾನ ದೊರೆಯುತ್ತದೆ....ಅದು ಮಾತ್ರವಲ್ಲ. ಅದಕ್ಕೂ ಲಭ್ಯವಿರಬೇಕು, ಅಲ್ಲವೇ ?"

"ಹೌದು....!"

"ನನ್ನ ಅಂತರಂಗದಿಂದ ಅಭಿಮಾನವೆಂಬ ನದೀ ಪ್ರವಾಹ ಎರಡೂ ದಡಗಳನ್ನು ಮೀರಿ ಹರಿಯುತ್ತದೆ. ಆದರೆ, ಅದನ್ನು ಬೂಟಾಟಿಕೆ ಅಂದುಕೊಳ್ಳಬೇಡ. ಕ್ರಮಬದ್ಧವಾಗಿ ಜೀವನ ನಡೆಸಿಕೊಂಡು ಬಂದಿರುವುದೇ ಅದಕ್ಕೆ ಸಾಕ್ಷಿ. 'ರಾಧೇಶ್ಯಾಂ' ಅದರ ಪ್ರತಿಫಲ ಎಂದರೆ ಒಪ್ಪಿಕೊಳ್ಳುತ್ತೀಯಷ್ಟೆ ?"

"........"

ವಿಮಲ ಮುಗುಳುನಕ್ಕು ಒಂದೆರಡು ಘಳಿಗೆ ಯೋಚಿಸಿ ಸುಮ್ಮನಾದಳು. ಏನೆನ್ನಬೇಕೋ ಹೊಳೆಯಲಿಲ್ಲ. ಆತ ಮೊದಲೇ ಹೇಳಿದಂತೆ ಆತ್ಮ ಪ್ರವಾಹದ ಅಲ್ಲೋಲ ಕಲ್ಲೋಲ ಧ್ವನಿ ಎರಡೂ ಕಿವಿಗಳು ಮುಚ್ಚಿಹೋಗುವಷ್ಟು

ಸಂಭ್ರಮದಿಂದ ಕೂಡಿದ್ದುದು ಅನುಭವಕ್ಕೆ ಬಂದಿತು. ಆಲೋಚನಾ ಜಗತ್ತು ಆ ಅದ್ಭುತ ವಿಚಾರದಿಂದ ತುಂಬಿಹೋಗಿತ್ತು. ಮಿನುಮಿನುಗುವ ನಯನ ದೀಪ್ತಿಯಲ್ಲಿ ಕೃತಜ್ಞತೆ-ಭರವಸೆಗಳು ನಲಿದಾಡುತಿದ್ದುವು. ಆಕೆ ಔಪಚಾರಿಕ ವಾಗಿಯಾದರೂ ಎರಡು ಮಾತು ಹೇಳೋಣವೆಂದು ಪ್ರಯತ್ನಿಸಿ ತನ್ನಿಂದ ಸಾಧ್ಯವಾಗದೆ ಸುಮ್ಮನಾದಳು.

ರಾಮಕೃಷ್ಣರಾಯ ಅವಳ ಮೌನಭಾರವನ್ನು ಗಮನಿಸಿದರೂ ಲಜ್ಜಾ ವಿಶೇಷವೆಂದುಕೊಂಡು ಎಂದಿನ ನಿತಾಂತ ಉತ್ಸಾಹದಿಂದ ಮುಂದುವರಿದ "ನಿಜಕ್ಕೂ ಹೇಳುವುದಾದರೆ ಈ ಎರಡೂ ಕಣ್ಣುಗಳು ಬೆಳಗುತ್ತಿರುವುದೇ ಆ ಮಗನಿನಾಗಿ. ಆತನ ಮೇಧಾಶಕ್ತಿ ಅದ್ಭುತ. ಭಗವಂತನ ಅಕ್ಷಯ ಪಾತ್ರೆಯನ್ನು ಬರಿದು ಮಾಡಿಯೇ ಈ ಭೂಲೋಕಕ್ಕೆ ಬಂದಿದ್ದಾನೆ ಎಂದರೆ ಕಂಡವರು ಇದು ಉತ್ಪ್ರೇಕ್ಷೆಯಲ್ಲ ಯಥಾರ್ಥವಾದ ವಿಚಾರ ಎಂದು ಹೇಳಿಯಾರು.... ಈ ವಿಚಾರದಲ್ಲಿ ನೀನು ತುಂಬ ಭಾಗ್ಯವಂತೆ ದೀರ್ಘ ಸುಮಂಗಲಿಯಾಗು!" ಎಂದು ಮತ್ತೊಮ್ಮೆ ಬಾಯಿ ತುಂಬ ಹರಸಿ ಎದ್ದು ನಿಂತ. ಆನಂದೋತ್ಸಾಹ ದಿಂದ ನರನರಗಳೂ ಉಲ್ಲಸಿತವಾಗಿದ್ದುವು. ಬಚ್ಚುಬಾಯಿನ ಒಳ ಪ್ರಪಂಚವ ನ್ನೆಲ್ಲಾ ಪ್ರದರ್ಶಿಸಿ ವಿಜಯದ ವೈಜಯಂತಿಯಂತೆ ವಿಶ್ವಸ್ತಭಾವದಿಂದ ಹೇಳಿದ "ನಾನಿನ್ನು ಹೊರಡುವೆ.... ಬಹುಶಃ ಇಲ್ಲಿ ಬಹಳ ಹೊತ್ತು ಕಳೆದೆ ಎನಿಸುತ್ತೆ. ಎಷ್ಟೋ ವೇಳೆ ಹೊತ್ತುಗೊತ್ತು ಎಲ್ಲಾ ಮರೆತುಬಿಡುವೆ.... ಹೆಚ್ಚು ಮಾತಾ ಡುವುದೂ ಉಂಟು. ಈ ವೃದ್ಧಾಪ್ಯ ಯಾರಿಗೂ ತಪ್ಪಿದ್ದಲ್ಲ. ಬೇಸರಪಟ್ಟು ಕೊಳ್ಳಬೇಡಮ್ಮಾ!"

"ಇಲ್ಲ.... ಅಂತಾದ್ದೇನೂ ಇಲ್ಲ."

ಅವನು ಮೆಟ್ಟಲಿಳಿದ. ವಿಮಲ ಅಲ್ಲಿಯವರೆಗೂ ಹೋಗಿ ಅತ್ಯಂತ ವಿನಮ್ರತೆಯಿಂದ ಬೀಳ್ಕೊಟ್ಟಳು. ದೂರದ ತಿರುವಿನಲ್ಲಿ ಮರೆಯಾಗುವವರೆಗೂ ನೋಡಿತು ಕೌತೂಹಲಭಾವತುಂಬಿದ ದೃಷ್ಟಿ. ಆತನ ಅಮಾಯಕ ಮುಗ್ಧ ವಾಗ್ಧಾರೆ ಕಿವಿಯಲ್ಲಿ ಪ್ರತಿಧ್ವನಿಸುತ್ತಲೇ ಇತ್ತು. ಅಲ್ಲಿಂದ ಹೆಜ್ಜೆ ತೆಗೆಯದೆ ಆ ಚಿಂತಾಪ್ರಾಕಾರದಲ್ಲಿಯೇ ವಿಚರಿಸುತ್ತ ಅದೆಷ್ಟು ಹೊತ್ತು ನಿಂತಿದ್ದಳೋ.

ದೂರದ ವೃಕ್ಷಶಿಖೆಯಲ್ಲಿ ಹುದುಗಿ ಕುಳಿತ ಕೋಗಿಲೆಯು ಸಂಧ್ಯಾ

ಶಾಂತಿಯ ಹೆಜ್ಜೇನು ಹೊಯ್ದಂತೆ ಸಂಭ್ರಮಯುಕ್ತ ವಾಣಿಯಲ್ಲಿ ಮತ್ತೆ ಮತ್ತೆ ಆಲಾಪನೆಗೈಯ್ಯುತಿತ್ತು. ಆ ಗಾನಮಾಧುರ್ಯ ವೈನವಿರೇಳಿಸುವಂತಿದ್ದರೂ ಮನಸ್ಸು ವಿಮುಖವಾಗಲಿಲ್ಲ. ಹೃದಯಾಂತರಾಳದಲ್ಲಿ ಯಾವುದೋ ಕಾಣದ ಕೈ ರಾಗಾರುಣತಾನವನ್ನು ಒಮ್ಮೆಗೇ ನೂರಾರು ತಂತಿಗಳಲ್ಲಿ ಮಿಡಿಯುತಿತ್ತು. ಕೋಗಿಲೆಯ ಗಾನ ಮಾಧುರ್ಯಕ್ಕಿಂತಲೂ ಮಿಗಿಲಾಗಿ.

ಅದೇ ವೇಳೆಗೆ ಪ್ರಸನ್ನ ಮೋಹಿನಿ ಆಗಮಿಸಿದರು. ಒಳ ಬಂದಮೇಲೆ ಸುತ್ತಲೂ ಕಣ್ಣಾಡಿಸಿ "ಅಮ್ಮ-ನಿರ್ಮಲ ಎಲ್ಲಮ್ಮಾ?" ಎಂದ ಪ್ರಸನ್ನ.

"ಮಾರ್ಕೆಟ್ಟಿಗೆ ಹೋಗಿದ್ದಾರೆ."

ಮೋಹಿನಿ ಪರಿಹಾಸ್ಯಪೂರ್ಣ ಸ್ವರದಲ್ಲಿ ಪ್ರಶ್ನಿಸಿದಳು,

"ಒಬ್ಬಳೇ ಏನು ಮಾಡುತಿದ್ದೆ? ರಾಧೇಶ್ಯಾಮನನ್ನಾದರೂ ಬರಮಾಡಿಕೊಂಡಿದ್ದಿದ್ದರೆ....?"

"ಅಷ್ಟೇಕೆ? ಅವರ ತಂದೆಯೇ ಇಷ್ಟೊತ್ತೂ ಇಲ್ಲಿ ಇದ್ದು ಹೋದರು!" ಎಂದಳು ಅವಳು. ವೀಣಾಮಾಧುರ್ಯ ಕಂಠಸ್ವನದಲ್ಲಿ ಸ್ಫುರಿಸಿತು.

ಒಡನೆ ಮೂವರ ಮುಖದಲ್ಲೂ ನಗುವಿನ ಲಹರಿ ಉಕ್ಕಿ ಹರಿಯಿತು.

೩೧

ನೀಲ ಗಗನಾಂಗಣದಲ್ಲಿ ವಿಹರಿಸುವ ನಿರ್ಜಲ, ನಿರ್ಭಾರ ಮೇಘಗಳ ರಾಶಿ ರಾಶಿ.

....ಭಾಸಮಾನ ತಡಿಯಲ್ಲಿ ಅಮೃತಾಂಶುವಿನ ಅನನ್ಯ ಅನುಪಮ ಅಮೃತಧಾರೆ!

ನಿರ್ಮಲೆಯು ಬೆಳುದಿಂಗಳಲ್ಲಿ ಮಿಂದು ರಜತಸಲಾಕೆಯಂತೆ ನಿಶ್ಚಲವಾಗಿ ನಿಂತು ನೋಟವನ್ನು ಪೂರ್ಣಚಂದ್ರನ ಮಹಿಮಾಮಯ ಬಿಂಬದೆಡೆಗೆ ಹರಿಯಬಿಟ್ಟಳು. ಹೃದಯಾಂತರಾಳದಲ್ಲಿ ಘುಮುಘುಮಿಸುವ ವಿಚಾರವಾಹಿನಿ ಹೃದಯತಂತುಗಳನ್ನು ಸೀಳುವಂತೆ ಹರಿದಾಡುತಿತ್ತು. ಹೊತ್ತು ಇನ್ನೂ ಏಳರ ಅಂಚನ್ನು ಮುಟ್ಟಿರಲಿಲ್ಲ. ಒಡಗಡೆ ತಾಯಿ ಯಾವುದೋ ವ್ಯಂಜನಕ್ಕೆ ಒಗ್ಗರಣೆ ಹಾಕಿದ ಸದ್ದು ಕೇಳಿಸಿತು. ಒಳ ಹೋಗಿ ಆಕೆಗೆ ಏನಾದರೂ ಸಹಾಯ

ಮಾಡೋಣವೆನ್ನಿಸಿದಾಗಲೇ ವಿಮಲ ಆಗಮಿಸಿದಳು. ಅವಳು ಪತಿಗೃಹಕ್ಕೆ ತೆರಳಿ ಆಗಲೇ ಎರಡು ವಾರಗಳು ಸಂದಿದ್ದುವು. ಸಂತೋಷವೇ ಮೈವೆತ್ತು ಬಂದಂತೆ ಬಂದು ನಿಂತ ಅವಳನ್ನು ನೋಡುತ್ತಲೂ ನಿರ್ಮಲ ಪ್ರೇಮಭರಿತ ಧ್ವನಿಯಲ್ಲಿ ಕೇಳಿದಳು,

"ಏನಮ್ಮಾ ಒಬ್ಬಳೇ ಬಂದೆ ?"

"ಈ ಪ್ರಶ್ನೆಯೇಳುತ್ತೆ ಎಂಬುದು ಗೊತ್ತಿತ್ತು !"

"ವಾಸ್ತವ್ಯ."

"ರಾಧೇಶ್ ಆಫೀಸಿನಲ್ಲಿದ್ದರು. ನಾಳೆ ಜಟಿಲ ಸಮಸ್ಯೆಯಿಂದ ಕೂಡಿದ ಮೊಕದ್ದಮೆಯಿದೆಯಂತೆ. ಅದರ ತಯಾರಿಕೆಯಲ್ಲಿ ಮೂವರು ಲಾಯರುಗಳು ಕೂಡಿ ವಿಚಾರಮಗ್ನರಾಗಿದ್ದಾರೆ. ಒಬ್ಬಳೇ ಕುಳಿತು ಬೇಸರವಾಗಿ ನಾನೇ ಬಂದೆ."

"ಒಳ್ಳೆಯದಾಯಿತು....ನನಗೂ ತುಂಬ ಬೇಸರವಾಗಿತ್ತು."

"ಏಕೆ ? ಅಂತಾದ್ದೇನು ?"

"ಏನೂ ಇಲ್ಲ ; ಸುಮ್ಮನೆ." ಎಂದ ನಿರ್ಮಲ ಪುನಃ ಕೇಳಿದಳು "ನೀವು ಪ್ರವಾಸ ಹೊರಡುವ ವಿಚಾರವೇನಾಯ್ತು ? ಯಾವಾಗ ಹೊರಡುತ್ತೀರಿ ?"

"ಅವರಿನ್ನೂ ನಿರ್ಧರಿಸಿಲ್ಲ. ಬಹುಶಃ ಅದನ್ನು ಕೈಬಿಟ್ಟಂತೆಯೇ."

"ಅದೇಕೆ ?"

"ಅವರಿಗೆ ಬಿಡುವು ಮಾಡಿಕೊಳ್ಳುವುದು ಕಷ್ಟ."

ನಿರ್ಮಲ ತಾಯಿಯನ್ನು ಕುರಿತು ಅಲ್ಲಿಂದಲೇ ಕರೆದಳು "ಅಮ್ಮಾ ! ಓ, ಅಮ್ಮಾ ! ಇಲ್ಲೇ ಬನ್ನಿ ; ಬೆಳದಿಂಗಳು ಚೆನ್ನಾಗಿದೆ !"

ವಿಮಲೆಯೂ ಸಾನಂದದಿಂದ ದನಿಗೂಡಿಸಿದಳು "ಇಲ್ಲೇ ಬನ್ನಿ ಅಮ್ಮಾ !"

ತಾಯಿ ಹೊರಬಂದಳು. ಮುಖಭಾವ ಪ್ರಸನ್ನವಾಗಿತ್ತು. ವಿಮಲೆಯನ್ನು ನೋಡುತ್ತಲೂ ನಿರ್ಮಲ ಯಾವ ಪ್ರಶ್ನೆಯನ್ನು ಕೇಳಿದ್ದಳೋ ಅದೇ ಪ್ರಶ್ನೆ ಸರಾಗವಾಗಿ ಹೊರಬಿತ್ತು.

"ನೀವೂ ಈ ಪ್ರಶ್ನೆ ಕೇಳುತ್ತೀರೆಂದು ನನಗೆ ಗೊತ್ತಿತ್ತು." ನಗುತ್ತ ಉತ್ತರಿಸಿದಳು ವಿಮಲ. ಮನಃಪ್ರಾಣಗಳು ಆನಂದದ ಬೀಡಾಗಿದ್ದುವು.

ವಿನೂತನ ಖಳೆಯಿಂದ ನಯನಗಳು ಶೋಭಿಸುತಿದ್ದುವು.

ವೃದ್ಧೆ ಮರು ಮಾತಾಡದೆ ಮುಗುಳು ನಕ್ಕಳು.

ಗ್ರೀಷ್ಮಕಾಲೀನ ರಾಕೇಂದು ದೀನರ ಬಂಧುವಿನಂತೆ ಕಂಗೊಳಿಸುತಿದ್ದಾನೆ. ಆತನ ಪರ್ಯಟನೆ ತಮ್ಮಗಳ ಉದ್ಧಾರಕ್ಕಾಗಿಯೇ ಇದೆ ಎಂಬ ವಿಶ್ವಸ್ತಭಾವನೆ ಚಿತ್ತಫಲಕವನ್ನು ಆವರಿಸುವಂತಹ ಮನಮೋಹಕ ಶೈಲಿ ಅನುಭೂತವಾಗಿತ್ತು. ಒಂದೆರಡು ಘಳಿಗೆ ಅತ್ತಲೇ ನೋಟವನ್ನು ಹೊರಳಿಸಿ ನೋಡುತಿದ್ದ ನಿರ್ಮಲ ಭಾವನಾಭಂಗಿಯಲ್ಲಿ ನುಡಿದಳು "ಈ ಬೃಹದ್ ನಗರದ ರಾಜಮಾರ್ಗಗಳಲ್ಲಿ ಓಡಾಡಿದವರು, ವಿದೇಶೀ ವೀಕ್ಷಕರು ಎಷ್ಟೊಂದು ಸುಂದರ ನಗರ ಎಂದು ಆನಂದಿಸುವರೋ ಬಣ್ಣಿಸುವರೋ ಅದು ಅನಿರ್ವಚನೀಯ. ಆಂತರಂಗಿಕ ಸ್ಥಿತಿಗತಿ ನೋಡಿದರೆ ಹೀಗಿದೆ.

"ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ!"

"ಪಾಶ್ಚಾತ್ಯ ದೇಶಗಳ ತೀವ್ರಗತಿ ಇಲ್ಲಿ ಮೂಡಬೇಕಾದರೆ ಇನ್ನಾವ ಕಾಲವೋ."

"ಆ ವೇಳೆಗೆ ನಾವ್ಯಾರೂ ಈ ಭೂಮಿಯಲ್ಲಿರುವುದಿಲ್ಲ ಬಿಡು."

ಮೂವರ ಮುಖದಲ್ಲೂ ಮುಗುಳುನಗೆ ಮೂಡಿ ಮಾಯವಾಯಿತು.

ನಿರ್ಮಲ ಮುಂದುವರಿದಳು "ನಾವು ಬಹಳ ಕಾಲದಿಂದ ಇಲ್ಲಿದ್ದೇವೆ. ಮತ್ಸ್ಯಗಾರನಿಗೆ ಮತ್ಸ್ಯಗಂಧ ಒಗ್ಗಿಹೋದಂತೆ ನಮಗೀಸ್ಥಳ ಒಗ್ಗಿಹೋಗಿದೆ....ಅಂತಲೇ ನಾವಿನ್ನೂ ಜೀವಂತರಾಗಿದ್ದೇವೆ!"

ಪುನಃ ಎಲ್ಲರ ಮುಖಗಳಲ್ಲೂ ನೀರಸ ನಗೆ ಮೂಡಿ ಮಾಯವಾಯಿತು.

ವಿಚಾರಪ್ರಜ್ಞೆ ಮನದಾಳದಲ್ಲಿ ಕಲಕಲರವವೆಬ್ಬಿಸಿತು. ಮೂವರೂ ಪ್ರಾಸಂಗಿಕವಾಗಿ ವಿಚಾರವಿನಿಮಯ ಮಾಡಿಕೊಂಡು ಅಕ್ಷರ ಅಕ್ಷರವನ್ನೂ ವಿಮರ್ಶಿಸಿ ಸಾರಸಾರಗಳನ್ನು ಬಸಿದು ಅದೆಷ್ಟು ಸಂತೃಪ್ತಿ ಪಡೆದುಕೊಂಡರೋ.

ಸುಯ್ಯೆಲರು ದಿಗಂತದಿಂದ ದಿಗಂತರಕ್ಕೆ ಸುಯ್ಯನೆ ತೀಡುತಿತ್ತು.

ನಿರ್ಮಲ ಏನೋ ಒಂದು ರೀತಿಯಲ್ಲಿ ಅತೀವ ಗಂಭೀರ ಭಾವದಿಂದ ತಾಯಿಯನ್ನು ಕುರಿತು ನುಡಿದಳು,

"ನೀವು ಮನಸ್ಸು ಮಾಡಿದರೆ ನಮ್ಮನಮ್ಮಲ್ಲಿ ಒಂದು ಬದಲಾವಣೆ ಮಾಡಿಕೊಳ್ಳಬಹುದು."

"ಅಂದರೆ....?"

"ನೀವು ವಿಮಲೆ ಜೊತೆ ಇರುವುದಾದರೆ ನಾನು ಹಾಸ್ಟೆಲಿನಲ್ಲೇ ಇದ್ದು ಬಿಡುತಿದ್ದೆ....ಈ ಮನೆ ಈ ಸ್ಥಳ ಒಂದೂ ಹಿತಕರವಾಗಿಲ್ಲ. ಸ್ಕೂಲಿಂದ ಇಲ್ಲಿಗೆ ಬಂದರೆ ಹಿಂದಕ್ಕೆ ಹೋಗೋಣ ಎನ್ನಿಸುತ್ತೆ. ವಾಸಕ್ಕೆ ಇದು ಯೋಗ್ಯ ವಾದುದಲ್ಲ."

"ಈಗಿಂದೀಗಲೇ ಮನೆ ಮುಚ್ಚುವುದೆಂದರೆ ಕಷ್ಟ....ಇದುವರೆಗೂ ಸ್ವತಂತ್ರವಾಗಿದ್ದ ಜೀವ....ಇನ್ನು ಮುಂದೆ ನಾನಾದರೂ ಎಷ್ಟು ದಿನ ಬದುಕಿ ಯೇನು? ಅಷ್ಟು ಅವಸರವೇಕೆ?"

"ಕೆಲವು ದಿನ ಇದ್ದು ನೋಡಿ....ನಿಮಗೆ ಹಿತವಾದರೆ ಇರಬಹುದಲ್ಲ. ಖಂಡಿತ ಬನ್ನಿ, ಅದರಿಂದ ನನಗೂ ಅನುಕೂಲವಿದೆ." ಎಂದು ಪ್ರೀತಿ ಪೂರ್ವಕವಾಗಿ ಒತ್ತಾಯಿಸಿದಳು ವಿಮಲ. ಕಣ್ಣುಗಳಲ್ಲಿ ಆಸೆಯ ಬೆಳಕು ಮಿಂಚುತಿತ್ತು.

ಮೂವರೂ ಮೆಟ್ಟಲಿನ ಮೇಲೆ ಸಾಲಾಗಿ ಕುಳಿತುಕೊಂಡರು.

ಪರಸ್ಪರ ಸಂಸಾರಿಕವಾಗಿ ಮಾತುಕತೆ ನಡೆಸುತಿದ್ದಾಗಲೂ ವಿಮಲ ಅನೇಕ ಮೇಳೆ ಅದೇ ಪ್ರಸ್ತಾಪ ಮಾಡಿದಳು. ಅಷ್ಟೆಲ್ಲಕ್ಕೂ ಜಾನಕಿ ಒಂದೇ ಉತ್ತರ ನೀಡಿದಳು,

"ಕಾಲ ಪಕ್ವವಾಗಲಿ, ಅನಂತರ ನೋಡೋಣ."

ನಿರ್ಮಲ ಬಿಸಿಯುಸಿರು ಬಿಟ್ಟು ಸುಮ್ಮನಾದಳು.

ಚಂದ್ರ ಚಂದ್ರಿಕೆಯಲ್ಲಿ ಹಸುರು ಗಿಡಗಳು ಹಾಲು ಹೊಯ್ದಂತೆ ಹೊಳೆ ಯುತಿದ್ದುವು. ಬುಡದಲ್ಲಿ ನೆರಳು-ಬೆಳಕುಗಳ ರಮ್ಯ ಜೋಡಣೆ ಸುಂದರ ಬಲೆಯನ್ನು ನೆಯ್ದಿತ್ತು. ಅಲ್ಲಲ್ಲೆ ಸುಳಿದಾಡುವ ಮಂದಮಾರುತ ಮುಖ ಮೈಗಳನ್ನು ಮೆಲ್ಲಮೆಲ್ಲನೆ ಮುದ್ದಿಡುವಾಗ ಉಂಟಾಗುವ ಸ್ಪರ್ಶಸುಖ ವನ್ನು ಪುನಃಪುನಃ ಬಯಸುವಂತಿತ್ತು.

ಪಟ. ಪಟ. ಪಟ. ಪಟ.

ಆ ಸದ್ದು ಬಂದೆಡೆಗೆ ಮನಃಪ್ರಾಣಗಳು ಸಹಜವಾಗಿ ಹರಿದಾಗ ರಾಧೇಶ್ಯಾಂ ಗೋಚರಿಸಿದ. ವಿಮಲ ಎದ್ದು "ನಾನಿನ್ನು ಬರುವೆ" ಎನ್ನುತ್ತ ಹಿಂಬಾಲಿಸಿದಳು.

ಮರುದಿನ,

ಪ್ರಾತಃಸಮಯದಲ್ಲಿ ಬೃಹದ್ ಭುವಿಯಮೇಲೆ ಹರಿದ ಪುಣ್ಯರಶ್ಮಿಗಳು ಲಕ್ಷ್ಯ ವಸ್ತುಗಳನ್ನು ಪ್ಲಾವಿತಗೊಳಿಸುವಂತೆ ಶುಭ್ರ ಮನೋಹರವಾಗಿದ್ದುವು. ನಿರ್ಮಲ ಶಾಲೆಯನ್ನು ಮುಟ್ಟಿದಾಗ ನೇತ್ರದ್ವಯಗಳು ಭಕ್ತಿಯ ಮಾದಕತೆಯಿಂದ ಮುಕ್ತವಾಗಿರಲಿಲ್ಲ. ಅಂತರ್ನಿಹಿತ ಪಾಪ ಭಾವಗಳನ್ನು ಸುಡುವಂತಹ ಮುಹೂರ್ತಕಲ್ಪ ಮನಃಪ್ರಾಣಗಳಿಗೆ ಪಟುತ್ವವನ್ನು ಮೂಡಿಸಿತ್ತು. ಯಥಾಕ್ರಮ ಬೆಳಗಿನ ಟ್ಯೂರ್ಶ್ ಮುಗಿಸಿ ಹೊರ ಬಂದಾಗ ಆದೇಶವೀಯುದಿದ್ದರೂ ಕಣ್ಣುಗಳು ಸುತ್ತಮುತ್ತಣ ಪರಿಸರದಲ್ಲಿ ಹರಿದಾಡಿದುವು. ಆಶಿತ ವ್ಯಕ್ತಿ ಕಣ್ಗೋಚರಿಸಲಿಲ್ಲ... ಈಚೀಚೆಗೆ ಅವನ ಚರ್ಯೆಯೇ ಬೇರೆ; ರೀತಿ-ನೀತಿಗಳೇ ಬೇರೆ. ತಾನು ನೀಡಿದ ಆರ್ಥಿಕ ನೆರವನ್ನು ಹಿಂದಿರುಗಿಸುವ ಬಗೆಯಾಗಲೀ, ಅಥವಾ ಒಪ್ಪಂದದಂತೆ ತಮ್ಮ ವಿವಾಹವನ್ನಾಗಲೀ ಕುರಿತು ಆತ ಯೋಚಿಸಿದಂತೆಯೇ ತೋರುತ್ತಿಲ್ಲ. ಈಗ ಮೊದಲಿನಂತೆ ಸಿಕ್ಕುವುದೂ ಇಲ್ಲ; ಸಿಕ್ಕಿದರೂ ನಿಲ್ಲದೆ ಯಾವುದಾದರೂ ಕಾರಣ ಹೇಳಿ ಉಣಿಚಿಕೊಳ್ಳುವುದೇ ಹೆಚ್ಚು. ಅವನೊಡನೆ ಯಾವರೀತಿ ಪ್ರಸ್ತಾಪಿಸಬೇಕೋ ಅರ್ಥವಾಗುತ್ತಿಲ್ಲ.... ಯೋಚನೆಯಲೆಗಳು ತಲೆಯಲ್ಲಿ ಸುಳಿಸುತ್ತುತಿದ್ದುವು. ಒಡಲು ಸಂಕಟದ ಗಣಿಯಾಗಿತ್ತು. ಅವನಾಗಿ ಯಾವ ವಿಚಾರವನ್ನೂ ಪ್ರಸ್ತಾಪಿಸದಿರುವುದರಿಂದ ತಾನಾಗಿ ಕೇಳಲು ಸಂಕೋಚ ಅಡ್ಡ ಬಂದು ಕೊರಳು ಕಟ್ಟುತಿತ್ತು; ಮಿದು ಹೃದಯ ದಣಿಯುತಿತ್ತು.

ಮೀನಿಗೆ ಕೈ ಹಚ್ಚುವುದರಿಂದ ನೀರು ಕದಡಿ ಬಗ್ಗಡವಾಗುವಂತೆ ಚಿಂತಿತ ಚಿತ್ತಾಲೋಕ ಕಿಂಕುರ್ವಾಣತೆಯಿಂದ ತುಂಬಿ ಹೋಗಿದೆ. ಎಷ್ಟೇ ಪ್ರಯತ್ನಿಸಿದರೂ ಆಲೋಚನಾತರಂಗಗಳು ತಿಳಿಯಾಗುತ್ತಿಲ್ಲ. ಅತೀವ ರಕ್ತ ಒತ್ತಡದಿಂದ ನರನಾಡಿಗಳು ಕಟ್ ಕಟ್ಟನೆ ತುಂಡುಗಡಿಯುತ್ತಿರುವಂತೆ ಭಾಸವಾಗುತಿತ್ತು. ಆದರೂ ಬಹಳ ಕಷ್ಟದಿಂದ ತನ್ನನ್ನು ತಾನೇ ಸುಧಾರಿಸಿಕೊಳ್ಳುತ್ತ ಕೆಲಸ ಆರಂಭಿಸುವಳು.

ಆದರೆ..!

ಕೆಲವು ಸಮಯ, ಯಾವ ಪಾಠವಾಗಿದೆ ಇನ್ನಾವ ಪಾಠ ತೆಗೆದುಕೊಳ್ಳಬೇಕು ಎಂಬ ಅಂಶ ನಿಚ್ಚಳವಾಗಿ ಹೊಳೆಯುವುದೇ ಇಲ್ಲ. ಕೆಲವೊಮ್ಮೆ ಹೇಳಿ

ದ್ದನ್ನೆ ಹೇಳತೊಡಗುವುದೂ ಉಂಟು. ಆಗ ಅನೇಕ ಮಕ್ಕಳ ಒಕ್ಕೊರಲು ಗೆಜ್ಜೆ ಅಲುಗಿಸಿದಂತೆ ಹೊಮ್ಮುವುದು "ಈ ಪಾಠ ಆಗಿದೆ ಮಿಸ್ !"

ಎಂತಹ ನಾಚಿಗೆ ಗೇಡು ?

ನಿರ್ಮಲ ಲಜ್ಜಿತಳಂತೆ ಕೆಂಪುತಳೆದು ಮುಂದಿನ ಪಾಠ ಆರಂಭಿಸುವಳು. ಅನೇಕವೇಳೆ ನೋಟ್ಸ್ ಕೊಟ್ಟು 'ಬರೆದುಕೊಳ್ಳಿ' ಎಂಬ ಪ್ರಸಂಗದಿಂದ ತಪ್ಪಿಸಿಕೊಳ್ಳಲು ಆಗುವುದಿಲ್ಲ. ಚಾರಿತ್ರ್ಯಪೂತ ಹೃದಯದಲ್ಲಿ ಸರಸ್ವತಿ ವಾಸಿಸಿದರೂ ಹೆಜ್ಜೆ ಹೆಜ್ಜೆಗೂ ಸೋಲುತ್ತಿರುವುದೂ, ಮುಂಗಾಣದೆ ಅಲೆಯುತ್ತಿರುವುದೂ ಸಹ ವಿಶೇಷವೇ. ಎಷ್ಟೋವೇಳೆ ಏನೇ ಬರಲಿ, ಪರಿಸ್ಥಿತಿಗೆ ಹೊಂದಿಕೊಳ್ಳಬೇಕೆಂಬ ವಿವೇಚನೆ ಬಂಡಾಯವೇಳುತ್ತದೆ. ಆದರೆ ಘಳಿಗೆ ಘಳಿಗೆಗಳು ಮರುಘಳಿಗೆಯ ಆವರ್ತನಕ್ಕೆ ಸಿಕ್ಕಿ ಬುಡಮೇಲಾದಾಗ ಎಲ್ಲವೂ ಕೊನೆಗಾಣದ ವಿಪರ್ಯಾಸ.

ಎಂ, ಎ.,ಗೆ ಸೇರುವುದೆಂದರೆ ಶಾಲೆ ಪಗಾರವಿಲ್ಲದ ರಜೆ ಕೊಟ್ಟೀತು. ಆರ್ಥಿಕ ನೆರವಿಲ್ಲದೆ ಓದುವುದು ಸಾಧ್ಯವೇ ಇಲ್ಲ. ಅಮರನಾಥ ಸರಿದಾರಿಗೆ ಬಾರದಿದ್ದಲ್ಲಿ ಓದು ಕನಸಿನ ಮಾತು....ಆ ವಿಚಾರದೋಹನ ಮೈಯನ್ನು ಅಡಿಯಿಂದ ಮುಡಿಯವರೆಗೂ ನಡುಗಿಸಿತು. ಅಮರನಾಥ ಒಪ್ಪದೆ ತನ್ನ ಭವಿಷ್ಯವನ್ನು ಕುರಿತು ತಾನು ಯಾವ ನಿರ್ಧಾರವನ್ನೂ ಕೈಕೊಳ್ಳುವಂತಿಲ್ಲ. ಅನ್ಯಥಾ ನನ್ನ ಭವಿತವ್ಯವನ್ನು ಆತನ ಕೈಯಲ್ಲಿ ಅಡವಿಟ್ಟದ್ದಾಯ್ತು. ಅಷ್ಟು ಮೋಸ ಹೋದುದೇ ಆಶ್ಚರ್ಯ. ಎಳೆ ವಯಸ್ಸಿನಿಂದ ಬದುಕಿನ ಹಾದಿಯನ್ನು ಕಂಡುಕೊಂಡಿದ್ದು ಪ್ರವರ್ಧಮಾನಕ್ಕೆ ಬಂದ ಮೇಲೆ ಪ್ರಬುದ್ಧ ಬುದ್ಧಿ ನೆರವು ನೀಡಲಾರದೇ ಹೋದುದು ಪರಮಾಶ್ಚರ್ಯ!

ಎದೆಯ ಹಕ್ಕಿ ಉಲಿಯುತ್ತಲೇ ಇತ್ತು; ಒಡಲು ಪರಿತಪಿಸುತ್ತಲೇ ಇತ್ತು. ಇನ್ನೇನು ತರಗತಿಗಳು ಆರಂಭವಾಗಲು ಕೆಲವು ನಿಮಿಷಗಳು ಮಾತ್ರ ಉಳಿದಿವೆ. ಹೊರಡುವುದೊಂದು ಬಾಕಿ.

ಅ–ಮ–ರ–ನಾ–ಥ

ಎಂ. ಎ., ಪದವೀಧರ....ಕಾಲೇಜಿನ ಅಧ್ಯಾಪಕ. ನಾಗರಿಕಯುಗದ ನಾಗರಿಕ ಜಗತ್ತಿನ ನಾಗರಿಕ ಮಾನವ. ಮಾನ್ಯವಂತರ ಶ್ರೇಣಿಯಲ್ಲಿ ಶೋಭಿಸುವ ಮಾ-ನ-ವ-ಂ-ತ.

ಪು–ರು–ಷ

ಆಧುನಿಕ ಜಗತ್ತಿನಲ್ಲಿ ಈತ ಪೂರ್ಣ ಪುರುಷನೂ ಅಲ್ಲ; ಅಥವಾ ಅರ್ಧಾತ್ ಸ್ತ್ರೀಗುಣಿಯೂ ಅಲ್ಲ. ಇತ್ತ ಅರ್ಥಪೂರ್ಣ ಪರಿಜ್ಞಾನದಿಂದಲ್ಲದೆ ಪೂರ್ಣತೆಯನ್ನು ಪಡೆಯಲಾರ. ಅತ್ತ ಸಂಕುಚಿತ ಮಾನಸದ ಕಲುಷಿತ ಭಾವನೆಯಿಂದ ಕೃತಕೃತ್ಯನೂ ಆಗಲಾರ. ವಂಶಪಾರಂಪರ್ಯಕ್ಕೆ ಕಟ್ಟುಬಿದ್ದು ಅರ್ಥರಹಿತ ಸಂಸ್ಕಾರವನ್ನು ನಿಶ್ಚಲ ಶ್ರದ್ಧೆಯಿಂದ ನಂಬಿ ಕಾಮಾಂಧನಾಗಿ ಜೀವನ ವಿಕಾಸದ ವಿಭ್ರಮ ವೀಚಿಯಲ್ಲಿ ತೊಳಲುತ್ತ ಮುಂದುವರಿಯುತ್ತಾನೆ. ಅಂತಲೇ ವರ್ಗಭೇದ-ಜಾತಿಭೇದ-ಲಿಂಗಭೇದ ಪಾಪಾಸು ಕಳ್ಳಿಯಂತೆ ಅತ್ತಿತ್ತ ಹರೆಗೈಚಾಚಿ ಬೆಳೆಯುತ್ತಿವೆಯೇ ಹೊರತು ಸತ್ಯಾರ್ಥ ಪ್ರಕಾಶವಾಗುತ್ತಿಲ್ಲ. ವಿಶ್ವಮಾನ್ಯವಾದ ಈ ಅಖಂಡ ವಿಭ್ರಮೆಯನ್ನು ಬಹುಶಃ ಆ ಭಗವಂತನೂ ನಿವಾರಿಸಲಾರನೇನೋ....

ನಿರ್ಮಲ ಮೂರ್ತಿಮತ್ತಾಗಿ ನಿಂತೇ ಇದ್ದಾಳೆ. ಕ್ಷಣಕ್ಷಣಗಳು ನಿರಾತಂಕವಾಗಿ ಉರುಳಿದುವು. ಘಳಿಗೆ ಘಳಿಗೆಗಳು ನಿರ್ಲಕ್ಷ್ಯದಿಂದ ಕಳೆದುವು. ನಿಮೀಲಿತ ನೇತ್ರಗಳಲ್ಲಿ ಮೂಡಿದ ನಸುರಂಗು ಕಾಣಿಸಿದರೂ ಕಾಣಿಸದಂತಿತ್ತು. ಅಧರೋಷ್ಟಗಳು ಬಿಗಿದುಕೊಂಡಿದ್ದುವು. ಸಿಂಧೂರಯುಕ್ತ ಲಲಾಟದ ಮೇಲೆ ಹರಿದಾಡುವ ಮನಮೋಹಕ ಮುಂಗುರುಳು ಮುದ್ದಿಡುವಂತೆ ಅಲ್ಲಲ್ಲೆ ನಲಿದಾಡುತ್ತಿವೆ.

ಪಟ. ಪಟ. ಪಟ. ಪಟ.

ಅತ್ಯಂತ ಆತ್ಮೀಯ ಹೆಜ್ಜೆಗಳ ಪಟತ್ಕಾರ ಕರ್ಣಪಟಲಗಳ ಮೇಲೆ ಮುದ್ದಿನ ಮಳೆಗರೆಯುವಂತೆ ತಾಗಿದಾಗ ದೃಷ್ಟಿಕೋನ ಸದ್ದು ಬಂದೆಡೆಗೆ ಸಹಜವಾಗಿ ಹರಿಯಿತು. ನೋಡೆ, ಸುಂದರ ಕಾಂತಿಯ ಶ್ವೇತಸ್ವಿನಿಯೇ ನಿಂದಂತೆ ನಿಂತಿದ್ದಾಳೆ ಡಾ॥ ಹಿಲ್ಡಾ !

"ನಮಸ್ಕಾರ....!"

"ಏನಮ್ಮಾ ಸುಮ್ಮನೆ ನಿಂತಿದ್ದಿ ?"

"ತರಗತಿ ಆರಂಭವಾಗಲು ಇನ್ನೂ ಎರಡು ನಿಮಿಷ ಇವೆ ಡಾಕ್ಟರ್ !"

"ಎಂ.ಎ.,ಗೆ ಹೋಗುವ ವಿಚಾರವೇನಾಯ್ತು ?"

"ಇನ್ನೂ ನಿರ್ಧರಿಸಿಲ್ಲ....ಹೋಗಬೇಕೆಂಬ ಮನಸ್ಸಿದೆ."

"ನೀನು ಬುದ್ಧಿವಂತೆ, ಹೋದರೆ ಚೆನ್ನಾದ ಅಂಕ ಗಳಿಸುತ್ತಿ!"

"ನಿಮ್ಮ ದಯೆ ಡಾಕ್ಟರ್!"

"ದೇವರ ದಯೆ!" ಎನ್ನುತ್ತ ಮೇಲೆ ಬೆರಳು ತೋರಿದಳು ಡಾ॥ ಹಿಲ್ಡಾ. ತುಟಿಗಳ ಮಧ್ಯೆ ಮಂದಸ್ಮಿತಧಾರೆ ಹರಿದು ಮಾಯವಾಯಿತು. ಅನಂತರ "ದಿನಗಳು ಯಾವಾಗಲೂ ಒಂದೇ ತೆರನಾಗಿರುವುದಿಲ್ಲ. ನೋಡೋಣ ಹೇಗಾಗುತ್ತೋ. ಅಪ್ಲಿಕೇಶ್ ಹಾಕು. ದೇವರು ಯಾವುದಾದರೂ ದಾರಿ ತೋರಬಹುದು" ಎಂದಳು.

ವಾಕ್ಯಸರಣಿ ಎದೆಯಾಳದಿಂದ ಹರಿದುಬಂತು.

ನಿರ್ಮಲಳ ಆನಂದಿತ ಹೃದಯ ಸರಾಗವಾಗಿ ಉಸಿರಾಡಿತು.

ಅದೇ ವೇಳೆಗೆ ಶಾಲೆಯ ಗಂಟೆ ಬಾರಿಸಿತು. ಅಲ್ಲಲ್ಲಿ ಕಲೆತು ಗುಂಪು ಗುಂಪಾಗಿ ಮಾತುಕತೆಯಲ್ಲಿ ತೊಡಗಿದ್ದ ಶಾಲಾಮಕ್ಕಳು ಎಳೆ ಸೇರಿಸಿ ಹೊಸೆದಂತೆ ಒಮ್ಮುಖವಾಗಿ ತಮ್ಮತಮ್ಮ ತರಗತಿಗಳಿಗೆ ಧಾವಿಸತೊಡಗಿದರು. ನಿರ್ಮಲ ಅಲ್ಲೇ ನಿಂತು ತುಂಬುಗಣ್ಣಿನ ನೋಟವನ್ನು ಅತ್ತಲೇ ಹೊರಳಿಸಿದಳು. ಬಾಳಿನ ಕಹಿಯನ್ನರಿಯದ ಹಾಲ್ಗಲ್ಲದ ಮಕ್ಕಳ ವಾರ್ಧಿ ಭೋರ್ಗರೆವ ಕಡಲಿನಂತೆ ಮರ್ಮರಿಸುತಿತ್ತು.

ಶಾಲೆಯಲ್ಲಿ ಪಾಠ ಪ್ರವಚನಗಳನ್ನು ಮುಗಿಸಿ ಮೆಟ್ಟಿಲು ಇಳಿದಾಗ ಸೂರ್ಯ ಇಳಿಮುಖನಾಗಿದ್ದ. ಆತನ ಉಜ್ವಲ ಕಾಂತಿಯಲ್ಲಿ ನೀಲಾಕಾಶ ಶುಭ್ರ ಮನೋಹರ ಶೋಭೆಯಿಂದ ಬೆಳಗುತಿತ್ತು. ಗಿಡಮರಗಳ ಹಸುರೆಲೆಯಮೇಲೆ ಹರಡಿದ ತೆಳುವಾದ ಧೂಳಿನ ಮೇಲೆ ಹರಿದ ಸುವರ್ಣಕಾಂತಿ ಬಂಗಾರದ ಲೇಪದಂತೆ ಕಂಗೊಳಿಸುತಿತ್ತು. ನಿನೂತನ ಅಲಂಕಾರ ಶೋಭೆಯಿಂದ ವಿಜೃಂಭಿಸುವ ನವವಧುವಿನಂತೆ ಸುಂದರ ಪುಷ್ಪವನ ಕಂಗೊಳಿಸುತಿತ್ತು. ತಲೆಯಲ್ಲಿ ನಾನಾ ವಿಚಾರಗಳನ್ನು ತುಂಬಿಕೊಂಡು ಹೆಜ್ಜೆ ಹೆಜ್ಜೆಯನ್ನೂ ಭಾರ ವಿಶೇಷದಿಂದ ಎಳೆದುಕೊಳ್ಳುತ್ತ ಮುನ್ನಡೆಯುವಂತೆ ನಡೆದು ಪ್ರಾಕಾರದ ಬಳಿಗೆ ಬರುವ ಸಮಯಕ್ಕೆ ಹೊರಹೋಗುವ ಮಕ್ಕಳ ಗುಂಪಿನಲ್ಲಿ ನುಗ್ಗಿಕೊಂಡು ಲೀಲಾ ತನ್ನ ಬಳಿಗೆ ಬರುತಿದ್ದುದು ಕಂಡುಬಂತು. ಮುಖಬಿಂಬದಲ್ಲಿ ಅತೀ ಆಯಾಸದ ಮ್ಲಾನಮುದ್ರೆ ಅಚ್ಚೊತ್ತಿದ್ದರೂ ಶುಷ್ಕ ತುಟಿಗಳಲ್ಲಿ ಮುಗುಳ್ನಗು ಮೂಡಿತು.

ಅವಳು ಸ್ನೇಹಾತಿರೇಕದಿಂದ ಭುಜದ ಮೇಲೆ ಕೈಯಿಟ್ಟು ಮೆಲುದನಿಯಲ್ಲಿ ನುಡಿದಳು,

"ನೀನು ಏನೋ ಒಂದು ರೀತಿಯಾಗಿದ್ದಿ. ಮೊದಲಿನಂತೆ ಈಗ ಇಲ್ಲವೇ ಇಲ್ಲ, ನನಗೆ ಏನೆಂಬುದೇ ಅರ್ಥವಾಗುತ್ತಿಲ್ಲ. ಏನೇ ಇರಲಿ, ಅಷ್ಟೊಂದು ಮನಸ್ಸಿಗೆ ಹಚ್ಚಿಕೊಳ್ಳಬಾರದು."

"ಏನೂ ಇಲ್ಲವಲ್ಲಾ ?"

"ಮೊನ್ನೆ ಮೊನ್ನೆಯವರೆಗೂ ಇದ್ದ ಜೀವನೀಶಕ್ತಿಯು ಅಪಾರವಾದ ಚಟುವಟಿಕೆ ಈಗ ಸಪ್ಪೆ ಸಪ್ಪೆಯಾಗಿದೆ."

"ಮನುಷ್ಯನ ಜೀವನದಲ್ಲಿ ಏರುಪೇರು ಯಾವಾಗಲೂ ಇದ್ದದ್ದೆ ಬಿಡು."

"ಆದರೂ ನನ... ನೀನು ವಿಪರೀತ ಹಚ್ಚಿಕೊಂಡಂತೆ ತೋರುತ್ತಿ." ಕರುಣಕಾತರ ಕಂಠದಿಂದ ನುಡಿ ಹೊರಬಿತ್ತು.

"ದೇವರಿಗೇ ಗೊತ್ತು; ನನಗೇನೂ ಅರ್ಥವಾಗುತ್ತಿಲ್ಲ." ಏನೋ ಒಂದು ರೀತಿಯ-ಅತ್ಯಂತ ವಿಜಾತೀಯವಾದ ವಾಣಿಯಲ್ಲಿ ಉತ್ತರಿಸಿದಳು ನಿರ್ಮಲ.

"ಅಂದು ಯಾರಿಗಾಗಿ ಹೃನ್ಮಂದಿರದ ಬಾಗಿಲನ್ನು ತೆಗೆದಿರಿಸಿದೆಯೋ ಅದು ಅರ್ಥಹೀನತೆಯಿಂದ, ಅನೈತಿಕತೆಯಿಂದ ಮುಚ್ಚಿಹೋಗಿರಬಹುದು.... ಎಂಬ ಅನುಮಾನ ನನಗೆ ತಲೆದೋರಿದೆ. ನೀನು ಅಂದು ತೆಗೆಯುವುದರಲ್ಲಿ ಮಾಡಿದ ದೋಷಕ್ಕಿಂತ ಇಂದು ಒಂದೇಬಾರಿಗೆ ಮುಚ್ಚಿಬಿಡುವುದಾದಲ್ಲ ಹೆಚ್ಚು ದೋಷ ಉಂಟಾಗಬಹುದು... ಆತುರದ ಕ್ರಮ ಕೈಕೊಳ್ಳಬೇಡ."

"ಎಲ್ಲವನ್ನೂ ಭಗವಂತನ ಇಚ್ಛೆಗೆ ಬಿಟ್ಟುಬಿಡುವೆ. ಅವನು ಹೇಗಾದರೂ ನಡೆಸಲಿ,"

"ಹಾಗಿದ್ದ ಮೇಲೆ ಚಿಂತೆ ಎಲ್ಲಿಯದು ??"

ಆಗ ಪ್ರಸನ್ನ ಬೇಕೋ ಹೊಳೆಯದೇ ಸುಮ್ಮನಾದಳು ನಿರ್ಮಲ.

"ನಿನ್ನ ಅಂತರಂಗದ ವಿಚಾರವನ್ನು ಕುರಿತು ವಿಮರ್ಶಿಸಲು ನಾನು ಈಗ ಬಂದಿಲ್ಲ... ಆದರೆ ಒಂದು ಮಾತು."

"ಏನು ಹೇಳು!"

"ಎಂದೋ ನಡೆದ ಪ್ರಸಂಗ ಅಥವಾ ಒಪ್ಪಂದ, ಕರ್ತವ್ಯ ಅಥವಾ

ಸದಾಚಾರ ಯಾವುದೇ ಇರಲಿ ಅದು ಅನಂತವಾದುದು ಎಂದು ಭಾವಿಸುವುದು ತಪ್ಪು. ಯಾವುದೇ ಸೂತ್ರ ಅಖಂಡವಾಗಿರುವುದು ಕಲಿಯುಗದಲ್ಲಿ ಸಾಧ್ಯವೂ ಇಲ್ಲ. ಮುಖ್ಯವಾಗಿ ಈ ಜನ್ಮವೇ ಅಶಾಶ್ವತವಾಗಿರುವಾಗ ಆ ಸಣ್ಣ ಸಣ್ಣ ವಿಚಾರಗಳು ಹೇಗೆ ಶಾಶ್ವತವಾಗಿರುತ್ತವೆ?”

ಆ ಅಮಾಯಕವೂ ಅತ್ಯಂತ ಸರಳವೂ ಆದ ವಾಗ್ಧಾರೆ ಎದೆಯಾಳಕ್ಕಿಳಿದು ಶಾಂತಿವಾರಿಯಂತೆ ಹೃದಯಕುಂಡಲಿಯನ್ನು ಪ್ರವೇಶಿಸಿ ತಾಪದಗ್ಧ ನಾರೀಚೇತನ ಸ್ವಲ್ಪಹೊತ್ತು ಸ್ತಬ್ಧಗೊಂಡಿತು.

ಲೀಲ ತನ್ನ ಮುಂದಿನ ಕವಲುದಾರಿ ಹಿಡಿಯುತ್ತ “ನಾನು ಬರಲೇ?.... ಹೇಗೂ ನಾಳೆ ಸಿಗುತ್ತೀಯಷ್ಟೆ?” ಎಂದಳು.

ನಿರ್ಮಲ ಹುಬ್ಬೆತ್ತಿ ನೋಡಿದಳು. ಪ್ರತಿಯಾಗಿ ಏನೂ ಹೇಳಲಿಲ್ಲ. ತಾಮ್ರ ವರ್ಣರಂಜಿತ ಅಧರೋಷ್ಟಗಳಲ್ಲಿ ಕ್ಷೀಣರೇಖೆಯಂತಹ ಎಳೆನಗು ಮೂಡಿ ಮಾಯವಾಯಿತು. ಕವಲು ಹಾದಿ ಹಿಡಿದ ಗೆಳತಿ ಅಪಾರವಾದ ಜನ ಸಂದಣಿಯಲ್ಲಿ ಕರಗಿ ಹೋಗುವವರೆಗೂ ನಿಟ್ಟಿಸಿದಳು ನಿರ್ಮಲ. ಕಣ್ಣುಗಳಲ್ಲಿ ಬೆಳ್ಳಿಯ ರೇಖೆಯಂತೆ ಸಣ್ಣಗೆ ನೀರಾಡಿತು. ಹುಡಿಹುಡಿಯಾದ ಮಣ್ಣಿನಮೇಲೆ ಮುನ್ನಡಿ ಇಡುತ್ತಾ ತನ್ನ ಹಾದಿ ಹಿಡಿದಳು.

## ೩೨

....ಆಶಾಢ ಮಾಸದ ಸುಂದರ ಸಂಧ್ಯಾಸಮಯ.

....ವರ್ಷ ಭೈರವ ಘೋರ್ಗರೆದು ಸುರಿದು ಸೋತು ವಿರಮಿಸಿದ್ದಾನೆ.

....ಲೋಕಾಲಯವೆಲ್ಲ ಹಸುರಿನ ಹೊಸ ಉಡುಗೆಯಲ್ಲಿ ಶೃಂಗರಿಸಿದ ನವ ವಧುವಿನಂತೆ ಕಂಗೊಳಿಸುತಿತ್ತು. ಹೊರಹೋಗಿದ್ದ ಪಕ್ಷಿಗಳು ಹಿಂದಿರುಗಿ ಬಂದು ಆಗಲೇ ಗಿಡಮರಗಳಲ್ಲಿ ಕಲೆತು ಸಾನಂದದಿಂದ ಕೂಜನಗೈಯ್ಯುವ ವಿವಿಧ ವರ್ಣರಂಜಿತ ಪಕ್ಷಿಲೋಕ ದರ್ಶನೀಯವಾಗಿತ್ತು. ಅಶೋಕವೃಕ್ಷಗಳೆಡೆಯ ಹೆಬ್ಬಂಡೆಯ ಮೇಲೆ ಕುಳಿತ ನಿರ್ಮಲ ಹುಬ್ಬೆತ್ತಿ ನೋಡಿದಳು. ನೇರ ಕಟಾಕ್ಷ ನಿಶ್ಚಲವಾಗಿತ್ತು. ಸೊಂಪಾದ ನುಣ್ಣನೆಯ ಚಿಕುರರಾಶಿ ಮುಖದ ಮೇಲೆ ಅಸ್ತವ್ಯಸ್ತವಾಗಿ ಹರಡಿತ್ತು. ಅಮರನಾಥ ಆ ಮುಖಾವಲೋಕನದಿಂದ

ಪುಳಕಿತನಾದಂತೆ ಕಂಡು ಬಂದರೂ ಮರು ಘಳಿಗೆಯಲ್ಲಿ ತನ್ನನ್ನು ತಾನೇ ನಿಗ್ರಹಿಸಿಕೊಂಡು ಕಾರಣ ಬದ್ಧವಾಗಿ ಆತ್ಮವಿಮರ್ಶೆ ಮಾಡುವವನಂತೆ ಲಜ್ಜಾಹೀನತೆಯಿಂದ ನುಡಿದ,

"ನಾವು ಯೋಚಿಸಿದ್ದೆಲ್ಲ ಈ ಜೀವನದಲ್ಲಿ ಕೂಡಿ ಬರುವುದಿಲ್ಲ.... ಯಾವತ್ತೂ ಪರಿಸ್ಥಿತಿಗೆ ಹೊಂದಿಕೊಳ್ಳುವ ಮನೋಭಾವ ಬೆಳೆಸಿಕೊಳ್ಳುವುದು ಲೇಸು, ಎನಿಸುತ್ತದೆ ಈಗ."

"ನಿಜ..."

"ನಾನು ಏನೇನೋ ಬಯಕೆಗಳನ್ನು ಇಟ್ಟುಕೊಂಡಿದ್ದೆ. ಈವರೆವಿಗೆ ಒಂದೂ ಕೈಗೂಡಿ ಬರಲಿಲ್ಲ....ಈಗ ನಾನು ಯೋಚಿಸುವುದೇನೆಂದರೆ...." ಎಂದು ಸ್ವಲ್ಪ ಹೊತ್ತು ಯೋಚಿಸುತ್ತ ನಿಂತ.

"ಏನು ಹೇಳಿ?"

"ನಾವು ಮೊದಲೇ ಯಾವುದನ್ನೂ ಯೋಜನೆ ಹೂಡುವುದು ತಪ್ಪು. ಈ ದುರದೃಷ್ಟ ದಿನಗಳಲ್ಲಿ ಅವು ಕರಗತವಾಗುವ ಸಂಭವ ಬಹಳ ಕಡಿಮೆ."

"ಅಂದರೆ ಅದೃಷ್ಟದ ದಿನಗಳು ಬರುತ್ತವೆ ಎಂಬ ನಂಬಿಕೆ....?" ಕಣ್ಣರಳಿಸಿದಳು ನಿರ್ಮಲ.

"ಹೌದು .. ಅಂದರೆ ತಪ್ಪಲ್ಲ!" ದೃಢವಾದ ಕಂಠಸ್ವನ ಹರಿದು ಬಂದಾಗ ನೆಟ್ಟ ನೋಟ ಭಾವಸಮುಜ್ವಲವಾಗಿತ್ತು.

"ಆದರೆ....ಒಂದು ಮಾತು."

"ಸರಿ....ಹೇಳಿ?"

"ಉದ್ದೇಶವನ್ನು ಯಾವ ಕಾರಣಕ್ಕೂ ಬಿಟ್ಟುಕೊಡಬಾರದು. ಯೋಜನೆಗಳು ನಡೆಯಲಿ ಬಿಡಲಿ, ಕಾಲಕ್ರಮಣ ಹೇಗಾದರೂ ಇರಲಿ ಉದ್ದೇಶ ಉದ್ದೇಶವೇ!"

"ನೀವು ಆ ದೃಢ ವಿಶ್ವಾಸವನ್ನು ಎಂದೆಂದಿಗೂ ಕಳೆದುಕೊಳ್ಳುವುದಿಲ್ಲವಷ್ಟೆ?"

"ಖಂಡಿತ ಇಲ್ಲವೇ ಇಲ್ಲ!" ನಿಧಾನಗತಿಯಲ್ಲಿ ತಲೆಯಾಡಿಸಿದಳು ನಿರ್ಮಲ.

"ಹಾಗಾದರೆ...!" ಮಾತನ್ನು ಅಷ್ಟಕ್ಕೆ ತುಂಡುಗಡಿದು ಸ್ವಲ್ಪಹೊತ್ತು

ಯೋಚಿಸಿದ ಅಮರನಾಥ್ ಪುನಃ ಅಂದ "ನಿಮಗೆ ಅನುಮಾನವೇನೂ ಇಲ್ಲ ವಲ್ಲ?"

"ಇಲ್ಲ." ಮೆಲ್ಲನೆ ತಲೆಯಾಡಿಸಿ ಪುನಃ ಕೇಳಿದಳು ನಿರ್ಮಲ "ನಿಮ್ಮ ಉದ್ದೇಶಿತ ಮಹಾ ಸಾಧನೆಯ ಕಾರ್ಯಕಲಾಪಗಳಲ್ಲಿ ನಾನೂ ಸಹಭಾಗಿ ಯಾಗಬಹುದಷ್ಟೆ?"

"ತಾಳಿ...ಅದನಿನ್ನೂ ಯೋಚಿಸಿಯೇ ಇಲ್ಲ....ಸ್ವಲ್ಪ.."

ಅಮರನಾಥ ತಬ್ಬಿಬ್ಬಾದಂತೆ ಉತ್ತರಿಸಿದ. ಯಾವುದೋ ಕಾಣದ ಕೈ ಗಂಟಲನ್ನು ಒತ್ತಿ ಹಿಡಿದಂತಾಗಿ ವಾಕ್ಯಸರಣಿ ಅಷ್ಟಕ್ಕೆ ತುಂಡುಗಡಿಯಿತು. ಸೂಕ್ಷ್ಮ ದೃಷ್ಟಿಯಿಂದ ಅವಳನ್ನು ನಿಟ್ಟಿಸಿದ.

ನಿರ್ಮಲ ಒಮ್ಮೆಲೇ ಸ್ವೇದಾಶ್ರುಗಳಿಂದ ತೊಯ್ದು ಹೋದಳು. ದೇಹ ಪಾದ್ಯಂತ ರೋಮಾಂಚನವಾಯಿತು. ಹೃದಯ ಮೃದಂಗ ವ್ಯಾಪ್ತಿಗೆ ಮೀರಿ ಮಿಡಿಯಹತ್ತಿತು. ಧಡ. ಧಡ. ಧಡ. ಧಡ.

ಆ ಮುಹೂರ್ತದಲ್ಲಿ ಥಟ್ಟನೆ ತಟ್ಟಿ ಎಚ್ಚರಿಸಿದಂತಾಯಿತು. ಆಕ್ಷಣ ಕಣ್ಣುಬಿಟ್ಟು ಸುತ್ತಮುತ್ತಲೂ ಸಿರಿಸಿರಿ ನಿಟ್ಟಿಸಿದಳು. ಒಳಗಡೆ ಕವಿದಿದ್ದ ಕತ್ತಲೆ ಕಣ್ಣುಗಳನ್ನು ತಿನಿಯಿತು. ಹೃದಯರಂಗದಲ್ಲಿ ವಿದ್ಯುದ್ವೇಗದಿಂದ ನರ್ತಿಸುತಿದ್ದ ಪ್ರೇಮತರಂಗಿಣಿಯ ಮೃದು ನೂಪುರಗಳ ಸಪ್ಪಳವು ಅಲ್ಲಿಂದಲ್ಲೇ ತಟಸ್ಥವಾಯಿತು. ಭೀಮಿಸುವಂತೆ ಮಿಡಿಯುವ ಹೃದಯ ಗತಿಯಲ್ಲಿ ಕೈಕಾಲು ಗಳು ಚಲಿಸಲಾರದಷ್ಟು ಜಡವಾಗಿವೆ. ಅದು ಕನಸೋ ನನಸೋ ಅರ್ಥೈಸ ಲಾರದಷ್ಟು ಕಿಂಕುರ್ವಾಣತೆ ಮನೋಮಂದಿರವನ್ನು ಆವರಿಸಿತು. ಸುಳಿದು ಹೋದ ಸ್ವಪ್ನಾವೇಶವನ್ನು ತದೇಕ ಜ್ಞಾನದಿಂದ ಅವಲೋಕಿಸತೊಡಗಿದಳು. ಹೃದಯಕುಂಡಲಿಯಲ್ಲಿ ಸಂಜನಿಸಿದ ದುಃಖತೀರ್ಥ ಕಣ್ಣುಗಳಲ್ಲಿ ಹನಿಹನಿ ಯಾಗಿ ಉದುರತೊಡಗಿತು.

ಮಾರ್ಕೆಟ್ ಟವರಿನ ಗಡಿಯಾರ ಗಂಟೆ ಬಾರಿಸಿತು.

ಸದ್ದಿಲ್ಲದ ಮಹಾಶಾಂತಿಯಲ್ಲಿ ಅದೆಷ್ಟು ಸ್ಪಷ್ಟವಾಗಿ ಕೇಳಿಸುತ್ತಿದೆ!

ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳು, ಎಂಟು, ಒಂಭತ್ತು, ಹತ್ತು, ಹನ್ನೊಂದು....ಇನ್ನೂ ಹನ್ನೊಂದು. ಆಗಲೇ ಅದೆಂತಹ ಕನಸು? ಇನ್ನು ಭವಿಷ್ಯ ಏನಾಗುತ್ತೋ ಯೋಚಿಸಿಕೊಳ್ಳಲೂ ಭಯ.

ದೇವರೇ ಕಾಪಾಡು....!

ಅಂತರಾತ್ಮ ಬಿಸಿಯುಸಿರು ಬಿಟ್ಟು ತನ್ನಲ್ಲೇ ಬೇಡಿಕೊಂಡಿತು; ಒಳ್ಳಿತಕ್ಕಾಗಿ, ಭವಿಷ್ಯದ ಪರಮಾರ್ಥಕ್ಕಾಗಿ.

ಮೂಡಣಕ್ಕೆದುರಾದ ಗವಾಕ್ಷಿಯಲ್ಲಿ ದೂರ ದಿಗಂತದ ಮೋಡಗಳ ಮರೆಯಿಂದ ಮೈದೋರಿದ ಅರ್ಧಚಂದ್ರಮ ತನ್ನ ವಿಲಾಸಯುತ ಸುಧಾಸಲಿಲದಿಂದ ಬಾಹ್ಯಜಗತ್ತನ್ನು ಪ್ಲಾವಿತಗೊಳಿಸುತಿದ್ದ. ಆ ಅವಿರಲ ಸ್ರಾವೀ ನಿರ್ಝರ ಮನಃಪ್ರಾಣಗಳನ್ನು ರಸಮಯಗೊಳಿಸಲು ಪ್ರಯತ್ನಿಸುವಂತಿತ್ತು. ಸ್ವಲ್ಪ ಹೊತ್ತಿನ ಹಿಂದೆ ಮಸುಗತ್ತಲು ತುಂಬಿದ್ದ ಬಾಹ್ಯ ಜಗತ್ತು ಮಂದ ಬೆಳಕಿನಿಂದ ತುಂಬಿ ತುಳುಕಿ ತೆರೆದ ಕಿಟಕಿಯೊಳಗೂ ಕೋಲು ಕೋಲಾಗಿ ಮೈಚಾಚಿತು. ರುದ್ರಗಂಭೀರ ಶಾಂತ ವಾತಾವರಣ ತದೇಕ ಚಿಂತನೆಗೆ ಇಂಬುಕೊಟ್ಟಿತು.

ಅನಂತರ ಎಷ್ಟೇ ಪ್ರಯತ್ನಿಸಿದರೂ ನಿದ್ದೆ ಬರಲಿಲ್ಲ.

ಧೂಳೀಕಣಕ್ಕಿಂತಲೂ ಕಡೆಯಾಗಿ ಅವಮಾನಿತ ಅಭಿಮಾನ ಮನಃಪ್ರಾಣಗಳನ್ನು ಗಾಣಕ್ಕೆ ಕೊಟ್ಟ ಕಬ್ಬಿನಂತೆ ಹಿಂಡುತಿತ್ತು. ಹಾಗೇ ವಿಚಾರ ಮಗ್ನಳಾದಳು. ಕಾತರ-ಕಳವಳಯುಕ್ತ ಹೃದಯ ಸಹಸ್ರ ಸಹಸ್ರ ಸ್ರೋತಗಳಾಗಿ ಹರಿಯುತ್ತಿರುವಂತೆ ಭಾಸವಾಯಿತು. ಕಾಲಮಾನ ಬ್ರಾಹ್ಮೀ ಮುಹೂರ್ತಕ್ಕೆ ಹೆಜ್ಜೆ ಇಟ್ಟಾಗ ವಾಯುಮಂಡಲದಲ್ಲಿ ಅತೀವ ಶೈತ್ಯಾರಂಭವಾಗಿ ಮೈಯಲ್ಲಿ ಚಳಿ ಮೂಡಿತು. ಕಾಲದೆಶೆಯಲ್ಲಿ ಮುದುಡಿ ಬಿದ್ದಿದ್ದ ಹೊದ್ದಿಕೆಯನ್ನು ಮೇಲೆಳೆದುಕೊಂಡಳು ನಿರ್ಮಲ. ಪಕ್ಕದ ಹಾಸಿಗೆಯಲ್ಲಿ ಮಲಗಿದ ತಾಯಿ ಸುಖ ನಿದ್ದೆಯಲ್ಲಿದ್ದಾಳೆ.

ಹೊತ್ತು ಉರುಳಿತು. ಮುಂಬೆಳಕು ಮೂಡುತ್ತಿದೆ.

ಏಳಬೇಕು, ಆದರೆ ಚಿತ್ತ ಪ್ರಮತ್ತವಾಗಿಲ್ಲ. ತಾಯಿ ಎದ್ದು ನಿತ್ಯಕರ್ಮಗಳನ್ನು ಆರಂಭಿಸಿ ಎಷ್ಟೋ ಹೊತ್ತಿನಮೇಲೆ ಎದ್ದು ಹಾಸಿಗೆ ಸುತ್ತಿದಳು. ಎಂದಿಲ್ಲದ ನೈರಾಶ್ಯಭಾವದಲ್ಲಿ ದಿನಚರಿ ಆರಂಭವಾಯಿತು. ಮಗಳ ವಿಚಿತ್ರ ನಡತೆ ತಾಯಿಯ ಗಮನವನ್ನು ಸೆಳೆಯಿತು. ಮಾತೃ ಸಹಜವಾದ ಕಾತರ ಭಾವದಿಂದ ಪ್ರಶ್ನಿಸಿದಳು,

"ಏನಮ್ಮಾ, ಬಹಳ ಸಪ್ಪೆಯಾಗಿದ್ದಿ ?"

"ಏನೂ ಇಲ್ಲ....ಬಹುಶಃ ಸೋಮಾರಿತನ ಇರಬಹುದು."

ಪರಿಮ್ಲಾನವಾದ ಮುಖಬಿಂಬದಲ್ಲಿ ಪ್ರಯತ್ನ ಪೂರ್ವಕವಾಗಿ ತಿಳಿನಗೆಯನ್ನು ತೇಲಿಸಿದಳು ನಿರ್ಮಲ.

"ಇಲ್ಲಮ್ಮಾ, ಏನೋ ಒಂದು ತರವಾಗಿದ್ದಿ, ಮೈಯಲ್ಲಿ ಚೆನ್ನಾಗಿಲ್ಲವೆ? ರಾತ್ರಿ ಜ್ವರ ಬಂದಿತ್ತೇ ಹೇಗೆ?" ಎಂದು ಹಣೆಯನ್ನು ಮುಟ್ಟಿನೋಡಿ ಪುನಃ ಮುಂದುವರಿದಳು "ಕಣ್ಣಿನ ಸುತ್ತ ಕಪ್ಪು ಹೆಪ್ಪುಗಟ್ಟಿದೆ.......ಬಹಳ ಬಳಲಿದ್ದಿ ಎಂದು ತೋರುತ್ತೆ,"

"ಇಲ್ಲ...." ಮುಂದೆ ಪ್ರಯತ್ನಿಸಿದರೂ ಮಾತುಗಳು ಹೊರಡಲಿಲ್ಲ. ತನ್ನಂತರಂಗಕ್ಕೆ ಸಂಬಂಧಿಸಿದ ಮಹಾ ಕ್ಷೋಭೆಯನ್ನು ತೋರಗೊಡದಿರಲು ದಿನಚರಿಯಲ್ಲಿ ಯಥಾರೀತಿ ತೊಡಗಿದಳು. ಆದರೂ ತಾಪದಗ್ಧ ಮಸ್ತಿಷ್ಕ ಛಿನ್ನವಿಚ್ಛಿನ್ನವಾದಂತೆ ಭಾಸವಾಗುತಿತ್ತು. ಹೃದಯ ಕುಂಡಲಿನಿಯಲ್ಲಿ ಹರಿದಾಡುವ ನೆತ್ತರು ಅಲ್ಲಲ್ಲಿ ಸಿಕ್ಕಿಕೊಂಡಂತೆ ಹಿಂಸೆಯಾಗುತಿತ್ತು.

"ಮತ್ತೇಕೆ ಶ್ರಮ ತೆಗೆದುಕೊಳ್ಳುತ್ತಿ ? ಈದಿನ ಮನೆಯಲ್ಲೇ ಇದ್ದು ವಿಶ್ರಾಂತಿ ತೆಗೆದುಕೊ."

"ಕೆಲಸ ಇಲ್ಲದಿದ್ದರೆ ಕಾಹಿಲೆ ಇನ್ನೂ ಹೆಚ್ಚುತ್ತೆ....ನನಗೇನೂ ಆಗಿಲ್ಲ, ಬಿಡಿ."

ನಿರ್ಮಲ ಶಾಲೆಯ ಹಾದಿಯನ್ನು ತುಳಿದಾಗ ಬಾಲರವಿ ಬಾನೇರುತಿದ್ದ. ಬೃಹದ್ ನಗರದ ಚಟುವಟಿಕೆ ಆರಂಭವಾಗಿ ಬಿಸಿಯೇರಿತ್ತು. ವಾಹನಗಳ ಸದ್ದು-ಗದ್ದಲ ಕಿವಿಯನ್ನು ಗಡಚಿಕ್ಕುವಂತಿತ್ತು. ಜನಗಳ ಮಾತಿನ ಮರ್ಮರ, ಹೆಜ್ಜೆಗಳ ಪಟಪಟಾತ್ಕಾರ ಶ್ರುತಿಮೇಳವಾಗಿದ್ದುವು. ಹಾದಿ ಎಷ್ಟು ದೂರ ಸಾಗಿತೋ ಅದರೆಡೆಗೆ ಪರಿವೆಯೇ ಇರಲಿಲ್ಲ. ವಾಮಮಾರ್ಗದಿಂದ ಹೆದ್ದಾರಿಗೆ ಪದಾರ್ಪಣೆ ಮಾಡಿದಾಗ ಅನಿರೀಕ್ಷಿತವಾಗಿ ಅಮರನಾಥನ ಭೇಟಿಯಾಯಿತು. ಆದರೆ, ಅವನನ್ನು ನೋಡಿ ಮನಸ್ಸು ಉತ್ಸುಕವಾಗುವ ಬದಲು 'ಮುಟ್ಟಿದರೆ ಮುನಿ' ಗಿಡದಂತೆ ಮುದುಡಿತು. ಸುಪ್ತವಾಗಿದ್ದ ದುಗುಡ ತಾಪಗಳು ತಲೆಯನ್ನು ಮುತ್ತಿದುವು. ಸಂಕಟಾವತರಣ ಒಡಲಲ್ಲಿ ಕಾವು ಮೂಡಿಸಿತು. ಹಣೆಯಮೇಲೆ ತುಂತುರು ತುಂತುರಾಗಿ ಬೆವರಿನ ಹನಿಗಳು ಹೊಮ್ಮಿದುವು. ಶರೀರ ಪ್ರಕೃತಿಸ್ಥಿತಿ ಒಂದೆರಡು ಕ್ಷಣದಲ್ಲಿ ಏರುಪೇರಾದರೂ

ಮನಸ್ಥಿತಿಯನ್ನು ತೋರುವಂತಿಲ್ಲ. ಸುಮ್ಮನೆ ಪ್ರಾಸಂಗಿಕವಾಗಿ ನೋಟ ಅತ್ತ ಹೊರಳಿದಾಗ ಪರಸ್ಪರ ಭೇಟಿಯ ಕುರುಹಾಗಿ ತುಟಿಗಳಲ್ಲಿ ಮುಗುಳ್ನಗು ಮೂಡಿ ಮಾಯವಾಯಿತು. ಏನೆನ್ನಬೇಕೋ, ಎಂತು ಆರಂಭಿಸಬೇಕೋ ಹೊಳೆಯದೆ ಚಡಪಡಿಸುತ್ತಿರುವುದನ್ನು ಕಂಡು ಅವನೇ ನಿರಾಳವಾಗಿ ಮಾತು ಆರಂಭಿಸಿದ,

"ನನಗೆ ಈಚೀಚೆಗಂತೂ ಬಹಳ ಕೆಲಸ, ಒಂದು ಘಳಿಗೆಯೂ ಬಿಡುವಾಗುವುದಿಲ್ಲ. ಸ್ವಂತ ವಿಚಾರ ಮೂಲೆಗೆ ಬಿದ್ದಿದೆ."

ಅದು ಯಾವುದೋ ಮಹಾಕಾರ್ಯಕ್ಕೆ ಪೀಠಿಕೆ ಎನಿಸಿತು ನಿರ್ಮಲಳಿಗೆ. ಅವನು ಅದೇ ಧಾಟಿಯಲ್ಲಿ ಮುಂದುವರಿದ "ನಿಮ್ಮ ವಿಚಾರದಲ್ಲಿ ಅನುಕಂಪ ಇಲ್ಲ ಎಂದುಕೊಳ್ಳಬೇಡಿ; ಸದಾಕಾಲವೂ ಜಾಗ್ರತ ಚಟುವಟಿಕೆಯಿಂದಿರುವುದರಿಂದ ದುಃಖ ದುಗುಡಗಳು ಹತ್ತಿರ ಸುಳಿಯುವುದಿಲ್ಲ. ಅದೇ ಏಕಮಾತ್ರ ಸುಖ."

ನಿರ್ಮಲ ತಲೆಬಾಗಿ ಚಿಂತಿಸಿದಳು.

ಆತನ ವಿಷಯ ನಿರೂಪಣೆಯಲ್ಲಿ ಹರಿದ ಕುತಂತ್ರದ ಜಾಲ ಮುಳ್ಳಿನ ಪಂಕದಂತೆ ಮೈಯನ್ನು ಚುಚ್ಚಿತು. ಮನಃಪ್ರಾಣಗಳು ನಸುಕಂಪನಕ್ಕೊಳಗಾದುವು. ಏನಾದರೂ ಹೇಳಬೇಕೆಂದರೆ ವಿಷಯಗಳೇ ನಿಚ್ಚಳವಾಗಿ ಹೊಳೆಯುತ್ತಿಲ್ಲ. ಏನೋ ಒಂದು ರೀತಿಯಲ್ಲಿ ಮಂತ್ರಿತಳಂತೆ ಹೆಜ್ಜೆ ಹಾಕಿದಳು.

"ನಾವೊಂದು ಯೋಜನೆ ಹೂಡಿದರೆ ವಿಧಿ ಇನ್ನೊಂದು ಯೋಜನೆ ಹೂಡುತ್ತೆ. ಉಸ್ಮಾನಿಯಾ ಯೂನಿವರ್ಸಿಟಿಗೆ ನಾನಿನ್ನೂ ಉತ್ತರ ಕೊಟ್ಟಿಲ್ಲ. ಆ ವಿಚಾರದಲ್ಲಿ ಯಾವ ನಿರ್ಧಾರವನ್ನೂ ಈವರೆಗೆ ನಾನು ಕೈಕೊಂಡಿಲ್ಲ. ಆದದ್ದಾಗಲೀ ಎಂದು ಸುಮ್ಮನಿದ್ದು ಬಿಟ್ಟಿರುವೆ."

ನಿರ್ಮಲ ಕತ್ತೆತ್ತಿ ನೋಡಿ ಸುಮ್ಮನಾದಳು. ಆತ ಈ ವಿಚಾರದಲ್ಲಿ ತನ್ನ ಅಭಿಪ್ರಾಯವನ್ನು ಸುಮ್ಮನೆ ಪ್ರಾಸಂಗಿಕವಾಗಿ ಕೇಳಬಹುದು ಎಂದೆನಿಸಿದ್ದರೂ ಆ ಪ್ರಶ್ನೆ ಹೊಮ್ಮಲಿಲ್ಲ. ಖಡಾಖಂಡಿತವಾಗಿ ಅವನು ತನ್ನನ್ನು ನಿರಾಕರಿಸುತಿದ್ದಾನೆ ಎಂಬುದು ಕ್ಷಣಕ್ಷಣಕ್ಕೂ ಸ್ಪಷ್ಟವಾಗುತಿತ್ತು. ಗಾಢವಾದ ಚಿಂತೆಯ ಸುಳಿಯಲ್ಲಿ ಸಿಕ್ಕಿ ತತ್ತರಿಸಿದಳು.

"ಏಕೆ, ಏನೋ ಒಂದು ರೀತಿಯಾಗಿದ್ದೀರಿ....ಮೈಯಲ್ಲಿ ಹುಷಾ

ರಿಲ್ಲವೆ ?"

ಆ ಪ್ರಶ್ನೆ ಹೊರಬಿದ್ದನಂತರ ತಾನು ಅದೊಂದು ಕಾರಣ ಕೊಡಬಹುದು ಎಂಬ ವಿಚಾರ ಹೊಳೆಯಿತು. ಅದೇ ಉತ್ತರವನ್ನು ಪ್ರಯತ್ನಪೂರ್ವಕವಾಗಿ ಹೊರಹಾಕಿದಳು, "ಹೌದು; ಕೆಲವು ದಿನಗಳಿಂದ ಆರೋಗ್ಯ ಸರಿಯಾಗಿಲ್ಲ."

"ಮತ್ತೇಕೆ ರಜೆ ತೆಗೆದುಕೊಳ್ಳಲಿಲ್ಲ ?"

"ಕೆಲಸವಿಲ್ಲದೆ ಇರುವುದು ಕಷ್ಟ...."

ಅಷ್ಟರಿಂದ ನಿರ್ಮಲ ಈ ಸಲ ಹಣ ಕೇಳಿಯೇ ತೀರಬೇಕೆಂಬ ತೀರ್ಮಾನಕ್ಕೆ ಬಂದು ಮೆಲುದನಿಯಲ್ಲಿ ಪ್ರಶ್ನೆಯನ್ನು ಮುಂದಿಟ್ಟಳು "ನಾನು ಈ ಸಾಲಿನಲ್ಲಿ ಎಂ.ಎ.,ಗೆ ಸೇರುವುದೆಂದು ಯೋಚಿಸಿರುವೆ. ಅದಕ್ಕೆ ಪ್ರಿನ್ಸಿಪಲ್ ಒಪ್ಪಿಗೆ ಕೊಟ್ಟಿದ್ದಾರೆ. ನಾನು ನಿಮಗೆ ಕೊಟ್ಟ ಆರ್ಥಿಕ ನೆರವು ಈಗ ನನಗೆ ಬಹಳ ಅಗತ್ಯವಾಗಿದೆ. ದಯವಿಟ್ಟು ನೀವು ಬೇಸರಿಸಬಾರದು."

"ಛೆಃ ! ಛೆಃ ! ಬೇಸರವೇಕೆ ಅಪ್ಲಿಕೇಶನ್ ಹಾಕಿ."

ನುಡಿ ತೊಟ್ಟು ಕಳಚಿದಂತೆ ಹೊರಬಿತ್ತು. ಅಮರನಾಥ ಅವಳ ಪ್ರತಿಕ್ರಿಯೆಯನ್ನು ಗಮನಿಸಲು ಕಳ್ಳನೋಟದಿಂದ ನೋಡಿ, ಪುನಃ ನೇರ ಹಾದಿಯೆಡೆಗೆ ದೃಷ್ಟಿಯನ್ನು ಯಥಾರೀತಿ ಹೊರಳಿಸಿದ. ತಲೆಯಲ್ಲಿ ನೂರಾರು ಭಾವನೆಗಳ ರೈಲು ಓಡುತಿತ್ತು. ನರನಾಡಿಗಳಲ್ಲಿ ಬಿಸಿನೆತ್ತರಿನ ಝರಿ ಮಿಂಚಿನಂತೆ ಹರಿದಾಡಿತು.

ಅತೀವ ಮನಃಪ್ರವಾಹದ ಉನ್ಮಾದಕತೆಯಲ್ಲಿ ಹಾದಿ ಸಾಗುತ್ತಲೇ ಇತ್ತು.

ಅವಳ ಅಂತರ್ಗತ ಮರ್ಮವೇದನೆ ಸಹಜ ಅನುಭಾವದ ಅಲೆಗಳ ಮೇಲೆ ಪಿಟೀಲಿನ ಕಮಾನಿನಂತೆ ಹರಿದಾಡುತಿತ್ತು. ಒಮ್ಮೆ ತನ್ನನ್ನು ತಾನು ಸಾಹಸಪೂರ್ವಕವಾಗಿ ಹತೋಟಿಗೆ ತೆಗೆದುಕೊಂಡು ಗಂಭೀರ ಧ್ವನಿಯಲ್ಲಿ ನುಡಿದಳು "ಹಾಗಾದರೆ ಅಪ್ಲಿಕೇಶನ್ ಹಾಕಲೇ ?"

"ಹಾಕಿರಿ. ಅದಕ್ಕೇಕೆ ಚಿಂತೆ ?"

"........"

"ಜೀವನ ಎಂಬುದು ಅವಸರಿಸುವ ವಿಷಯವಲ್ಲ. ಕಾಲ ಪಕ್ವವಾಗಲಿ,

ಇನ್ನೊಮ್ಮೆ ವಿಚಾರ ಮಾಡೋಣ." ಎಂದ. ನುಡಿ ಪ್ರಯತ್ನ ಪೂರ್ವಕವಾಗಿ ಹೊರಬಿತ್ತು.

ನಿರ್ಮಲ ತಲೆಯೆತ್ತಿ ಅವನ ಮುಖವನ್ನೊಮ್ಮೆ ನೋಡಿದಳು.

–ಆಗ ಕಂಡದ್ದೇನು ?

ಆ ಮೇಘಾಚ್ಛಾದಿತ ಮುಖಮಂಡಲದಲ್ಲಿ ಅನಿರ್ವಚನೀಯವಾದ ಭಾವ ವಿಭಾವಗಳ ಅಲೆ ಸುಳಿಸುಳಿದಳಿಯುತಿತ್ತು. ವಿಷಯ ನಿರೂಪಣೆಯಲ್ಲಿ ಕೃತ್ರಿಮತೆ ಸ್ವಚ್ಛಂದವಾಗಿ ಹರಿದಿತ್ತು. ಪ್ರೇಮಾನುರಾಗ ಲವಲೇಶವೂ ಉಳಿದಿಲ್ಲ ಎಂಬುದನ್ನು ಕದಂಬ ಕೇಸರದಂತೆ ಉತ್ಕರ್ಣವಾದ ರೋಮರೋಮಗಳು ಸಾರಿ ಹೇಳುತಿದ್ದುವು. ಉರುಳುವ ಕ್ಷಣಕ್ಷಣಗಳು ನೀನು 'ಕೆಟ್ಟೆ' ಎಂದು ಚೀರಿದುವು. ದೇಹದಾದ್ಯಂತ ಹರಿದಾಡುವ ನೆತ್ತರು ಮೆಲ್ಲಮೆಲ್ಲನೆ ತಣ್ಣಗಾಗುತ್ತಿರುವಂತೆ ಭಾಸವಾಯಿತು. ಮುಂದಿನ ಹತ್ತುಮಾರು ಹೇಗೆ ಕಳೆಯಿತೋ ತಿಳಿಯದು. ಈ ಕ್ಷುದ್ರ ಜಗತ್ತಿನಿಂದ ಎಲ್ಲಿಗಾದರೂ ಓಡಬಹುದಾಗಿದ್ದರೆ....? ಅಂತಹ ದೂರದ ನೆಲೆಯಾದರೂ ಯಾವುದು ?.... ಎಲ್ಲಿರಬಹುದು ??

ಮಾನಹಾನಿ ! ಅರ್ಥಹಾನಿ !

ಬಹುಕಾಲದಿಂದ ಸಂಗ್ರಹೀತವಾದ ಬಹುಮೂಲ್ಯವಾದ ವಸ್ತುಗಳೆರಡನ್ನು ಕಳೆದುಕೊಂಡಿದ್ದಾಯ್ತು. ಇನ್ನು ಬದುಕು ವ್ಯರ್ಥ....ಎಂದು ಅಂತರ್ವಾಣಿ ಕೂಗಿ ಹೇಳಿತು. ಆಗ ಅನುಭವಿಸಿದ ಮರ್ಮಾಂತಿಕ ವೇದನೆಯಿಂದ ಕಣ್ಣ ಮುಂದಿನ ವಸ್ತು ಸಮಸ್ತವೂ ಗಿರಗಿರ ಸುತ್ತಿದಂತಾಯಿತು. ಸದ್ಯ, ಹಾದಿಯಲ್ಲಿ ಕುಸಿದು ಬೀಳದಿದ್ದರೆ ಸಾಕು ಎಂಬ ವಿವೇಚನೆಯಲ್ಲಿ ಘಳಿಗೆ ಘಳಿಗೆಗಳು ನಿಷ್ಕ್ರಮಿಸುತಿದ್ದುವು. ಕವಲು ಹಾದಿಯನ್ನು ಹಿಡಿಯುವ ಮುನ್ನ ಮತ್ತೊಮ್ಮೆ ಅವನೆಡೆಗೆ ದೃಷ್ಟಿ ಹರಿಸುವ ಸಾಹಸ ಮಾಡಲಾಗಲಿಲ್ಲ. ಅವನು ದ್ರುತಗತಿಯಲ್ಲಿ ಕಾಲೇಜಿನತ್ತ ಹೆಜ್ಜೆ ಹಾಕಿದ. ಅವಳು ವಿಶ್ರಾಂತಿ ಕೊಠಡಿಗೆ ಹೋಗಿ ಮೈ ಚೆಲ್ಲಿದಳು. ಕದಡಿ ಬಗ್ಗಡವಾದ ಮನಕ್ಕೆ ಯಾವರೀತಿ ಸಾಂತ್ವನಗೈಯ್ಯಬೇಕೋ ತಿಳಿಯದು. ಇಷ್ಟರಲ್ಲೇ ಯಾರಾದರೂ ಸಹೋದ್ಯೋಗಿಗಳು ಬರಬಹುದು. ಅವರ ಮುಂದೆ ಆಂತರಂಗಿಕ ಪರಿತಾಪ ಪ್ರದರ್ಶನ ಸರಿಯಲ್ಲವೆಂಬುದು ಮನೋವೇದ್ಯವಾದರೂ ಹೃದಯದಲ್ಲಿ ನೆತ್ತರಿನ ಕಣಕಣವೂ ಸಂಕಟದ ಮಡುವನ್ನು ನಿರ್ಮಿಸಿಕೊಂಡಿದ್ದುವು. ತನ್ನನ್ನು ತಾನು ನಿಗ್ರಹಿಸಿಕೊ

ಳ್ಳುವ ಸಲುವಾಗಿ ಮಾಸಿಕವೊಂದರಮೇಲೆ ಮನವನ್ನು ಹರಿಯಬಿಟ್ಟಳು. ಬಹಿರ್ದೃಷ್ಟಿ ಅಕ್ಷರಗಳ ಮೇಲೆ ಹರಿದರೂ ಅಂತರ್ದೃಷ್ಟಿಕೋನವೇ ಬೇರೆ.

ಪ್ರಾಯಶಃ,

ಈ ಬೃಹದ್‌ಸಮಾಜ ವ್ಯವಸ್ಥೆಯಲ್ಲಿ ಆಶ್ರಯ ಪಡೆದ ಸುಳ್ಳು-ಮೋಸ ಅನೀತಿ-ಅಧರ್ಮಗಳ ಜಾಲದಲ್ಲಿ ಯಾವುದೇ ಕಲ್ಯಾಣ ಕಾರ್ಯ ಮಾಡಬೇಕೆಂದರೆ ಆಗುವುದು ಇಷ್ಟೆ....ಅದಕ್ಕೆ ಬರಬಹುದಾದ ಬೆಲೆಯೂ ಸಹ ಇಷ್ಟೆ. ಪುರುಷನೀತಿ ಭುಜಂಗಕ್ಕಿಂತಲೂ ಕ್ರೂರ ಎಂಬುದಕ್ಕೆ ಮಾನವ ಇತಿಹಾಸವೇ ಸಾಕ್ಷಿ. ಆದರೂ ಸಂಪೂರ್ಣ ನಂಬಿದುದು ತಪ್ಪು... ಎಂದೆನಿಸಿದಾಗ ತನ್ನನ್ನು ತಾನೇ ನಿಂದಿಸಿಕೊಂಡಳು. ದುರ್ದಮ್ಯವಾದ ಅಂತರ್ಗತ ಪರಿತಾಪದಿಂದ ದೇಹದಾದ್ಯಂತ ನಸುಕಂಪನದ ಅಲೆ ಹರಿದಾಡುತಿತ್ತು. ಮನಃಪ್ರಾಣಗಳು ಜಡೀಭೂತವಾದಂತೆ ಮೂರ್ತಿಮತ್ತಾಗಿ ಕುಳಿತುಬಿಟ್ಟಳು. ಟ್ಯೂಶನ್ನಿಗೆ ಮಕ್ಕಳು ಬಂದಿರುತ್ತಾರೆಂಬ ವಿಚಾರ ಮನಃಪಟಲದಿಂದ ಸಂಪೂರ್ಣ ಅಳಿಸಿಯೇ ಹೋಯಿತೇನೋ....ಕಮಲೂ ಒಳಬಂದು ಹಣಿಕಿದಾಗಲೇ ಇತ್ತ ಗಮನ.

"ಮಕ್ಕಳೆಲ್ಲ ಟ್ಯೂಶನ್ನಿಗಾಗಿ ಕಾಯುತಿದ್ದಾರೆ."

"ಓ....! ಮರೆತುಬಿಟ್ಟಿದ್ದೆ. ಇಲ್ಲಿ ಸ್ವಲ್ಪ...." ಎಂದು ತನ್ನ ಲಜ್ಜಾಸ್ಪದ ವಿಚಾರವನ್ನು ಮರೆಮಾಚಿ ಅವಳನ್ನು ಕುರಿತು ಕೇಳಿದಳು "ಈಗ ನಿನ್ನ ಸಂಸಾರ ಹೇಗಿದೆ ಕಮಲೂ ?"

"ಹಾಗೇ ಇದೆ....ಈಗಲೂ ಹೊಡೆತ ಬಡಿತ ತಪ್ಪಲಿಲ್ಲ. ಮಕ್ಕಳಿದ್ದಾರೆ, ಬದುಕಬೇಕು ; ಬದುಕುತಿದ್ದೇನೆ."

"ಈಗ ಕುಡಿಯುವಷ್ಟು ಹಣ ಅವನ ಕೈಗೆ ಸಿಕ್ಕುತ್ತಿಲ್ಲವಲ್ಲಾ ?"

"ಅವನು ಕೇಳಬೇಕಲ್ಲ....? ರೈಟರನ್ನು ಕಾಡಿ ಬೇಡಿ ಅದೂ ಇದೂ ಸುಳ್ಳು ನೆವ ಹೇಳಿ ಆಗಾಗ ಹಣ ತೆಗೆದುಕೊಳ್ಳುತ್ತಲೇ ಇರುತ್ತಾನೆ. ಕುಡಿಯಲಿ ಬಿಡಲಿ ಹೊಡೆತ ಮಾತ್ರ ತಪ್ಪುವುದೇ ಇಲ್ಲ. ನನಗಷ್ಟೇ ಅಲ್ಲ ಮಕ್ಕಳಿಗೂ ಬೀಳುತ್ತವೆ. ತುಂಬಾ ಒರಟುತನ" ಹೇಳುಹೇಳುತ್ತ ಮುಸುಮುಸು ಅತ್ತಳು ಕಮಲು.

"ಹಾಗೆಂದು ಪ್ರಿನ್ಸಿಪಾಲರಿಗೆ ಹೇಳು ನಮ್ಮಲ್ಲೇ ಹಿಂಭಾಗದಲ್ಲಿ ಒಂದು

ಕೊಠಡಿ ಖಾಲಿ ಇದೆ. ಪ್ರಿನ್ಸಿಪಾಲರನ್ನು ಕೇಳಿ ನಿನ್ನ ಸಂಸಾರವನ್ನು ಇಲ್ಲಿಗೆ ತಂದುಕೊ. ಇಲ್ಲಿದ್ದರೆ ಅವನಿಗೆ ಕುಡಿಯುವುದೇ ಆಗಲಿ ಹೊಡೆಯುವುದೇ ಆಗಲಿ ಸಾಧ್ಯವಿಲ್ಲ. ನಿನಗೂ ನಿನ್ನ ಮಕ್ಕಳಿಗೂ ಇದರಿಂದ ಬಹಳ ಅನುಕೂಲ ವಿದೆ. ಮಕ್ಕಳು ಇಲ್ಲೇ ವಿದ್ಯೆ ಕಲಿತು ಬುದ್ಧಿವಂತರೂ ಆಗುತ್ತಾರೆ."

ಕಂಠಪ್ಪನ ಎದೆಯಾಳದಿಂದ ಹರಿದುಬಂತು. ಕರುಣೆ-ಕಾತರ ತುಂಬಿದ ನೋಟದಿಂದ ನೋಡುತ್ತ ಪುನಃ ಒತ್ತಾಯಿಸಿದಳು "ಖಂಡಿತಾ ಉದಾಸೀನ ಮಾಡಬೇಡ; ಇಂದೇ ಪ್ರಿನ್ಸಿಪಾಲರನ್ನು ನೋಡಿ ನಿವೇದಿಸಿಕೋ. ಈಗ ಕೊಠಡಿ ಖಾಲಿ ಇದೆ; ಪ್ರಯತ್ನಿಸಿದರೆ ನಿನಗೆ ದೊರೆಯುತ್ತದೆ. ಅದು ಭರ್ತಿ ಯಾದರೆ ಸಿಗುವುದು ಕಷ್ಟ."

"ಆಗಲಿ; ದೇವರು ನಿಮ್ಮ ಮೂಲಕ ನನಗೆ ಸಹಾಯ ಮಾಡುತಿದ್ದಾನೆ" ಎನ್ನುತ್ತ ಕಂಬನಿಯನ್ನು ಉಟ್ಟ ಬಟ್ಟೆಯಿಂದಲೇ ಒರಿಸಿಕೊಂಡಳು ಕಮಲು. ದುಃಖಭರಿತ ಹೃದಯ ಛಿದ್ರವಿಛಿದ್ರವಾದಂತೆ ಭಾಸವಾಯಿತು.

ನಿರ್ಮಲ ಭಾರವಾದ ಹೆಜ್ಜೆಗಳನ್ನೆಳೆದುಕೊಳ್ಳುತ್ತ ಮೆಟ್ಟಿಲಿಳಿದಳು. ವಿಚಿತ್ರ ವಿಶ್ವಪ್ರಪಂಚದ ದೀನರು ದುಃಖಿಗಳು ಅಂತಃಪಟಲದ ಮೇಲೆ ಸಾಲು ಗಟ್ಟಿ ಘೇರಿ ನಡೆಸುತಿದ್ದರು.

## ೩೩

....ದೂರ ದೂರ ದಿಗಂತದಲ್ಲಿ ಶತಸಹಸ್ರ ಶ್ವೇತಪಂಕಜ ಮಾಲೆ ಗಳಂತೆ ಮೈವೆತ್ತ ಮಂದಾಕಿನೀಧಾರೆ!

....ಪ್ರಾತಃಕಾಲೀನ ಶುಭ್ರಮನೋಹರ ಶಾಂತ ಶೀತಲ ನೀಲಿಮಾ ಘನ ವಿಸ್ತಾರ!

....ಮಾಲತೀಮಾಲಾ ಸಮನ್ವಿತ ಚೇತೋಹಾರೀ ಸಾರಸಗಳ ಸರಸ ಕ್ರೇಂಕಾರ!

....ಅರುಣಕಿರಣಗಳ ರಾಗಾರುಣತಾನ ವಾರಿಧಾರೆಯಲ್ಲಿ ಶತಕೋಟಿ ವರ್ಣಗಳಲ್ಲಿ ವಿಭಜಿತವಾಗುತ್ತಿದೆ!

ದಿನಗಳಗಾಲಿಯುರುಳಿ ವಾರವೊಂದು ಕಳೆದುಹೋಯಿತು. ದಿನಚರಿ

ಯಾಂತ್ರಿಕವಾಗಿ ಕಳೆಯುತಿತ್ತು. ಪಾಠಪ್ರವಚನಗಳು ಎಂದಿನಂತೆಯೇ ನಡೆಯುತ್ತಿವೆ. ಆದರೂ ಚಿತ್ತಪ್ರವೃತ್ತಿ ಕಡಿವಾಣರಹಿತ ಕುದುರೆಯಂತಾಗಿದೆ. ಎಷ್ಟೇ ಪ್ರಯತ್ನಿಸಿದರೂ ಒಂದಡೆ ಕೇಂದ್ರೀಕೃತವಾಗುತ್ತಿಲ್ಲ. ಕ್ಷಣ ಕ್ಷಣಕ್ಕೂ 'ಮಾನಹಾನಿ–ಅರ್ಥಹಾನಿ' ಮಂತ್ರವನ್ನು ಪಠಿಸುತ್ತ ದಿಕ್ಕು ದಿಕ್ಕಿಗೆ ದೆಶೆಗೆಟ್ಟಂತೆ ನುಗ್ಗುತಿತ್ತು. ಅಂತರಾತ್ಮ ನಿರ್ಜನಸುಖವನ್ನು ಬಯಸುತಿತ್ತು. ಆದರೆ ಅಂತಹ ಸಮಯ ಮನೆಯಲ್ಲಾಗಲೀ ಶಾಲೆಯಲ್ಲಾಗಲೀ ದೊರೆಯಬೇಕಲ್ಲ? ನಿದ್ರಾಹೀನ ರಾತ್ರಿಗಳನ್ನು ಏಕಾಂತ ದುಃಖದಿಂದ ಕಳೆಯುವಾಗ ಏಕನಿಷ್ಠೆಯಿಂದ ಪರಿಹಾರವನ್ನು ಅರಸುವಾಗ ತಡಕುತಿದ್ದ ಹಾದಿಯಾದರೂ ಯಾವುದು? ಈ ವಿಚಿತ್ರ ಲೋಕಾಲಯದಲ್ಲಿ ಎಲ್ಲರೂ ಕೊಂಚ ಹಿಂಚು ಮುಂಚಾಗಿ ಧಾವಿಸುತ್ತಿರುವುದೂ ಸಹ ಅದೇ ಆ ಬೆಂಕಿಯ ಬಲೆಗೆ....

ಮಧ್ಯಾಹ್ನ ಕಾಲೀನ ತರುಣಾರುಣ ಬಾನ್ನೆತ್ತಿಯನ್ನೇರಿ ಅತ್ಯಂತ ಪ್ರಖರವಾದ ಕಿರಣಗಳನ್ನೆರಚುತ್ತ ವಿಜೃಂಭಿಸಿದ್ದ ಸುಡುಬಿಸಿಲು ಭುವಿಯಮೇಲೆ ಬೆಚ್ಚನ್ನ ತೆರೆಯನ್ನು ಕಮ್ಮಗೆ ಹರಡಿತ್ತು.

ನಿರ್ಮಲ ತರಗತಿಯಿಂದ ನೇರವಾಗಿ ವಿಶ್ರಾಂತಿ ಕೊಠಡಿಗೆ ಆಗಮಿಸಿದಾಗ ನಿರ್ಜನತಾಣ ಅದ್ಭುತ ಶಾಂತಿಯಿಂದ ಸ್ವಾಗತ ನೀಡಿ ಚಿಂತಿತ ಚಿತ್ತ ತುಸು ಹರ್ಷಗೊಂಡಿತು. ಒಮ್ಮೆಗೇ ಮೈ ಭಾರವನ್ನಿಳುಹುವ ಆಶಯದಿಂದ ಪಲ್ಲಂಕದ ಮೇಲೆ ಅಡ್ಡಾದಳು. ಹಾಗೆ ಕೆಲವು ನಿಮಿಷಗಳೂ ಸಹ ಕಳೆಯಲಿಲ್ಲವೇನೋ....ಮೇಜಿನ ಮೇಲಿದ್ದ ನೂತನ ಸಾಪ್ತಾಹಿಕವೊಂದು ಮನವನ್ನು ಸೆಳೆದುಕೊಂಡಿತು. ಎದ್ದು ಅದರಮೇಲೆ ಆಸಕ್ತಿಯಿಂದ ಕಣ್ಣಾಡಿಸಿದಳು. ಅದರ ಮೇಲೆ ಆಸಕ್ತಿಯಿಂದ ಕಣ್ಣಾಡಿಸಿದಳು. ಅದರ ಹೆಸರು 'Local Reveiw' ನೋಡಿದ ಪ್ರಥಮ ನೋಟಕ್ಕೆ ಅದು ಇಲ್ಲಿಯದಲ್ಲ ಎಂಬ ಅರಿವು ಮೂಡಿ ನೋಟ ತಲೆ ಬರೆಹದ ಮೇಲೆ ಹೊರಳಿತು. ಅದರ ಜನ್ಮದಾಣ ಹೈದರಾಬಾದ್....ಅರೆ! ಅದು ಇಲ್ಲಿಗೆ ಬರಬೇಕಾದರೆ ಎನೋ ವಿಶೇಷವೇ ಇರಬೇಕು ಎಂಬ ಕುತೂಹಲ ಕೆರಳಿ ಒಳಪುಟಗಳನ್ನು ಒಂದೊಂದಾಗಿ ತೆರೆದು ನೋಡಿದರೆ ತನ್ನ ಕಣ್ಣುಗಳನ್ನೇ ನಂಬಲಾಗಲಿಲ್ಲ....ಅಮರನಾಥನ ವೈವಾಹಿಕ ಚಿತ್ರ! ಅದರ ಕೆಳಗಡೆ ಆಗರ್ಭ ಶ್ರೀಮಂತರ ಮಗಳ ಆದ್ದೂರಿ ವಿವಾಹ ವರ್ಣನೆ!

ಆ ಅನಿರ್ವಚನೀಯವಾದ ವ್ಯಘಾತಕ್ಕೆ ಸಿಕ್ಕಿ ಜಜ್ಜರಿತ ಹೃದಯ

ವ್ಯಾಪ್ತಿಗೆ ಮೀರಿ ಮಿಡಿಯ ಹತ್ತಿತು. ಮೆಲ್ಲ ಮೆಲ್ಲನೆ ಕಣ್ಣುಗಳು ಮಂಜುಮಂಜಾಗ ತೊಡಗಿದುವು. ಪತ್ರಿಕೆ ಕೈಯಿಂದ ಜಾರಿತು. ಶಿರೋಭಾರವನ್ನು ಹಸ್ತದ ಮೇಲಿಳಿಸಿದಳು.

ಕೆಲವು ದಿನಗಳಿಂದ ಅಮರನಾಥ ದೃಷ್ಟಿಗೆ ಬಿದ್ದಿರಲಿಲ್ಲ. ಹಿಂದಿನದಿನ ಅಮರನಾಥನಬದಲಿಗೆ ಬಂದಿರುವುದಾಗಿ 'ರಾಮತೀರ್ಥ' ಎಂಬ ಉಪಾಧ್ಯಾಯನೊಬ್ಬ ತನ್ನನ್ನು ತಾನೇ ಸಹೋದ್ಯೋಗಿಗಳಿಗೆ ಪರಿಚಯಿಸಿದ್ದ. ಆಗಲೇ ಅಮರನಾಥ ಇಲ್ಲಿಯ ಕೆಲಸ ಬಿಟ್ಟಿದ್ದಾನೆ ಎಂಬುದರ ಅರಿವಾದುದು. ಲೀಲಾ ಪಾರ್ವತಿಯರು ಒಂದೇಬಾರಿಗೆ "ಇದುವರೆಗೂ ನಿನಗೆ ಗೊತ್ತಿರಲಿಲ್ಲವೇ? ಅಮರನಾಥ ನಿನಗೇನೂ ಹೇಳಲಿಲ್ಲವೇ?" ಎಂದಾಗ ತಲೆಗೆ ನೂರು ಬಾಣಗಳು ಒಂದೇ ಬಾರಿಗೆ ಹೊಕ್ಕಿದಂತಾಗಿತ್ತು.

ಈಗ....?

ಪ್ರಾಣವೇ ಚಿಮ್ಮುತ್ತಿರುವಂತೆ ಭಾಸವಾಗುತ್ತಿದೆ. ಆದರೆ ಅದು ಚಿಮ್ಮುತ್ತಲೇ ಇಲ್ಲ. ಚಿಮ್ಮಿದ್ದರೆ ಈ ಸಂಕಟವೇ ತಪ್ಪುತಿತ್ತು. ವಿಧಿ ಅಷ್ಟಾದರೂ ಉಪಕಾರ ಮಾಡಿದ್ದರೆ....? ಓ ...! ಭಗವಂತ, ಖಂಡಿತ ಅಷ್ಟು ಉಪಕಾರ ಮಾಡು!

ಅತ್ಯಂತ ಆರ್ತತೆ-ಆಕುಲಗಳಿಂದ ಬೇಡಿಕೊಂಡಿತು ಅಂತರಾತ್ಮ.

ಅದೇ ವೇಳೆಗೆ ಬಂದ ಲಿಂಗಯ್ಯ ಬಾಗಿಲಲ್ಲಿ ಹಣಿಕಿದ. ಮುಖಭಾವದಲ್ಲಿ ಆವುದೋ ಕಂಡರಿಯದ ಹೊಸತನ ಆವಿರ್ಭವಿಸಿತ್ತು. ಒಂದೆರಡು ಕ್ಷಣ ಆತನನ್ನು ನಿಟ್ಟಿಸಿನೋಡಿ ಕೇಳಲಾರದೆ ಕೇಳಿದಳು ನಿರ್ಮಲ "ಏನಪ್ಪಾ....?"

"ಇಲ್ಲೊಂದು ಪತ್ರಿಕೆ ತಂದಿಟ್ಟಿದ್ದೆ, ನೀವು ನೋಡಿದಿರಾ ಅವ್ವ?"

"ಹೌದು! ಈಗ ಯಾವುದೋ ನೋಡಿದೆ."

"ಅದು ಬೇಕಾಗಿತ್ತು."

"ಇದೇ ಏನು?"

ಕೆಳಗೆ ಬಿದ್ದು ಹೋದ ಪತ್ರಿಕೆಯನ್ನು ಕೈಗೆತ್ತಿಕೊಂಡು ಕೇಳಿದಳು ನಿರ್ಮಲ.

"ಹೌದು....!" ಎಲ್ಲಾ ಹಲ್ಲುಗಳನ್ನೂ ಒಮ್ಮೆಗೇ ಪ್ರದರ್ಶನ ಮಾಡಿ ಲಿಂಗಯ್ಯ ಪುನಃ ಅಂದ "ನೋಡಿ ಅವ್ವಾ! ಅಮರನಾಥ ಉಪಾಧ್ಯಾಯರು

ಅಲ್ಲಿಗೆ ಹೋಗಿ ಮದುವೆಯಾಗಿದ್ದಾರಂತೆ. ನಮ್ಮ ಆಫೀಸಿನಲ್ಲಿ ಎಲ್ಲರೂ 'ನಮಗೊಂದು ಪತ್ರಿಕೆಯೂ ಇಲ್ಲ.' ಎನ್ನುತಿದ್ದರು. ನನಗೂ ಒಂದು ಮಾತು ಹೇಳಲಿಲ್ಲ. ದಿನಾ ನಾನೇ ಅವರ ಕೊಠಡಿ ಗುಡಿಸಿ ಸ್ವಚ್ಛ ಮಾಡಿ ಬರುತಿದ್ದೆ. ಒಂದು ರೂಪಾಯಿ ಇನಾಮೂ ಕೊಡಲಿಲ್ಲ!"

"ನಿನಗೆಲ್ಲಿತ್ತು ಈ ಪತ್ರಿಕೆ?"

"ಆಫೀಸಿನಲ್ಲಿ ಅನಂತರಾಯರು ಇಟ್ಟುಕೊಂಡಿದ್ದರು."

"ಇಲ್ಲಿಗೇಕೆ ತಂದೆ?"

"ಅವರೇ ಕೊಟ್ಟರು....ನಿಮಗೆಲ್ಲಾ ತೋರುವ ಸಲುವಾಗಿಯೇ ಅವರು ಕೊಟ್ಟಿದ್ದು. ಆಗಲೇ ತಂದೆ. ಇಲ್ಲಿ ನೀವ್ಯಾರೂ ಇರಲಿಲ್ಲ. ಹಾಗೇ ಇಲ್ಲಿಟ್ಟು ಹೋದೆ."

"ಲೀಲಾ ಪಾರ್ವತಿಯರು ನೋಡಿದ್ದಾರೆಯೆ?"

"ಬಹುಶಃ, ಇಲ್ಲ ಎನ್ನಿಸುತ್ತೆ. ಅವರಿಗೂ ತೋರಬೇಕು."

"ಇಗೋ....ತೆಗೆದುಕೊಂಡು ಹೋಗು."

ಭಾರವಾದ ಹಸ್ತದಿಂದ ಪತ್ರಿಕೆಯನ್ನು ಅವನೆಡೆಗೆ ನೀಡಿದಳು ನಿರ್ಮಲ.

ಅವನು ಒಳಪುಟವನ್ನು ತೆರೆದು ಚಿತ್ರದ ಮೇಲೆ ಅಚ್ಚರಿ ತುಂಬಿದ ಕಣ್ಣಾಲಿಗಳನ್ನು ಹೊರಳಿಸಿ ಅಂದ,

"ಒಂದು ಮಾತು ಎಲ್ಲರಿಗೂ ಹೇಳಿ ಹೋಗಿದ್ದರೆ ಅವರಿಗೆ ಏನು ನಷ್ಟವಾಗುತಿತ್ತೋ?"

"ಬಹುಶಃ ಬಹಳ ಅವಸರದಿಂದ ಹೊರಟಿರಬಹುದು."

ತನ್ನ ಮನೋವೇದನೆಯನ್ನು ತೋರದಿರಲಾದರೂ ಒಂದು ಮಾತು ಹೇಳುವುದು ಅವಶ್ಯಕ ಎನಿಸಿದ್ದುದರಿಂದ ಅತ್ಯಂತ ಪ್ರಯತ್ನಪೂರ್ವಕವಾಗಿ ಆ ನುಡಿಯನ್ನು ಹೊರಹಾಕಿದ್ದಳು ನಿರ್ಮಲ. ಹಣೆಯ ಮೇಲೆ ತುಂತುರು ತುಂತುರಾಗಿ ಶ್ರಮಬಿಂದುಗಳು ಮೂಡಿದುವು.

"ಅಯ್ಯೋ, ಬಿಡಿ ತಾಯಿ! ಇದೆಲ್ಲ ಚೆಂದಲ್ಲ. ಇಲ್ಲಿ ಎಷ್ಟು ಜನ ಉಪಾಧ್ಯಾಯರು ಮದುವೆ ಮಾಡಿಕೊಳ್ಳಲಿಲ್ಲ? ಯಾರೂ ಇಷ್ಟೊಂದು ಜಂಭ ಮಾಡಲಿಲ್ಲ. ಇವರದ್ದೇನೊ ವಿಚಿತ್ರ?"

ನಿರ್ಮಲ ಭಾರವಾದ ಉಸಿರನ್ನು ಹೊರಹಾಕಿದರೂ ತುಟಿಗಳಲ್ಲಿ

ಮುಗುಳುನಗೆ ಬೀರಿ ಸುಮ್ಮನಾದಳು. ಅವನು ಒಮ್ಮೆ ಅಲ್ಲಿಂದ ಹೋಗಿದ್ದರೆ ಸಾಕಾಗಿತ್ತು. ಅಂತಲೇ ಅವನಿಗೊಂದು ಕೆಲಸ ಹಚ್ಚುವ ಸಲುವಾಗಿ ಹೇಳಿದಳು,

"ಸಿಸ್ಟರ್ ಲ್ಹಾರಾ ಆಗ ನಿನ್ನ ಕೇಳುತಿದ್ದರು. ಹೋಗಿ ನೋಡು."

"ಆಗಲಿ ಅವ್ವಾ!" ಎನ್ನುತ್ತ ಅವನು ಹೊರಟ.

ನಿರ್ಮಲ ದೈನ್ಯವೇ ಮೂರ್ತಿಯೆತ್ತಿ ಬಂದಂತೆ ಜಡೀಭೂತಳಾಗಿ ಕುಳಿತುಕೊಂಡಳು. ಹೃದಯರಂಗದಲ್ಲಿ ಅಸಹನೀಯವಾದ ಬೇಗೆಯ ಉತ್ತಾಲ ನರ್ತನದಿಂದ ಸಂಜನಿಸಿದ ಕಣ್ಣೀರು ಹೊರನುಗ್ಗಿ ಬರಲು ಹವಣಿಸುತಿತ್ತು. ಅದನ್ನು ಯಾವ ರೀತಿಯಲ್ಲಿ ಸಂತೈಸಬೇಕೋ ಅರ್ಥವಾಗಲಿಲ್ಲ. ಆತನನ್ನು ಹಲವಾರು ವರ್ಷಗಳಿಂದ ನೋಡಿದ್ದರೂ ಇಷ್ಟೊಂದು ಕ್ಷುದ್ರತನ ಇದೆಯೆಂಬುದನ್ನು ತಿಳಿದುಕೊಳ್ಳದಿದ್ದುದು ಎಂತಹ ಮೂರ್ಖತನ! ಅದಕ್ಕಾಗಿ ತನ್ನನ್ನು ತಾನು ಎಷ್ಟು ಶಪಿಸಿಕೊಂಡರೂ ಸಾಲದು, ಎನಿಸಿದಾಗ ಅದಕ್ಕೇ ಈ ಶಾಸ್ತಿಯಾಯಿತೇನೋ ಎಂಬ ಯೋಚನೆಯೂ ಬಾರದಿರಲಿಲ್ಲ. ಅದರೊಂದಿಗೇನೇ "ವಿಧಿ....!" ಎಂಬ ಉದ್ಗಾರ ತನಗರಿಯದಂತೆಯೇ ಹೊರಬಿತ್ತು.

ಒಡನೆ ದೇಹದಾದ್ಯಂತ ನಸುಕಂಪನದ ಅಲೆ ಹರಿದಾಡಿ ಹೋಯಿತು.

ಸಾಗರದಾಚೆಯ ವರಕವಿಯ ನುಡಿಮುತ್ತುಗಳ ಸಾಲು ಚಿತ್ತಭಿತ್ತಿಯಲ್ಲಿ ಸುಳಿದಳಿಯಿತು.

Oh no! its only Destiny or Fate
Fashions our wills to either love or hate.

ಚಿಂತಾಬ್ಧಿಯಲ್ಲಿ ಮುಳುಗಿ ಮನಃಪ್ರಾಣಗಳು ನಿಮಜ್ಜನಗೊಂಡುವು. ಶರೀರ ಮೂರ್ತಿಮತ್ತಾಯಿತು. ಹೊತ್ತು ಯಥಾರೀತಿ ಉರುಳುವಾಗ ದೈಹಿಕ ಕ್ರಿಯೆ ಯಥಾಕ್ರಮ ನಡೆಯುತಿತ್ತು. ಆದರೆ ಅಂತಃಸ್ಥಲದ ವಿಚಾರ ಗೋಷ್ಠಿಯೇ ಬೇರೆ. ಮಾನಸಿಕ ತುಮುಲಯುದ್ಧವೇ ಬೇರೆ.

ಶಾಲೆಯ ಗಂಟೆ ದೊಡ್ಡ ದನಿಯಲ್ಲಿ ಬಾರಿಸಿ ಎಚ್ಚರಿಕೆ ನೀಡಿತು.

ಢನ್. ಢನ್. ಢನ್. ಢನ್. ಢನ್. ಢನ್.

ಓ..! ಮೂರನೆ ಪೀರಿಯಡ್ ಮುಗಿಯಿತು. ಇನ್ನು ಲೀಲಾ ಬರುತ್ತಾಳೆ. ಅವಳು ಬರುವುದರೊಳಗಾಗಿ ಮುಖ ತೊಳೆದುಕೊಳ್ಳುವುದು ಲೇಸು

ಎನಿಸಿ ಶೌಚದ ಕೊಠಡಿಗೆ ಹೋಗಿ ಕದ ಮುಚ್ಚಿಕೊಂಡು ಮುಖ ತೊಳೆದು ಕೊಂಡಳು. ನೀರಿನೊಡನೆ ಕಂಬನಿಗಳೂ ಬೆರೆತುಕೊಂಡುವು. ಚದುರಿದ ಕೂದಲನ್ನು ಹಿಂದಕ್ಕೆ ತೀಡಿ ಮುಖವನ್ನು ಒರಿಸಿಕೊಂಡು ಹೊಸತನದಿಂದ ಹೊರಬಂದಾಗ ಲೀಲಾ ಆಗಲೇ ಅಲ್ಲಿ ಹಾಜರಿದ್ದಳು. ಅವಳ ಕುಡಿನೋಟದ ಮಿಂಚು ತೆರೆಯನ್ನು ಸೀಳಿ ಅಂತರಂಗಿಕ ವಿಚಾರ ಸಮಸ್ತವನ್ನೂ ಬಹಿರಂಗ ಗೊಳಿಸಲು ವಿಫಲ ಪ್ರಯತ್ನ ನಡೆಸಿದುದು ಗಮನಕ್ಕೆ ಬಂತು. ನಿರ್ಮಲ ಹುಸಿ ನಗೆ ಬೀರಿ ನುಡಿದಳು,

"ಈವತ್ತು ನನಗೆ ತುಂಬಾ ತಲೆನೋವು. ಮಧ್ಯಾಹ್ನದ ಪೀರಿಯಡ್ ನೀನು ನೋಡಿಕೊಳ್ಳುವಷ್ಟು ಉಪಕಾರ ಮಾಡಿದ್ದರೆ ನಾನು ಮನೆಗೆ ಹೋಗಿ ಬಿಡಬಹುದಾಗಿತ್ತು, ಎಂಬ ಯೋಚನೆ ನನಗೆ!"

"ಓ ಸರಿ! ಈವತ್ತು ಪಾರ್ವತಿಯೂ ರಜೆ. ಅವಳದ್ದೂ ನೋಡಿಕೊಳ್ಳು ತ್ತಿರುವೆ!" ಎಂದ ಲೀಲಾ ಅರಳುಗಣ್ಣುಗಳಿಂದ ನೋಡುತ್ತ ಪುನಃ ಹೇಳಿ ದಳು. "ನಿನ್ನ ತಲೆನೋವು-ಪರಿತಾಪ ಏನು ಎಂಬುದು ನನಗೆ ಗೊತ್ತು. ಅಮರನಾಥ ಶುದ್ಧ ಆಶಾಢಭೂತಿ! ಅವನನ್ನು ನಂಬಿ ಕೆಟ್ಟೆ! ಹೋಗಲಿ, ಇದುವರೆಗಿನ ವಿಷಯ ಇಷ್ಟಕ್ಕೆ ಬಿಟ್ಟೇ ಬಿಡು. ಹೇಗೂ ಇದು ಮುಗಿದ ಅಧ್ಯಾಯ....ಇನ್ನು ನಿನ್ನ ಭವಿಷ್ಯವನ್ನು ಕುರಿತು ಯೋಚಿಸು. ಮುಂದೆ ಅದನ್ನು ಯಾವರೀತಿ ರೂಪಿಸಬೇಕೋ ವಿಚಾರ ಮಾಡು. ಅದೇ ನಿನ್ನ ಮನ ಸ್ಸಿಗೆ ಸರಿಯಾದ ಮಾರ್ಗವನ್ನು ತೋರುತ್ತದೆ."

"ಅಲ್ಲ....ಅಲ್ಲ ..." ಮುಂದೆ ಏನೋ ಹೇಳಬೇಕೆಂದು ಪ್ರಯತ್ನಿಸಿದಳು; ಆದರೆ ನುಡಿಗಳು ಹೊರಬೀಳಲೇ ಇಲ್ಲ.

"ಏನು ಹೇಳು....?"

ಇನ್ನು ಮುಚ್ಚಿಡುವುದು ಸಾಧ್ಯವಾಗದೆ ಒಂದೆರಡು ಕ್ಷಣ ಯೋಚಿಸಿ ಮನಸ್ಸನ್ನು ಗಟ್ಟಿ ಮಾಡಿಕೊಳ್ಳುತ್ತ ನುಡಿದಳು,

"ಆ ವಿಚಾರ ಏನೇ ಇರಲಿ, ತಲೆನೋವು ನನಗೆ ಸಹಜವಾದುದು."

"ತಲೆ ಕೆಟ್ಟಮೇಲೆ ನೋವು ಬರಲೇಬೇಕಲ್ಲ, ಆದರೆ ಒಂದು ಮಾತು.... ನೀನು ಅದನ್ನು ಮನಸ್ಸಿಗೆ ಹಾಕಿಕೊಳ್ಳಲೇಬಾರದು. ಆ ಪತ್ರಿಕೆ ನೋಡಿ ದೆಯಾ?"

"ಹೌದು ಇಲ್ಲೇ ಇತ್ತಲ್ಲ."

"ನಮಗೂ ಒಂದು ಮಾತು ಹೇಳಲಿಲ್ಲ. ಒಂದು ಲಗ್ನಪತ್ರಿಕೆ ಸಹ ಇಲ್ಲ. ಶ್ರೀಮಂತರ ಅಳಿಯ ಅಂದಮೇಲೆ ಈ ಶಾಲಾಜೀವನ ಎಲ್ಲಿ ನೆನಪಿಗೆ ಬರಬೇಕು ಹೇಳು ? ಅವನಲ್ಲಿ ಪ್ರೊಫೆಸರೂ ಆಗಿದ್ದಾನಂತೆ ! ಉಪಾಧ್ಯಾಯ ಹೀಗಿದ್ದರೆ ವಿದ್ಯಾರ್ಥಿಗಳು ಇನ್ನು ಹೇಗಿರಬಹುದು ?" ತುಟಿಕಚ್ಚಿ ಸಿಟ್ಟಿನಿಂದ ನುಡಿದಳು ಲೀಲಾ.

"........"

ನಿರ್ಮಲ ಭಾರವಾದ ದೇಹವನ್ನು ಹೊರಲಾರದೇ ಹೊತ್ತು ಕುಳಿತು ಕೊಂಡಳು. ಮುಖಮಂಡಲ ಮ್ಲಾನವಾಗಿತ್ತು. ಏನು ಹೇಳಬೇಕೋ ಯಾವ ರೀತಿ ಪ್ರಾರಂಭಿಸಬೇಕೋ ತಿಳಿಯಲಿಲ್ಲ. ಯಾವುದೋ ಅಜ್ಞಾತ ಹಸ್ತ ಗಂಟ ಲನ್ನು ಅದುಮಿ ಹಿಡಿದಂತಿತ್ತು. ಹೇಗೆ ಹೇಗೋ ಸಾವರಿಸಿಕೊಂಡು ಅತ್ಯಂತ ಪರಿತಾಪದಗ್ಧ ದನಿಯಲ್ಲಿ ನುಡಿದಳು "ಅವರನ್ನು ನಂಬಿ, ಹೃದಯಪೂರ್ವಕ ವಾಗಿ ಪ್ರೀತಿಸಿ, ಬಹುಮೂಲ್ಯವಾದ ಮಾನವನ್ನು ಕಳೆದುಕೊಂಡೆ. ಅದೇ ನನಗೆ ಸಹಿಸಲಾಗದ ದುಃಖ....ತಾಳಲಾಗದ ಸಂಕಟ."

"ಆಗಲೇ ಹೇಳಿದೆನಲ್ಲಾ, ಇದು ಮುಗಿದ ಅಧ್ಯಾಯ. ಇನ್ನು ಮುಂದಿನ ದನ್ನು ಮಾತ್ರ ಚಿಂತಿಸು."

"........"

ಅದೇ ವೇಳೆಗೆ ಒಳ ಹೆಜ್ಜೆ ಇಟ್ಟ ವಿಮಲ ಆಶ್ಚರ್ಯಗರ್ಭಿತ ದೃಷ್ಟಿ ಯಿಂದ ನಿಟ್ಟಿಸಿದಳು. ಮುಖಭಾವ ಅತ್ಯಂತ ಖೇದಪೂರ್ಣವಾಗಿತ್ತು. ಸದಾ ಕಾಲವೂ ತುಟಿಗಳಲ್ಲಿ ಮಿನುಗುತಿದ್ದ ಎಳೆನಗು ಇಂದು ಅದೃಶ್ಯವಾಗಿತ್ತು. ಬಳಿಗೆ ಬರುತ್ತಲೇ ಅವಳೆಂದಳು "ನನಗೆಲ್ಲಾ ಗೊತ್ತಾಯಿತು. ನೀನು ಮನ ಸ್ಸಿಗೆ ಏನೇನೂ ಹಚ್ಚಿಕೊಳ್ಳಲೇ ಬೇಡ. ನಮ್ಮಲ್ಲಿ ಒಂದು ಗಾದೆ ಇದೆ, 'ಅವ್ವ ನನ್ನು ಅಪ್ಪ ಹೊಡೆದರೆ ಅಪ್ಪನನ್ನು ದೆವ್ವ ಹೊಡೆಯಿತು !' ಅಂತ. ಎಲ್ಲರಿಗೂ ಇದು ಕಟ್ಟಿಟ್ಟ ಬುತ್ತಿ ! ಇದಕ್ಕಾಗಿ ನೀನು ಶೋಕಿಸಬೇಕಾಗಿಲ್ಲ."

"ನಾನು ಖಂಡಿತ ಪ್ರತಿಕಾರವನ್ನು ಬಯಸುತ್ತಿಲ್ಲ."

"ಅದು ನನಗೊತ್ತು ! ಆದರೂ, ಇದ್ದದ್ದು ಹೇಳಿದೆ. ಮಾನ ಕಳೆದು ಕೊಂಡ ಕಿಚ್ಚು ಅಷ್ಟು ಸುಲಭದಲ್ಲಿ ನಂದುವುದಿಲ್ಲ !"

ನಿರ್ಮಲ ಮಾತಾಡಲಿಲ್ಲ. ದುಃಖಗರ್ಭಿತ ಶರೀರ ಸಿಡಿದೊಡೆಯುವಂತಿತ್ತು.

ಲೀಲಾ ಅತ್ಯಂತ ಆಶ್ಚರ್ಯಯುಕ್ತವಾಣಿಯಲ್ಲಿ ನುಡಿದಳು,

"ಅಬ್ಬ ! ಅವನು ಎಂತಹ ಮಾಯಾವಿ ! ತನ್ನ ವ್ಯವಹಾರ ಮಾನಿಷ್ಠರೊಡನೆ ಎಂಬುದನ್ನು ಸಂಪೂರ್ಣ ಮರೆತೇ ಬಿಟ್ಟಿದ್ದಾನೆ!"

"ಹಣ....ಅಧಿಕಾರ!"

"ಅದಕ್ಕಿಂತಲೂ ಮನುಷ್ಯತ್ವ ಹೆಚ್ಚಿನದು."

"ಅದನ್ನು ಅರಿತುಕೊಂಡಿದ್ದಿರೆ ಹೀಗಾಗುತ್ತಲೇ ಇರಲಿಲ್ಲ."

ಲೀಲಾ ಒತ್ತಿ ಹೇಳಿದಳು. ಕಂಠಸ್ವನ ನಿಷ್ಠೂರವಾಗಿ ಹರಿಯಿತು,

"ಅವಿದ್ಯಾವಂತರು–ಅವಿಚಾರಕರು ಮತಿಗೆಡುವುದುಂಟು. ಆದರೆ ಈಗೀಗ ಇಂತಹ ಚರಿತ್ರೆಗಳೇ ತುಂಬಾ ವಿಶೇಷ!" ಎಂದ ವಿಮಲ ಒಂದೆರಡು ಘಳಿಗೆ ಸುಮ್ಮನಿದ್ದು ಅನಂತರ ಮುಂದುವರಿದಳು "ನನಗೆ ಈ ವಿಚಾರದಲ್ಲಿ ಸ್ವಲ್ಪ ಹಿಂದೆಯೇ ಅಪನಂಬಿಕೆ ಉಂಟಾಗಿತ್ತು ...ಅಷ್ಟು ಸುಲಭವಾಗಿ ಎಲ್ಲರನ್ನೂ ನಾನು ನಂಬುವುದಿಲ್ಲ. ಯಾರೇ ಆಗಲಿ, ಪರಿಗ್ರಹಿಸುವ ಮುನ್ನ ಪರೀಕ್ಷಿಸುವುದು ಲೇಸು. ಆದರೆ, ಈಗ ನಿನ್ನ ಮನಸ್ಸು ತುಂಬ ನೊಂದಿದೆ. ಹೆಚ್ಚಿಗೆ ಹೇಳಲು ಮನಸ್ಸು ಬರುವುದಿಲ್ಲ. ಇದರಿಂದ ಒಳ್ಳೆಯ ಪಾಠ ಕಲಿತಂತಾಯಿತು ಇನ್ನು ಈ ಅಧ್ಯಾಯವನ್ನು ಗಂಭೀರವಾಗಿ ಮುಚ್ಚಿಬಿಡು."

ಆದರೆ....!

"ಎಂತಹ ಅಭಾಸ? ಕವಡೆಗೆ ಕಳೆದುಕೊಂಡ ಮಾನ ಆನೆ ಕೊಟ್ಟರೂ ಬರುವುದಿಲ್ಲ. ನಾನಿಷ್ಟು ತಿಳಿಗೇಡಿಯಾದೇನೆಂದು ಎಂದೂ ಭಾವಿಸಿರಲಿಲ್ಲ.... ಅಂತಲೇ ಮೋಸ ಹೋದೆ." ಎಂದು ಬಹಳ ಕಷ್ಟದಿಂದ ನುಡಿದ ನಿರ್ಮಲ ಪುನಃ ಲೀಲೆಯ ಕಡೆ ತಿರುಗಿ ಹೇಳಿದಳು "ಈ ಜೀವ ದಿನನಿತ್ಯ ಬೆಂಕಿಯಲ್ಲಿ ಬೇಯುತಿದ್ದರೂ ಅದಕ್ಕೆ ಮುಕ್ತಿಯೂ ಇಲ್ಲ; ನಿಷ್ಕೃತಿಯೂ ಇಲ್ಲ. ಅದೇ ಆಶ್ಚರ್ಯ!"

"ಯಾವುದು ಹೇಗೇ ಇರಲಿ, ಸ್ತ್ರೀ ಜಾತಿಯ ವಿಚಾರವೇ ಬೇರೆ. ಕಷ್ಟ ನಷ್ಟಗಳಿಗಾಗಿಯೇ ಮೈಗೂಡಿರುತ್ತೆ ಪ್ರಾಣ."

"ಈ ಪ್ರಾಣ ಹೋದರೆ ಸಾಕು ಅನಿಸುತ್ತೆ ಈಗ."

"ಹೆಣ್ಣಿಗೆ ಪ್ರಾಣವೆನ್ನುವುದು ಇದ್ದರಲ್ಲವೆ ಹೋಗುವುದು ? ಭಗವಂತ ನಮಗೆ ದೈವಿಕ ಚೇತನ ನೀಡಿ ನೂರು ಗಂಡಾಂತರದಲ್ಲಿ ನೂಕಿ ಸಂಯಮ ಕಲಿಸುತ್ತಾನೆ. ಅಂತಲೇ ಬೆಂಕಿಯಲ್ಲಿ ಧುಮುಕಿದರೂ ಸ್ತ್ರೀತ್ವಕ್ಕೆ ಸಾವಿಲ್ಲ!"

ಒಡನೆ ಮೂವರ ಮುಖದಲ್ಲೂ ನೀರಸ ನಗೆ ಮಿನುಗಿ ಮಾಯವಾಯಿತು.

ನಿರ್ಮಲ ತುಸು ಚೇತರಿಸಿಕೊಂಡಂತೆ ಕಂಡರೂ ಅಂತರ್ನಿಹಿತ ತಾಪ ಜ್ವಾಲೆ ಧಗಧಗಾಯಮಾನವಾಗಿತ್ತು.

ವಿಮಲ ಗಂಭೀರವಾಣಿಯಲ್ಲಿ ಹೇಳ ತೊಡಗಿದಳು,

"ಇದೇನು ದೊಡ್ಡ ವಿಶೇಷವಲ್ಲ. ನಿರ್ಮಲಾ! ನಾವು ಹೆಜ್ಜೆಹೆಜ್ಜೆಯನ್ನೂ ತಪ್ಪಿ ಇಡುತ್ತಲೇ ಇರುತ್ತೇವೆ. ಆ ಮುಹೂರ್ತದಲ್ಲಿ ಅದು ತಿಳಿಯುವುದೇ ಇಲ್ಲ. ಅಂತಲೇ ಸಲಸಲಕ್ಕೂ ತಪ್ಪುಗಳು ಹುಟ್ಟಿಕೊಳ್ಳುತ್ತಲೇ ಇರುತ್ತವೆ. ಅವು ಕರತಲಾಮಲಕವಾದಾಗ ಹದವರಿತು ನಡೆಯುವುದನ್ನು ಕಲಿಸುವುದು ಮಾತ್ರವಲ್ಲ ಪಾವಿತ್ರ್ಯವನ್ನೂ ಪರಮಸತ್ಯವನ್ನೂ ಕಲಿಸುತ್ತವೆ. ಆದ್ದರಿಂದ ತಪ್ಪುಗಳು ಮೂಡುವುದು ಒಳ್ಳೆಯದಕ್ಕೇ ಎನ್ನಬಹುದು."

ನಿರ್ಮಲ ಮಾತಾಡಲಿಲ್ಲ. ಲೀಲಾ ಮುಗುಳು ನಕ್ಕಳು.

"'ರಾಮಾಯ ಸ್ವಸ್ತಿ ರಾವಣಾಯ ಸ್ವಸ್ತಿ.' ರಾಮರಾವಣರು ಇದ್ದುದರಿಂದಲೇ ರಾಮಾಯಣ ಹುಟ್ಟಿಕೊಂಡಿತು. ಮೂರ್ಖರ ಮೂರ್ಖತೆಯನ್ನು ನೋಡುವುದರಿಂದಲೇ ನಾವು ನಮ್ಮನ್ನು ವಿಮರ್ಶಿಸಿಕೊಳ್ಳುತ್ತೇವೆ. ಮೂರ್ಖರಿರುವುದೂ ಸಹ ಅನೇಕ ದೃಷ್ಟಿಯಿಂದ ಒಳ್ಳೆಯದು!"

"ಹೌದು." ಎಂಬಂತೆ ತಲೆದೂಗಿದಳು ಲೀಲಾ.

"ಆವನು ಮಾಡಿದ ತಪ್ಪಿಗಾಗಿ ನೀನು ಪರಿತಾಪ ಪಡಬೇಕಾದುದೇನೂ ಇಲ್ಲ."

"........"

ನಿರ್ಮಲ ಮಾತಾಡಲಿಲ್ಲ. ಮಾನಾಭಿಮಾನಗಳನ್ನು ಕುರಿತು ತರ್ಕಿಸುತಿತ್ತು ಕಳವಳ ಕೊನರಿದ ಚಿತ್ತ. ಮುಖಮಂಡಲ ರಾಹುಗ್ರಸ್ತ ಚಂದ್ರನಂತಾಗಿತ್ತು.

" ಈ ದುಃಖಭರಿತ ಜೀವನವನ್ನು ಉದ್ಧರಿಸಲು ತರ್ಕಿಸುದರಲ್ಲಿರುವ

ಸಂತೃಪ್ತಿ ದ್ವೇಷಿಗಳನ್ನು ವಿದ್ವೇಷಿಸುವುದರಲ್ಲಿ ಬರುವುದಿಲ್ಲ. ಆಗಿ ಹೋದ ವಿಚಾರದಲ್ಲಿ ತಲ್ಲೀನಳಾಗಿ ಭವಿಷ್ಯವನ್ನು ಹಾಳು ಮಾಡಿಕೊಳ್ಳಬಾರದು. ಅಷ್ಟೇ ಅಲ್ಲ, ಜೀವನ ಪುಟದ ಕುಸಾಹಿತ್ಯವನ್ನು ಅಳಿಸಬೇಕೆಂದರೆ ಸುವರ್ಣಾಕ್ಷರಗಳಲ್ಲಿ ಮಿಥ್ಯಾಕಥನವನ್ನು ಬರೆಯಲೇಬೇಕು !"

ಆ ಕಠೋರ ಕಮನೀಯ ಪರಿಜ್ಞಾನ ಪ್ರಕೃತಿ ವ್ಯಾಪಾರವನ್ನೆ ಸ್ತಬ್ಧಗೊಳಿಸಿತು.

ನಿರ್ಮಲ ದುಃಖಗದ್ಗದವಾದ ದನಿಯಲ್ಲಿ ಒಡಲ ಸಂಕಟವನ್ನು ತೋಡಿಕೊಂಡಳು,

"ನಾನು ಆತನನ್ನು ಎಷ್ಟು ದೃಢವಾಗಿ ನಂಬಿದ್ದೆ ಎಂಬುದನ್ನು ವರ್ಣಿಸಲು ಈಗ ಮಾತುಗಳೇ ಬಾರವು. ಆಗ ಸ್ವಲ್ಪವಾದರೂ ಅನುಮಾನ ಬಂದಿದ್ದರೆ ನಾನು ಮೋಸಹೋಗುವಷ್ಟು ದೂರ ಮುಂದುವರಿಯುತ್ತಿರಲಿಲ್ಲ."

"ಬಿಡು ; ಇನ್ನದನ್ನು ಚಿಂತಿಸುವ-ಯೋಚಿಸುವ ಮೂರ್ಖತನ ಬೇಡ" ವಿಮಲ ಒತ್ತಿ ಹೇಳಿದಳು. ಕಂಠದಲ್ಲಿ ದೃಢಭಾವ ಸ್ಫುರಿಸಿತು.

ಮುಂದೆ ನಾನು ತಲೆಯೆತ್ತಿ ನಡೆಯುವುದು ಹೇಗೆ ? ಅದೇ ಅಗಾಧವಾದ ಚಿಂತೆ." ಅಕ್ಷರ ಅಕ್ಷರಗಳೂ ಗದ್ಗದ ಕಂಠದಿಂದ ಕಂಪಾಯಮಾನವಾಗಿ ಹರಿದು ಬಂದುವು. ಹೃದಯದಲ್ಲಿ ಸಂಜನಿಸಿದ ದುಃಖಧಾರೆ ಹೊರನುಗ್ಗಿ ಬರದಂತೆ ಸರ್ವಸಾಹಸ ತಡೆಗಟ್ಟಿದಳು ನಿರ್ಮಲ. ಕಣ್ಣುಗಳಲ್ಲಿ ಲಾಲಿಮೆ ಮಿಂಚುತಿತ್ತು.

"ಛೀ ! ಛೀ ! ಅಷ್ಟೇಕೆ ವ್ಯಸನ ? ನೀನಾಗಿ ನಿನ್ನ ಚಾರಿತ್ರ್ಯವನ್ನು ಹಾಳುಮಾಡಿಕೊಳ್ಳಲಿಲ್ಲ....ಇದರ ಪಾಪಕರ್ಮವೆಲ್ಲ ಯಾರಿಗೆ ಸಲ್ಲಬೇಕೋ ಅವರಿಗೆ ಸಲ್ಲುತ್ತದೆ. ನೀನು ಚಿಂತೆ ಹಚ್ಚಿಕೊಳ್ಳಲೇ ಬೇಡ."

"........"

ವಿಮಲ ಗಂಭೀರ ಮುಖಭಾವದಿಂದ ಹೇಳತೊಡಗಿದಳು,

"ಒಂದು ವಿಚಾರ ಸಂಕೀರ್ಣ ಮರೆಯಬಾರದು. ಸೂತ್ರ-ಸಂಪ್ರದಾಯ-ಸಾಯುಜ್ಯ ಇಂತಿಂತ ವಿಚಾರಗಳು ಕೆಲವರಿಗಾಗಿ ಸೃಷ್ಟಿಸಲ್ಪಟ್ಟವೆಯೇ ಹೊರತು ಎಲ್ಲರಿಗಾಗಿ ಅಲ್ಲ, ಈ ಸೂತ್ರಸಾರಗಳನ್ನು ಜೀವನದ ವಾಸ್ತವಿಕತೆಯ ಮಥ್ಯೆ ಕೊಂಡೊಯ್ದಲ್ಲಿ ಅದು ಉನ್ಮಾದವೂ, ಕುಸಂಸ್ಕಾರವೂ

ಆಗುವುದರಲ್ಲಿ ಅನುಮಾನವಿಲ್ಲ. ಆಲೋಚನಾಹೀನರಾಗಿ ಅವನ್ನೆ ಅದ್ಭುತವಾದ 'ಆದರ್ಶ' ಎಂದು ನಂಬಿ ಬದುಕಿಗೆ ಅಳವಡಿಸಿಕೊಂಡಲ್ಲಿ ಸದಾಕಾಲವೂ ವಿಷಾದ ಕ್ರಾಂತಿಯನ್ನು ಎದುರಿಸಲೇಬೇಕಾಗುತ್ತದೆ. ಆಗ ದುಃಖ ಸಂಕಟ ಅನಿವಾರ್ಯ....ಮೇಲಾಗಿ, ಯಾರ ಕರಕಮಲಗಳಲ್ಲಿ ಆತ್ಮಾರ್ಪಣೆ ಮಾಡಿಕೊಳ್ಳುತ್ತೀವೋ ಆ ಕರಗಳ ಬಳಿಯೇ ಈ ಶರೀರವೂ ಇರಲೇಬೇಕೆಂಬ ಸಿದ್ಧಾಂತ ಅಥವಾ ತತ್ತ್ವನಿರೂಪಣೆ ಅರ್ಥರಹಿತವಾದುದು. ಯಾವ ಸಮಾಜದಲ್ಲೀ ಆಗಲಿ ಅದ್ಭುತವಾದ ಅಂತರಂಗಿಕ ಮಹಾಜ್ವಾಲೆ ಕೈದೀವಿಗೆಯಾಗಿ ಮಾರ್ಗಟ್ಟಾಗ ದಾರಿ ತೋರುವವರ ಅವಶ್ಯಕತೆಯೇ ಇರುವುದಿಲ್ಲ. ಯೋಚಿಸಿ ನೋಡು, ಇದು ಜಾಗತಿಕ ಸತ್ಯ.... ಭಾವ ಸ್ಫುರಿತ ಕೀರ್ತಿವಹ್ನಿ ! ಈ ಅಜ್ಞಾತ ರಹಸ್ಯ ಹಿಂದೂಸ್ಥಾನದ ಸ್ತ್ರೀ ಜೀವನದ ಅದ್ಭುತ ತಪೋಬಲ....!"

ವಿಮಲ ಭಾವಾತಿರೇಕದಿಂದ ಇನ್ನೂ ಏನೇನೋ ಹೇಳುತ್ತಲೇ ಇದ್ದಾಳೆ. ಬಹುಶಃ ಏನು ಹೇಳಿದಳೆಂಬುದು ಅವಳಿಗೇ ಗೊತ್ತಿರಲಾರದು. ವಾಗ್ಧಾರೆ ಗಂಗಾಧಾರೆಯಂತೆ ಹರಿಯುತ್ತಲೇ ಇತ್ತು. ಎಷ್ಟೆಷ್ಟು ವಿಚಾರಗಳು ಬಳಬಳ ಬಂದು ಹೋದುವೋ ಅವೆಲ್ಲಾ ಚಲನಚಿತ್ರದಂತೆ ಸ್ಪಷ್ಟವಾಗಿ ತೋರಿವೆ. ನಿರ್ಮಲ ಅತೀವ ಭಾವಶೀಲಳಾಗಿ ತೆರೆದ ಮನಸ್ಸಿನಿಂದ ಕೇಳುತಿದ್ದಾಳೆ. ವಿಷಯಾಸಕ್ತ ಮಸ್ತಕದ ಭಾರ ಹಸ್ತದ ಮೇಲಿಳಿದಿತ್ತು. ಆದರೂ ವಾಸ್ತವಿಕ ಜ್ಞಾನ ಎಲ್ಲಿಗೆ ಪಯಣಿಸಿತ್ತೋ.... ಆ ಹೃದ್ಗತ ಚಿಂತಾರಹಸ್ಯ ಘುಮುಘುಮಿಸುತ್ತಲೇ ಇತ್ತು. ಸದ್ಯಕ್ಕಂತೂ ಯಾವ ವಿಷಯ ನಿರೂಪಣೆಯೂ ಬೇಡ ಎಂಬಷ್ಟು ಕಿನಿಸಿಗೆ. ಎಣೆಯಿಲ್ಲದ ಮಾನಸಿಕ ಕ್ಷೋಭೆ....

"ನಿರ್ಮಲ....!"

ಲೀಲಳ ಕರೆ ಕಿವಿಯನ್ನು ತಾಗಿದಾಗಲೂ ಅವಳು ಅಖಂಡ ವಿಭ್ರಮೆಯಿಂದ ಶಿಲಾಪ್ರತಿಮೆಯಂತೆ ಕುಳಿತುಕೊಂಡಿದ್ದಳು. ವಿವರ್ಣವಾದ ಮುಖಬಿಂಬದಲ್ಲಿ ಭಾವಗಂಭೀರತೆ ಕಾಣಿಸುತಿತ್ತು. ಶರೀರ ಸಿಡಿದೊಡೆಯಲಿರುವ ದಡಾಕಿಯಂತೆ ಬಿಸಿಯುಸಿರು ಬಿಡುತಿತ್ತು.

ಅವಳು ಉತ್ತರಿಸುವುದರೊಳಗಾಗಿ ವಿಮಲ ಪುನಃ ತನ್ನ ವಿಚಾರಧಾರೆಯನ್ನು ಹರಿಯಬಿಟ್ಟಳು,

"ಈ ಜೀವನ ಯಾವಾಗ ಏನು ಪ್ರಾಸಾದಿಸುವುದೋ ಅದನ್ನು ಮನ

ದುಂಬಿ ಅನುಭವಿಸುವುದೇ ಪರಮಾದರ್ಶ. ಅದೃಷ್ಟಾದೃಷ್ಟಗಳ ಪೂರ್ಣ ಅನುಭವವಾದಾಗ ಅದು ಇನ್ನೊಂದು ಘಟಕದ ಶುಭಕ್ಕೆ ನಾಂದಿಯಾಗ ಬಹುದು. ಆದುದರಿಂದ ಯಾವುದನ್ನೂ ಇಂದು ನಿಕೃಷ್ಟವಾಗಿ ಭಾವಿಸ ಬಾರದು....ಚಿಂತಾನ್ವಿತ ಚಿತ್ತ ಏನನ್ನೂ ಸಾಧಿಸಲಾರದು."

ನಿರ್ಮಲ ಈ ಸಲ ತಲೆಯೆತ್ತಿ ನೋಡುವ ಸಾಹಸ ಮಾಡಿದಳು. ವಾತ್ಸಲ್ಯಪೂರಿತ ದೃಷ್ಟಿ ನಿಸ್ಸಂಜ್ಞವಾಗಿತ್ತು. ಮರುಕ್ಷಣದಲ್ಲಿ ತೀರ್ಥ ಕುಂಡ ಗಳಿಂದ ಸ್ಥೂಲ ಸ್ಥೂಲ ಅಶ್ರುಬಿಂದುಗಳು ಉಗಮವಾಗಿ ಒಂದರ ಹಿಂದೆ ಒಂದರಂತೆ ಉದುರಿದುವು.

"ಛಿಃ! ಅಳುವುದರಿಂದೇನು ಪ್ರಯೋಜನ?"

ಮೃದು ಹಸ್ತಗಳನ್ನು ಅದುಮಿ ಹಿಡಿದುಕೊಂಡು ಲೀಲಾ ಸಂತೈಸುತ್ತ ಹೇಳಿದಳು "ಎಲ್ಲಿಯಾದರುಂಟೇ? ನೀನೇಕೆ ತಲೆ ಕೆಡಿಸಿಕೊಳ್ಳುತ್ತಿ? ಯಾರ ದೋಷಕ್ಕೆ ಯಾರು ಬಳಲಬೇಕು?"

"ಅಲ್ಲ....ಅದಕ್ಕಲ್ಲ. ಅಂತಸ್ಥಲದ ಶುದ್ಧಿಗಾಗಿ." ಭಾರವಾದ ಧ್ವನಿಯಲ್ಲಿ ನುಡಿದಳು ನಿರ್ಮಲ. ಕೈಗಳು ಯಾಂತ್ರಿಕವಾಗಿ ಅಶ್ರುಬಿಂದುಗಳನ್ನು ತೀಡಿ ಕೊಂಡುವು. ಸುತ್ತಮುತ್ತಣ ಪ್ರಪಂಚ ಮೆಲ್ಲಮೆಲ್ಲನೆ ಕುಂಬಾರನ ಚಕ್ರ ದಂತೆ ಸುತ್ತುತಿತ್ತು.

ನಾಲ್ಕನೆಯ ಪೀರಿಯಡ್ಡಿನ ಗಂಟೆ ಭಾರಿಸಿತು,

ಢಣ್. ಢಣ್. ಢಣ್. ಢಣ್. ಢಣ್. ಢಣ್.

ಮೂವರೂ ಎದ್ದರು. ನಿರ್ಮಲ ತರಗತಿಗೆ ಹೋಗಲು ದೃಢಸಂಕಲ್ಪ ಮಾಡಿದಳು.

## ೩೪

....ಉತ್ಫುಲ್ಲ ಕಮಲಗಳ ಅವಿರಲ ಪ್ರವಾಹ ತುಲ್ಯ ಅಪೂರ್ವ ಶೋಭೀ ನಿರ್ಮಲ ಮೇಘಮಾಲೆ!

....ಮಂದಾರಪುಷ್ಪ ಗಂಧಪೂಸಿತ ಮಂದ ಸಮೀರನ ಮಂದ ಮಂದ ಭಾವಧಾರೆ!

ಜುಗುಪ್ಸಾಕರವಾದ ರಜೋವಿಮಾದಕತೆಯಲ್ಲಿ ದಿನಗಳು ಒಂದೊಂದಾಗಿ ಉರುಳುತ್ತಿವೆ. ಆ ವಿಧಾತನ ವಿರೂಪ ವಿಧಾನವನ್ನು ಅಳಿಯುವುದು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಆತನ ವಜ್ರಮುಷ್ಟಿಯಿಂದ ಬಿಡಿಸಿಕೊಳ್ಳುವುದೂ ಸಹ ಸಾಧ್ಯವಿಲ್ಲ. ನಿರ್ಮಲೆಯ ದಿನಚರಿಯಲ್ಲಿ ಅತ್ಯಂತ ಕ್ಲಿಷ್ಟಕರವಾದ ಮೂರು–ನಾಲ್ಕು ದಿನಗಳು ಉರುಳಿಹೋದುವು. ದಿನವಹಿ ಎಲ್ಲಿ, ಯಾವುದೇ ಮೂಲೆಯಲ್ಲಿ ಹೆಜ್ಜೆಯಿಟ್ಟರೂ ಸುತ್ತಮುತ್ತಿನ ನೋಟಗಳೆಲ್ಲ ಪ್ರಶ್ನಾರ್ಥಕ ವಾಗಿ ನಿಟ್ಟಿಸುತ್ತವೆ. ಆ ಚುಚ್ಚುಗಣ್ಣಿನ ನೋಟಗಳನ್ನು ಎದುರಿಸುವುದು ಸಾಧ್ಯವಾಗುತ್ತಲೇ ಇಲ್ಲ. ಮೂರು-ನಾಲ್ಕು ದಿನಗಳ ಕಾರ್ಯಕಲಾಪ ಹೇಗೆ ಸಾಗಿತೋ ದೇವರಿಗೇ ಗೊತ್ತು. ಉರುಳಿದ ಆ ಒಂದೊಂದು ಕ್ಷಣವೂ ಮುಳ್ಳಿನಂತೆ ಚುಚ್ಚಿ ಚುಚ್ಚಿ ಪ್ರಾಣವನ್ನು ಅಮಿತವಾಗಿ ಹಿಂಡಿವೆ. ಕಷ್ಟಸಾಧ್ಯವಾದ ಪ್ರಯತ್ನಗಳನ್ನೆಲ್ಲಾ ಬದಿಗೊತ್ತಿ ನಾನಿನ್ನು ಶ್ರಮಿಸಲಾರೆ ಎಂದು ಘೀಳಿಡುತಿತ್ತು ಜೀವ; ದುಃಖವುಂಡು ನಾನಿನ್ನು ತಾಳಿಕೊಳ್ಳಲಾರೆ ಎಂದು ಚೀರಿಡುತಿತ್ತು ಚಿತ್ತ,

ಇಂದು,

ವಿಮಲ ತನ್ನ ತರಗತಿಯಿಂದ ನಿರ್ಮಲೆಯೆಡೆಗೆ ಬಂದಾಗ ಅದೊಂದು ಅಪೂರ್ವವಾದ ಅನುಭಾವ ಸಂಪತ್ತಿಯ ರಾಶಿ ಅವಳ ಸುತ್ತಮುತ್ತ ತರಂಗಿತವಾಗುತಿದ್ದುದನ್ನು ಕಂಡು ಸ್ವಲ್ಪಹೊತ್ತಿನವರೆಗೆ ಆ ಕಾಂತಿಯ ಸವಿಾಕ್ಷೆಯಲ್ಲಿ ನೈವುರೆತು ಸುಮ್ಮನಿದ್ದು ಅನಂತರ ವಿಸ್ಮಯ ವಿಮೂಢಳಾಗಿ ಪ್ರಶ್ನಿಸಿದಳು,

"ಅದೆಂತಹ ಕಠೋರ ತಪಶ್ಚರ್ಯೆ ನಡೆಸಿದ್ದೀಯೋ ಶಿವನೇ ಬಲ್ಲ. ನಿನ್ನನ್ನು ನೋಡಿದರೆ ಆಶ್ಚರ್ಯವಾಗುವಷ್ಟು ಬದಲಾವಣೆ ಕಾಣಿಸುತ್ತೆ!"

ನಿರ್ಮಲ ಪ್ರಯತ್ನಪೂರ್ವಕವಾಗಿ ನಕ್ಕಳು. ಆಗ ಒಂದು ವಿಷಾದ ಪ್ರಕರಣವೇ ಮಿಂಚಿ ಮಾಯವಾಯಿತು. ಮರುಘಳಿಗೆಯಲ್ಲಿ ಎಚ್ಚತ್ತುಕೊಳ್ಳುತ್ತ ನುಡಿದಳು,

"ತಪಶ್ಚರ್ಯೆಯೂ ಇಲ್ಲ; ಮಣ್ಣೂ ಇಲ್ಲ. ನಿಂದಾಯಿತೇ, ಮನೆಗೆ ಹೋಗೋಣವೇ?"

"ಆಯಿತು. ಅದಕ್ಕೆಂದೇ ಈ ಕಡೆ ಬಂದೆ."

ಇಬ್ಬರೂ ಮನೆಯಕಡೆ ಹೊರಟರು.

"ನೀನಿನ್ನೂ ಆ ಪೆಟ್ಟಿನಿಂದ ಚೇತರಿಸಿಕೊಂಡೇ ಇಲ್ಲ. ಗಂಡಸರು ಇಂತಹ ಹೀನ ಪ್ರವೃತ್ತಿಯಲ್ಲಿ ಲೀಲಾಜಾಲವಾಗಿ ತೊಡಗಿ ಸ್ತ್ರೀಯರನ್ನು ಮಣ್ಣು ಮುಕ್ಕಿಸುತ್ತಾರೆ. ಅವರಿಗೆ ಅದರಿಂದ ಯಾವ ಬಾಧಕವೂ ಇಲ್ಲ, ಸಮಾಜ ಅವರೆಡೆಗೆ ಬೆಟ್ಟು ಮಾಡುವುದೂ ಇಲ್ಲ. ಅವರ ಆಚಾರ-ಅನಾಚಾರಗಳೆಲ್ಲ ಸಮತೋಲನವಾಗಿ ಮೇಜು ಕುರ್ಚಿಗಳ ಕೆಳಗೆ ಕರಗಿ ಹೋಗುತ್ತವೆ. ನಾರೀ ಜೀವನ ಎಷ್ಟು ಅದ್ಭುತವಾದುದೋ ಅದನ್ನು ತಿಳಿದುಕೊಳ್ಳುವ ಶಕ್ತಿ ಅನೇಕರಿಗೆ ಇಲ್ಲವೇ ಇಲ್ಲ."

ನಿರ್ಮಲ ಏನೋ ಹೇಳ ಬಯಸಿದರೂ ತುಟಿಗಳು ಬಿರಿಯಲಿಲ್ಲ. ಕೆಲವು ಕ್ಷಣಗಳ ನಿಶ್ಶಬ್ದದ ನಂತರ ವಿಮಲೆಯೇ ಮುಂದುವರಿದಳು,

"ನೀನು ಧೈರ್ಯವಾಗಿರು. ಈ ಪ್ರಕರಣದ ಹಿಂದೆ ಯಾವ ಮಹತ್ಸಂಕಲ್ಪ ಇದೆಯೋ ಯಾರಿಗೆ ಗೊತ್ತು ?"

ಅತ್ಯಂತ ಸೂಕ್ಷ್ಮವಾಗಿ ಬಿಸಿಯುಸಿರು ಬಿಟ್ಟು ಮೆಲು ದನಿಯಲ್ಲಿ ನುಡಿದಳು ನಿರ್ಮಲ "ಭಗವಂತನ ಇಚ್ಛೆ !"

ಹೃದಯ ಮೃದಂಗ ವ್ಯಾಪ್ತಿಗೆ ಮೀರಿ ಮಿಡಿಯುತಿತ್ತು. ಮನಸ್ಸು ಕಲಸು ಮೇಲೋಗರವಾಗಿತ್ತು. ಅಂತರಾಳವರ್ತೀ ತುಮುಲಯುದ್ಧವನ್ನು ಅವಲೋಕಿಸುತ್ತ ತಲೆಬಾಗಿ ಹೆಜ್ಜೆ ಹಾಕಿದಳು. ನಗರ ಪ್ರಾಂತದ ವನಸ್ಥಳಿಗಳು ವಿಕಸಿತ ಕಂಜುವಾಳದ ಹೂಗಳಿಂದ ತುಂಬಿ ನಳನಳಿಸುತಿದ್ದುವು. ದೂರದಲ್ಲಿ ಒಂದು ಬಸರೀಮರ ಪೀತಕಿಸಲಯಗಳಿಂದ ತುಂಬಿ ರಕ್ತಸ್ನಾನ ಮಾಡಿದಂತಿತ್ತು. ಹಾದಿಯಂಚಿನ ಮರಗಳಿಂದ ಬಾಡಿದ ಹೂಗಳು ಭ್ರಮರಭಾರದಿಂದ ಮೈಮೇಲೆ ಉದುರುತಿದ್ದುವು.

"ನಾಳೆ ರಜೆ ಇದೆ. ಮನೆಗೆ ಬಂದು ಬಿಡು ವಿಮಲೂ !"

"ಆಗಲಿ."

ಅನಂತರ ಇಬ್ಬರ ಹಾದಿಯೂ ಕವಲೊಡೆಯಿತು; ಪರಸ್ಪರ ನೇಹಾನುರಾಗದಿಂದ ಬೀಳ್ಕೊಂಡರು.

ರಾತ್ರಿ ಹತ್ತರ ಅಂಚಿಗೆ ಹೊತ್ತು ಇಳಿದಾಗ ಹಾಸಿಗೆ ಸೇರಿ ದೀಪ ನಂದಿಸಿದಳು ನಿರ್ಮಲ. ಶಯ್ಯಾಪ್ರಾಂತದಲ್ಲಿ ಮೈಚೆಲ್ಲಿದ್ದ ಜಾನಕಿ ಕತ್ತಲೆಯನ್ನು ನಿಟ್ಟಿಸುತ್ತ ಭಾವಗಾಂಭೀರ್ಯದಿಂದ ನುಡಿದಳು,

"ನಿನ್ನ ಜೀವನ ಇನ್ನೊಂದು ರೀತಿಯಲ್ಲಿ ಅರಳಿದರೆ ನಾನು ನಿಶ್ಚಿಂತೆಯಿಂದ ಸಾಯಬಹುದಾಗಿತ್ತು. ನಿನ್ನದು ಯಾಕೋ ದೂರದೂರ ಹೋಗುತ್ತಿದೆ. ನನಗದೇ ಯೋಚನೆ."

ಅವಳ ತನಕ ಇದುವರೆಗೆ ಆ ಸುದ್ದಿ ಮುಟ್ಟಿರಲಿಲ್ಲ. ಅಮರನಾಥನ ಬಗೆ ನೆರೆ ಹೊರೆಯವರೆಲ್ಲಾ ಗುಸುಗುಸು ಎನ್ನುತಿದ್ದಾಗ ಒಮ್ಮೆ ನಿರ್ಮಲೆಯೊಂದಿಗೆ ಆ ವಿಷಯವನ್ನು ಪ್ರಸ್ತಾಪಿಸಿ 'ಅವನು ತುಂಬ ಒಳ್ಳೆಯವನು' ಎಂಬ ಸಮಾಧಾನಕರವಾದ ಉತ್ತರ ಬಂದಮೇಲೂ ಬಹಳವಾದ ತರ್ಕವಿತರ್ಕಗಳೆದ್ದಿದ್ದುವು. ಅನಂತರ ಬಿರುಗಾಳಿಯು ಬೀಸಿ ಕಾರ್ಮೆಳೆಯೂ ಕರೆದಿತ್ತು. ಕ್ರಮ ಕ್ರಮೇಣ ದುರ್ದಮ್ಯ ಪರಿಸ್ಥಿತಿಗೆ ಹೊಂದಿಕೊಂಡಿತು ವ್ಯಾಕುಲಿತ ಚಿತ್ತ.

ನಿರ್ಮಲೆಗೆ ಆ ವಿಷಯ ಪ್ರಸ್ತಾಪಿಸುವುದೇ ಬೇಡವಾಗಿತ್ತು. ಅದಲ್ಲದೆ ಇನ್ನೇನಾದರೂ ಮಾತಾಡಿದರೆ ಆ ವಿದಗ್ಧೆ ಅದರಲ್ಲಿ ಮತ್ತಾವ ಶಾಖೆ-ಪ್ರಶಾಖೆಗಳನ್ನು ಬಾಯಿಂದ ಬಿಡಿಸುವಳೋ ಎಂಬ ಯೋಚನೆ ಗಂಟಲನ್ನು ಅದುಮಿ ಹಿಡಿಯಿತು. ಸ್ವಲ್ಪ ಯೋಚಿಸಿ ಹೊರಳಿ ಮಲಗುತ್ತ "ನನಗೆ ತುಂಬ ನಿದ್ದೆ ಅಮ್ಮಾ!" ಎಂದಳು ನಿದ್ದೆಯ ಸೋಗು ಹಾಕಿ.

....ಹೊತ್ತು ಉರುಳುತಿತ್ತು; ವಾಯುಮಂಡಲದಲ್ಲಿ ಮೆಲ್ಲ ಮೆಲ್ಲನೆ ಶೈತ್ಯ ಸಂಚಾರವಾಗತೊಡಗಿತು.

....ಅಪರಿಚಿತ ಹಸುರು ಪ್ರಾಂತ್ಯ; ಗಿಡಗೆಂಟೆಗಳ ದಟ್ಟ ನಿವಾಸ.

....ಮೇಲೆ ಮೇಘ ಮುಕ್ತ ನೀಲಾಕಾಶ; ಕೆಳಗಡೆ ಹಸುರು ಹಾಸಿನ ರನ್ನಗಂಬಳಿ.

ಎಂದೆಂದೂ ಕೊನೆಗಾಣದ ಪಯಣ ಸಾಗುತ್ತಲೇ ಇರುವಾಗ ಅಂತರಂಗದ ಜ್ವಾಲೆಯಲ್ಲಿ ಮನಃಪ್ರಾಣಗಳು ಬೇಯುತ್ತಲೇ ಇದ್ದುವು. ಹೃದಯ ಮೃದಂಗ ಈಗಲೀಗ ಬಿರಿಯುವಂತೆ ಧಣಧಣನೆ ಉದ್ಘೋಷಿಸುತ್ತಿದೆ. ಮೂಡಣದಲ್ಲಿ ಮೂಡುತ್ತಿರುವ ಮುಂಬೆಳಕು ಅದಾವ ದೈವಿಕ ಸೂಚನೆ ಕೊಟ್ಟಿತೋ. ಹುಚ್ಚಾಗಿದ್ದ ಮನಸ್ಸು ತಿಳಿಯಾಗಿ ಕೆಚ್ಚು ಗಳಿಸಿತು; ಬಾಹ್ಯ ಪ್ರಜ್ಞೆಯೇ ಇಲ್ಲ. ಎಲ್ಲಿಗೆ ಹೋಗುತ್ತೇನೆಂಬ ಅರಿವಿಲ್ಲ; ಇನ್ನೆಲ್ಲಿಗೆ ಹೋಗಬೇಕೆಂಬ ಇಚ್ಛೆಯೂ ಇಲ್ಲ. ಹಾದಿ ಹರಿದತ್ತ ಕಾಲುಗಳು ಧಾವಿಸುತ್ತಿವೆ. ಬೀಸುಗಾಳಿಯತ್ತ ನುಗ್ಗಿ ದೇಹ ಧಾವಿಸುತಿದ್ದರೂ ತಣ್ಣು ತಳೆಯದು. ಒಡಲುರಿಯಲ್ಲಿ ರೋಮರೋಮ ಸ್ಪಾ

ಸುಡುತ್ತಿದೆ; ಇನ್ನು ಭಸ್ಮೀಭೂತವಾಗುವುದೊಂದು ಬಾಕಿ.

....ಉರಿ ತಡೆಯಲಾರೆ. ಯಾವುದಾದರೊಂದು ತಣ್ಣನೆಯ ಕೆರೆ ಸಿಕ್ಕಿದ್ದರೆ....? ಆದರೆ ಜನವಸತಿ ಇರುವ ಕಡೆ ಬೇಡವೇ ಬೇಡ....ಯಾರೂ, ನನ್ನ ಶವದ ಕಡೆ ಸಹ ಬೆಟ್ಟು ತೋರುವಂತಿರಬಾರದು. ದೂರದೂರವಾದ ದಟ್ಟವನದೇಶದಲ್ಲಿ--ಯಾರೂ ಕಾಣದಂತಹ ಪ್ರದೇಶದಲ್ಲಿ ಈ ದುರ್ಗಂಧ ಪೂರಿತ ದೇಹವನ್ನು ಒಗೆದು ಹೋಗುವೆ!....ಹೋಗುವೆ! ನನಗೀ ಪ್ರಪಂಚ ಸಾಕು! ಧಾರುಣಿ ಅತೀ ಚಿಕ್ಕವಯಸ್ಸಿನಲ್ಲೇ ಹೋದಳು....ಆಗ ಏಕೆ ಹೀಗಾಯ್ತು ಎಂದು ವ್ಯಥೆ ಪಟ್ಟಿದ್ದೆ....ಈಗ ಯೋಚಿಸಿ ನೋಡಿದರೆ ಆ ಮಾತೃಹೀನ-ಪ್ರೀತಿ ಹೀನ ಹೆಣ್ಣು ಮಗು ಈ ಪಾಪ ಪೂರಿತ ಪ್ರಪಂಚದಲ್ಲಿ ಉಳಿಯುವುದಕ್ಕಿಂತ ಹೋದುದೇ ಲೇಸು. ಅವಳು ಆಗಲೇ ಕಂಡುಕೊಂಡ ಹಾದಿಯನ್ನು ನಾನು ಇದುವರೆವಿಗೂ ಕಂಡುಕೊಳ್ಳಲಿಲ್ಲವಲ್ಲಾ? ಅಂದೇ ಆ ಯೋಚನೆ ಮೂಡಿದ್ದು ಅವಳೊಂದಿಗೇನೇ ಪಯಣಿಸಿದ್ದರೆ ಈ ಹೊಲಸು ಎಲ್ಲಿ ಮೈಗೆ ಅಂಟುತಿತ್ತು?

ಹಾ....! ಲೋಕದ ಕಣ್ಣಿಗೆ ಪಾಪಿಯಾಗಿ ಸಾಮಾಜಿಕ ದೃಷ್ಟಿಗೆ ಕೀಳಾಗಿ ಬದುಕುವುದು ಬೇಡವೇ ಬೇಡ....ಬೇಡ....ಖಂಡಿತ ಬೇಡ!

ಹುಚ್ಚು ಕೆಚ್ಚಾಗುತಿತ್ತು; ಕೆಚ್ಚು ನೂರಾಗುತಿತ್ತು.

ಇನ್ನೂ ನಸುಕು ಬೆಳುಕು. ಅಲ್ಲಲ್ಲಿ ಕೋಳಿಗಳು ಕೂಗುತ್ತಿವೆ. ನಾಯಿಗಳು ಆಗಾಗ ಬೊಗಳುತ್ತಿವೆ.

ನಗರದ್ದೇಶದ ಪ್ರಮುದವನ; ಸಾಲುಸಾಲಾದ ವೃಕ್ಷವಾಟಿಕೆ; ದಿಶೆದಿಶೆಗಳಿಂದಲೂ ನುಗ್ಗಿ ಬರುವ ತಂಗಾಳಿ. ಒಂದೊಂದೂ ಮುಕ್ತಹಸ್ತದಿಂದ ವಾಸಂತೀ ಉತ್ತರೀಯವನ್ನು ಹಿಡಿದೆಳೆದು ಹಿಂದಿರುಗಲು ಕೋರುತ್ತಿವೆ. ಆದರೂ ಜೀವ ಜಗ್ಗಲಿಲ್ಲ. ಉಟ್ಟ ಧವಳಾಂಬರ ಮಾಸಿರಲಿಲ್ಲ. ಹೊದ್ದ ವಾಸಂತೀ ಉತ್ತರೀಯ ನೆತ್ತಿಯಮೇಲೆ ಹರಿದಿತ್ತು. ಅಲೆಗೂದಲು ದೀಪ್ತ ಲಲಾಟದ ಮೇಲೆ ಸರಿದಿದ್ದುವು. ಮುಖದಮೇಲೆ ದೃಢ ನಿಶ್ಚಯ ಫಲಕ ಕಾಣಿಸುತಿತ್ತು.

ಮೂಡಣ ದಿಶೆಯಲ್ಲಿ ಮೂಡುವ ಮುಂಬೆಳಕು ಕ್ಷಣಕ್ಷಣಕ್ಕೂ ಪ್ರಗಾಢಗೊಳ್ಳುತಿತ್ತು. ಆಗಲೇ ಎಷ್ಟೋ ಮನೆಗಳ ಹೊಗೆ ಕೊಳವೆಗಳಲ್ಲಿ ಹೊಗೆಯಾಡುತ್ತಿದೆ. ಇನ್ನಷ್ಟು ಹೊತ್ತಿನೊಳಗಾಗಿ ಲೋಕಾಲಯವೆಲ್ಲಾ ಮುಂಬೆ

ಳಕಿನಿಂದ ತುಂಬಿ ಮನೆಮನೆಯಲ್ಲೂ ದಿನಚರಿ ಆರಂಭವಾಯಿತು. ಅಲ್ಲಲ್ಲಿ ಗೃಹಿಣಿಯರು ಮುಂಬಾಗಿಲಿಗೆ ರಂಗವಲ್ಲಿಯನ್ನು ಇಡುತಿದ್ದಾರೆ. ಜಗಜ್ಜೀವನ ದಲ್ಲಿ ಚಟುವಟಿಕೆ ಆರಂಭವಾದುದನ್ನು ನೋಡಿದಷ್ಟೂ ಹುಚ್ಚು ಕೆರಳಿ ಪ್ರಗಲ್ಭ ವಾಗುತಿತ್ತು. ಸಿಡಿದೊಡೆಯಲಿರುವ ದಡಾಕಿಯಂತೆ ಶರೀರ ಸಂಪುಟ ತಾಪ ದಗ್ಧವಾಗಿತ್ತು.

ಸಾಲು ವೃಕ್ಷಗಳು ಭ್ರಮರ ಭಾರದಿಂದ ಪುಷ್ಪವೃಷ್ಟಿ ಕರೆಯುತಿದ್ದುವು; ಧವಳಾಂಬರದ ಮೇಲೆ ಪುಷ್ಪ ಪರಾಗ ಬಿದ್ದು ಅಲ್ಲಲ್ಲಿ ಮೂಡಿದ ಸುಂದರ ಹಾರಿದ್ರ ಮುದ್ರೆ ಮನಸ್ಸಿಗೆ ಹಿತವನ್ನು ಮೂಡಿಸುವಂತಿತ್ತು.

ಆದರೆ....?

ಪ್ರಮದವನವನ್ನು ದಾಟಿ ಒಂದೆರಡು ಮೈಲಿ ನಗರವಲಯದಲ್ಲೇ ಮುನ್ನ ಡೆದಮೇಲೆ ಬಸ್ಸಿನ ನಿಲ್ದಾಣ ಗೋಚರಿಸಿತು. ನಾಲ್ಕಾರು ಭೀಮಕಾಯದ ಬಸ್ಸುಗಳು ಆಗಲೇ ಹೊರಡಲು ಅಣಿಯಾಗಿವೆ. ಶೋಣ ವರ್ಣದ ರೂಕ್ಷಕಾಯ ಅದೆಷ್ಟು ಮಂದಿಯನ್ನು ಆಕರ್ಷಿಸಿತ್ತೋ. ಆಗಲೇ ಅನೇಕಮಂದಿ ಸುತ್ತ ಮುತ್ತ ನೆರೆದಿದ್ದಾರೆ. ನಿರ್ಮಲ ಅದನ್ನು ನೋಡುತ್ತಲೂ ಅತ್ತ ಧಾವಿಸಿ ಕೇಳಿ ದಳು "ಈ ಬಸ್ಸು ಎಲ್ಲಿಗೆ ಹೋಗುತ್ತೆ ?"

"ಕೆಮ್ಮಣ್ಣು ಗುಂಡಿಗೆ."

"ತಲುಪುವುದೆಷ್ಟೊತ್ತಿಗೆ ?"

"ಸಂಜೆ ಐದೂವರೆ ಗಂಟೆಗೆ."

ಆ ಶುಭ ಸಮಾಚಾರ ಮನವನ್ನು ಆಕರ್ಷಿಸಿತು. ನಿರ್ಮಲೆಯು ಟಿಕೆಟ್ ಕೊಂಡು ಹತ್ತಿ ಕುಳಿತುಕೊಂಡಳು. ಎದೆಯಲ್ಲಿ ಸಿಕ್ಕಿಕೊಂಡಿದ್ದ ಉಸಿರು ಸರಾಗವಾಗಿ ಹರಿದಾಡಿತು. ಆಗಲೇ ಪಯಣಿಗರು ಬಸ್ಸಿನ ತುಂಬ ಕಿಕ್ಕಿರಿದು ತುಂಬಿದ್ದಾರೆ. ಹೆಂಗಸರು—ಮಕ್ಕಳು ಎಲ್ಲೋ ಕೆಲವು ಮಂದಿ. ಸಿಗರೇಟು-ಬೀಡಿಗಳ ಕಟುವಾಸನೆ ಆಗಲೇ ಆರಂಭವಾಗಿತ್ತು. ಮಾತಿನ ಚಕಮಕಿ—ಹಾಸ್ಯದ ಚಟಾಕಿ ಕಿವಿಯ ಮೇಲೊರೆಯುತಿತ್ತು. ದೃಷ್ಟಿದೋಷ ಹೊಂದಿದ ಪುರುಷವರ್ಗ ಆಗಾಗ ದೃಷ್ಟಿಯನ್ನು ಇತ್ತ ಹೊರಳಿಸುತಿತ್ತು. ಮಿಂಚುಗಣ್ಣುಗಳ ಹೊಳಪಿನಲ್ಲಿ ಹೊರಸೂಸುತಿದ್ದ ಆಶಾಲೋಲುಪ್ತಿ ತನು ಮನಗಳನ್ನು ಯಾಂತ್ರಿಕವಾಗಿ ಕೋರೈಸುವಂತಿದ್ದುವು. ನಿಡಿದಾದ ಉಸಿರು

ಬಿಟ್ಟು, ಮೊಗದಿರುವಿ ಹೊರಜಗತ್ತಿನಲ್ಲಿ ನೋಟವನ್ನು ಚೆಲ್ಲಿಕೊಟ್ಟು ಮೂರ್ತಿಮತ್ತಾಗಿ ಕುಳಿತುಕೊಂಡಳು. ಜೀವ ನೀರಿನಿಂದ ಹೊರತೆಗೆದ ಮೀನಿನಂತೆ ಮಿಲಿಮಿಲಿಗೊಳ್ಳುತಿತ್ತು.

ಬಸ್ಸು ಹೊರಟಿತು. ಮೈಲು ಮೈಲುಗಳು ಕರಗಿದುವು.

ಹಸುರು....ಹಸುರು....ಹಸುರು!

ವನವನಾಂತರವೆಲ್ಲ ಹಸುರುಡೆಯುಟ್ಟು ರಂಗುರಂಗಿನ ಎಳೆವಳಿರುಗಳ ಉತ್ತರೀಯ ಹೊದ್ದು ಮದುಮಗಳಂತೆ ಅಲಂಕೃತವಾಗಿತ್ತು. ಮೈಮರೆತ ನಿರ್ಮಲ ಚಿಂತಾಲೋಕದಲ್ಲಿ ಸಂಪೂರ್ಣ ಮುಳುಗಿದಾಗ ತಾಯಿ–ತಂಗಿ–ತಮ್ಮಂದಿರು ಸ್ಮೃತಿ ಪಥದಿಂದ ಅಳಿಸಿಯೇ ಹೋದರು.

ಪಯಣ ಸಾಗುತ್ತಲೇ ಇತ್ತು. ಬಸ್ಸು ಅನೇಕ ಕಡೆ ನಿಂತು ಹೊರಟಿತು. ಇಳಿಯುವವರು ಇಳಿಯುತಿದ್ದರು; ಹತ್ತುವವರು ಹತ್ತುತಿದ್ದರು. ತಿಂಡಿ ತಿನಿಸುಗಳ ಪರಿಮಳವು ಆಗಾಗ ಮೂಗಿಗೆ ಬಡಿಯುತಿತ್ತು. ಆದರೂ ಹಸಿವು ಮೂಡಲಿಲ್ಲ. ಹಾದಿಯ ಮಗ್ಗುಲಲ್ಲಿ 'ಬಸವನಹಳ್ಳಿ' ಎಂಬ ಕಲ್ಲಿನ ನಾಮಫಲಕ ಕಾಣಿಸಿತು. ಹಳ್ಳಿಗಳ ಮುಗ್ಧ–ಅಜ್ಞ ಜನ ಸಮುದಾಯ ಅಲ್ಲಲ್ಲಿ ಕಾಣಸಿಗುತಿತ್ತು. ಕೋಳಿ-ನಾಯಿ-ದನಕರುಗಳಿಂದ ಕೂಡಿದ ಹಳ್ಳಿಯ ಪ್ರಪಂಚ ಎತ್ತು ಬಂಡಿಗಳ ಸಮೇತ ಚಿತ್ರಗಾರನ ಕುಂಚಕ್ಕೆ ಮೈಯೊಡ್ಡಿ ನಿಂತಂತೆ ತೋರಿಬಂತು. ಅಲ್ಲಿಂದ ಮುಂದೆ ಪಯಣಿಸಿದ ಬಸ್ಸು ಮುಂದಿನ ಊರಿನಲ್ಲಿ ಸುಡುಬಿಸಿಲ ಸ್ನಾನ ಮಾಡುತ್ತ ನಿಂತಿತು.

ಪಕ್ಕದಲ್ಲಿದ್ದವರಾರೋ ಇನ್ನೊಬ್ಬರನ್ನು ಕೇಳಿದರು "ಕೆಮ್ಮಣ್ಣುಗುಂಡಿ ಇನ್ನೆಷ್ಟು ಮೈಲಿಯಿದೆ?"

"ಇಪ್ಪತ್ತೆರಡು ಮೈಲಿ."

ಆ ಪ್ರಶ್ನೋತ್ತರ ಕರ್ಣಪಟಲದ ಮೇಲೆ ಸ್ಪಷ್ಟವಾಗಿ ಮೂಡಿದಾಗ ಇನ್ನೂ ಇಪ್ಪತ್ತೆರಡು ಮೈಲಿ ಬಸ್ಸಿನಲ್ಲಿ ಪಯಣಿಸುವ ಸಹನೆ ಇನಿತೂ ಉಳಿಯಲಿಲ್ಲ. ಇಳಿಯುವ ಪಯಣಿಗರೊಂದಿಗೆ ಅವಳೂ ಇಳಿದಳು. ಅಷ್ಟುದೂರ ಬಸ್ಸಿನಲ್ಲಿ ಪಯಣಿಸುವುದೆಂದರೆ ಕತ್ತಲಾಗುವುದೇ ಸೈ. ಅನಂತರ ಕಾಣದ ಊರಿನಲ್ಲಿ ತನ್ನ ಗತಿಯೇನಾಗಬೇಡ?.... ಆ ಯೋಚನೆ ಬಂದಾಗ ದೇಹದಾದ್ಯಂತ ನಡುಕಂಪನದ ಅಲೆ ಮೆಲ್ಲನೆ ಹರಿದಾಡಿಹೋಯಿತು.

ಟಾರು ಬಳಿದ ಹೆದ್ದಾರಿ ದೃಷ್ಟಿಯ ಕಕ್ಷೆಯಲ್ಲಿ ಅಂಕು ಡೊಂಕಾಗಿ ಹರಿದಿತ್ತು. ಮಧ್ಯಾಹ್ನದ ಚುರುಕು ಜನಗತಿಯಲ್ಲಿ ಕಾಣಿಸುತಿತ್ತು. ಬೆಳಗಿನಿಂದ ಮೈಮುದುಡಿ ಕುಳಿತು ನೋವುಂಡಿದ್ದ ಶರೀರಕ್ಕೆ ನಡಿಗೆ ಹಿತಕರವಾಗಿ ತೋರಿತು. ಪ್ರಕೃತಿಯ ಸಂಭ್ರಮ ವಿಶೇಷದಲ್ಲಿ ನೈರಾಶ್ಯದೃಷ್ಟಿ ಹರಿದಾಡುತಿತ್ತು. ಆ ಸಣ್ಣ ನಗರವಲಯವನ್ನು ಕಳೆಯುವುದು ಅಷ್ಟೇನೂ ಹೆಚ್ಚು ಹೊತ್ತು ತೆಗೆದುಕೊಳ್ಳಲಿಲ್ಲ. ಅನಂತರ ಆ ಹೆದ್ದಾರಿ? ಅದು ಲೋಕದಿಂದ ಲೋಕಾಂತರಕ್ಕೆ ಹರಿದಂತೆ ನಡೆದಷ್ಟೂ ಬೆಳೆಯುತ್ತಲೇ ಇದೆ!

೩೫

ಒಂಟಿಯಾಗಿ ಪಯಣಿಸುವ ತರುಣಿಯನ್ನು ಕಂಡರೆ ಹಾದಿಗರಿಗೆ ಅದೆಷ್ಟು ಆಸಕ್ತಿಯೋ....

ನೋಡಿದಷ್ಟೂ ಸಾಲದು....ಶ್ರದ್ಧೆವಹಿಸಿದಷ್ಟೂ ಸಾಲದು....ಅಚಲ ಆಸ್ಥೆ ಬೆಳೆದಷ್ಟೂ ಸಾಲದು!

"ಯಾವೂರಮ್ಮಾ?" ತಾರುಣ್ಯವುಕ್ಕುತಿದ್ದ ವ್ಯಕ್ತಿಯೊಬ್ಬ ಗಂಟಲು ಸರಿಪಡಿಸಿಕೊಂಡು ಕೇಳಿದ.

"........"

"ಯಾಕೆ, 'ಮೂಗಿ'ಯಾಗಿದ್ದಿ? ಮಾತಾಡಬಾರ್ದ?"

ನಿರ್ಮಲ ಅತ್ತ ತಿರುಗಿ ನೋಡುವ ತೊಂದರೆಯನ್ನೂ ತೆಗೆದುಕೊಳ್ಳಲಿಲ್ಲ. ಚಿತ್ತಭಿತ್ತಿಯಲ್ಲಿ ಹಲವಾರು ದುಷ್ಟ ಶಕ್ತಿಗಳು ಸುಳಿದಳಿದುವು. ಬಸ್ಸಿನಿಂದ ಇಳಿದದ್ದೂ ಸಹ ತಪ್ಪಾಯಿತೇನೋ ಎಂಬ ಯೋಜನೆ ಮನದಲ್ಲಿ ಅನೇಕಬಾರಿ ಮೂಡಿ ಮಾಯವಾಯಿತು. ಕಮಲದಂತಹ ಪ್ರಫುಲ್ಲ ಮುಖ ಭಯದಿಂದ ಕಳೆಗುಂದಿ ಕಪ್ಪುಗಟ್ಟಿತ್ತು. ಯಾವ ಪುಣ್ಯಫಲವೋ ಅವನಿಂದ ಇನ್ನಾವ ಪ್ರಶ್ನೆ ಏಳುವ ಮೊದಲೇ ರಸ್ತೆಯಲ್ಲಿ ಸ್ತ್ರೀ ಪುರುಷರ ಗುಂಪು ಕಾಣಿಸಿತು. ಒಂಟಿಗಸಿಗಿಂತ ಹತ್ತು ಮಂದಿ ವಾಸಿ! ಮುಂದೆ ರಸ್ತೆಯ ಪಕ್ಕದಲ್ಲಿ ವಿಶಾಲವಾದ ಗದ್ದೆಯ ಕೋಗು ಕಾಣಿಸಿತು. ಭತ್ತದ ಸಸಿಗಳು ಇನ್ನೂ ಕವ ಲೊಡೆದಿರಲಿಲ್ಲ. ಅಲ್ಲಿಯ ಸಣ್ಣ ಕಾಲುವೆಯಲ್ಲಿ ಸ್ವಚ್ಛವಾದ ನೀರು ಜಳಜಳ

ಸದ್ದಿನೊಡನೆ ಹರಿಯುತಿತ್ತು. ನೋಡಿದೊಡನೆ ಆಕರ-ಆನಂದ ಒಡೆದು ಮೂಡಿದುವು. ಬೊಗಸೆ ತುಂಬಿ ಹೊಟ್ಟೆತುಂಬುವಷ್ಟು ಕುಡಿದು ಮುಖಮಜ್ಜನ ಮಾಡಿ ಎದ್ದು ನಿಂತಾಗ ಹೆಣ್ದನಿಯೊಂದು ಕೇಳಿತು "ಎಲ್ಲಿಗೆ ಹೊರಟದ್ದೀಯವ್ವ ಒಬ್ಬಳೇ ?"

"ತಂಗಿ ಮನೆಗೆ."

"ಎಷ್ಟು ದೂರ ?"

"ಇಲ್ಲೇ....ಹತ್ತಿರ."

ಮುಂದೆ ಮುಂದೆ ಮತ್ತೆರಡು ತಿರುವು ಮುರುವು ಕಳೆಯುವಷ್ಟರಲ್ಲಿ ಹತ್ತಾರು ಮಂದಿ ಗೋವಳರು ಕಂಡುಬಂದರು. ಹತ್ತು ಹದಿನೈದು ವಯಸ್ಸಿನೊಳಗಣ ಹುಡುಗರೂ ಹುಡುಗಿಯರೂ ಇದ್ದರು. ಅವರಲ್ಲಿ ಒಬ್ಬ ಚುರುಕು ಸ್ವಭಾವದ ಹುಡುಗಿ ಕೇಳಿದಳು-"ಯಾವೂರವ್ವ ನಿಮ್ಮದು ?"

"ಬಸವನಹಳ್ಳಿ !"

"ಅಹಹ್ಹಾ ! ಎಲ್ಲಾ ಸುಳ್ಳಿ ! ಬಸವನಹಳ್ಳಿಯವರು ನಮಗೆ ಗೊತ್ತಿಲ್ಲವೇ ?"

"ಅದ್ಹೇಗೆ ? ಎಲ್ಲರೂ ಗೊತ್ತೇ ನಿನಗೆ ?"

"ಓ, ಗೊತ್ತೇಗೊತ್ತು !"

"ನಾವಲ್ಲಿಗೆ ಈಚೆಗೆ ಬಂದವರು !"

"ಹಾಗಾದರೆ ಎಲ್ಲಿಗೆ ಹೊರಟಿರಿ ?"

"ನಿಮ್ಮನ್ನು ನೋಡೋಣ ಅಂತಲೇ !"

"ಸರಿ ಬಿಡಿ ; ಎಲ್ಲಾ ಸುಳ್ಳಿ! ನೀವು ಬಸವನಳ್ಳಿಯವರು ಅಲ್ಲೇಅಲ್ಲ!"

ಎಂತಹ ಸೋಲು ! ಆ ಮುಗ್ಧ ಬಾಲೆಯೊಂದಿಗೂ ಸೋಲೇ ? ನಾನಿನ್ನಾವುದನ್ನೂ ಈ ಜೀವಿತದಲ್ಲಿ ಗೆಲ್ಲಲಾರೆ ! ಅದು ಖಂಡಿತ....!

ಹಾಯ್ ಹಾಯ್ !

ತನ್ನ ಬಗೆಗೆ ತಾನೇ ಮರುಗಿದಳು ನಿರ್ಮಲ. ವಿಚಿತ್ರ ವೇದನೆಯಲ್ಲಿ ರಕ್ತದ ಪ್ರತಿಕಣವೂ ಆಲೋಡಿತವಾಯಿತು.

ಆದರೆ, ಆ ಪರಮ ಮುಗ್ಧತೆಯಲ್ಲಿಯೂ ಎಂತಹ ಜಾಣ್ಮೆ ಸ್ಫುರಿಸುತ್ತಿದೆ....? ದೇವರ ದಯದಿಂದ ನಿನ್ನ ಜೀವನ ನಿರ್ಮಲವಾಗಿರಲಿ, ಯಾವ

ದುಷ್ಟ ಶಕ್ತಿಯೂ ಮಲಿನ ಹಸ್ತದಿಂದ ನಿನ್ನ ಮುಟ್ಟದಿರಲಿ, ವಿಧಾತ ನಿನ್ನ ಬಗ್ಗೆ ಅಷ್ಟಾದರೂ ಕರುಣೆ ತೋರಲಿ!

ದುಃಖದಗ್ಧ ಹೃದಯಾಳದಲ್ಲಿ ಪ್ರಾರ್ಥನೆಯ ಝುರಿ ಬಿಸುಸುಯ್ಲಿನೊಡನೆ ಹರಿದಾಡಿತು. ನಿರ್ಮಲ ಮರವಟ್ಟು ನಿಂತು ಆ ಬಾಲಕಿಯ ಮುಖ ಪದ್ಮವನ್ನು ನಿಟ್ಟಿಸಿದಳು. ಬಾಚದ ಕೂದಲು, ನಕಲಿ ಒಡವೆಗಳು, ಜೋಲು ಬಿದ್ದ ರವಿಕೆ, ಅಸ್ತವ್ಯಸ್ತ ಸೀರೆ, ಸೊಟ್ಟಪಟ್ಟ ಜಡೆ. ಸುಡುಬಿಸಿಲಲ್ಲಿ ಬೆಂದು ಮಾಸಿದ ಚರ್ಮ, ಒರಟು ಕೂದಲು, ಎಲೆ ಅಡಿಕೆಯ ತುಂಬುಲವೊರೆದ ತುಟಿಗಳು....

ಪ್ರಾಪಂಚಿಕ ಜ್ಞಾನ ಇನಿತೂ ಇಲ್ಲ. ಆದರೆ, ಅದೇ ಎಷ್ಟು ಕ್ಷೇಮ? ಅವಳನ್ನು ಯಾವ ಸೂಕ್ಷ್ಮ ವಿಚಾರವೂ ಬಾಧಿಸದು. ಸಂತೆಯಲ್ಲಿ ಕಲೆತು ಅಗಲುವಂತೆ ಕ್ಷಣ ಭಂಗುರದಲ್ಲೂ ಆಕೆ ಕ್ಷಣಿಕ ಸುಖಿ!

ಗೋವಳರ ತಂಡವನ್ನು ಹಿಂದೆ ಬಿಟ್ಟು, ಏಕಾಂತ ನಿಷ್ಠೆಯಿಂದ-ಏಕಾಂತ ಶ್ರದ್ಧೆಯಿಂದ ಮುಂದಿನ ಹಾದಿ ಹಿಡಿದಳು ನಿರ್ಮಲ. ಆದರೆ, ಆಗಲೇ ಮಜ್ಜಾ ಮಾಂಸಲ ಶರೀರ ಹೆಜ್ಜೆ ಹೆಜ್ಜೆಗೂ ಸೋಲುವಷ್ಟು ಬಳಲಿತ್ತು. ಕೆರಳಿದ ಚೇತನ ಅದನ್ನು ಲೆಕ್ಕಿಸದೆ ರೈಲೋಟಕ್ಕಿಂತ ಮಿಗಿಲಾಗಿ ಮುನ್ನಡೆಸುತಿತ್ತು.

ಕಂಡರಿಯದ ಪಥ....ಅಪರಿಚಿತ ಜನವಾರ್ಧಿ....

ಈ ಸುಂದರ ಕುಟಿಲ ಜಗತ್ತಿನಲ್ಲಿ ಎಲ್ಲಿ ಹೇಗೆ ನಡೆದರೂ ಜಟಿಲತೆ ಬೆಳೆಯುವಂತೆ ಭಾಸವಾಗುತಿತ್ತು. ಭಯ–ಕಳವಳ ಮನವನ್ನು ಎಣೆಯಿಲ್ಲದಂತೆ ಆವರಿಸುತಿತ್ತು. ತಲೆಯಮೇಲೆ ಹರಿದ ಸೆರಗು ಗಾಳಿಗೆ ಚಲಿಸದಂತೆ ಬಿಗಿಹಿಡಿದು ಕೊಂಡು ಅಧೋವದನೆಯಾಗಿ ಅದೆಷ್ಟು ದೂರ ನಡೆದಳೋ....ಅಲ್ಲಲ್ಲಿ ಕಾಣ ಬರುವ ಪಾಂಥರ ಸೂಕ್ಷ್ಮ–ತೀಕ್ಷ್ಣ ದೃಷ್ಟಿ ಇತ್ತ ಮತ್ತೆ ಮತ್ತೆ ಹೊರಳುವಾಗ ಅದ್ಭುತ ಸಂಕಷ್ಟ ಹೃದಯವನ್ನು ಕಿಚ್ಚಿನಂತೆ ಸುಡುತಿತ್ತು. ದುಃಖ–ದುಗುಡ ಗಳಿಂದ ಕಣ್ಣುಗಳು ಮಂಜುಮಂಜಾಗುತಿದ್ದುವು. ಆದರೂ ಧೂರ್ತಧೈರ್ಯ ಕಂಗೆಡುತ್ತಲೇ ಇಲ್ಲ.

ಮುಂದೆ....ಮುಂದೆ!

ಅದೆಷ್ಟು ದೂರ ಸಾಗಿತೋ ಆ ಹಾದಿ? ಧೂಳೀಧೂಸರಾಯಮಾನ ವಾದ ಕರ್ರಸೆಯ ಹಾದಿ ಎಷ್ಟು ನಡೆದರೂ ಮುಗಿಯುತ್ತಲೇ ಇಲ್ಲ. ಒಮ್ಮೆ

ಗಮ್ಯಸ್ಥಾನವನ್ನು ಸೇರಿದರೆ ಸಾಕು ಎಂಬ ಗೀಳು ...ತಾಳಲಾಗದ ಪರಿತಾಪ. ಎದುರುಗಡೆಯಿಂದ ಯಾರೋ ತಲೆಯಮೇಲೆ ಹೊರಲಾರದ-ಭಾರವಾದ ಮೂಟೆಯನ್ನು ಹೊತ್ತು ಇತ್ತಲೇ ಬರುತಿದ್ದುದು ದೃಷ್ಟಿಗೆ ಬಿತ್ತು. ಹಾದಿಯಂಚಿನಲ್ಲಿ ನಡೆಯುತಿದ್ದ ಏಕಾಕಿನಿಯನ್ನು ಕಂಡು ಆತನ ದುರಾಸೆ ನೂರು ವಿಧಗಳಲ್ಲಿ ಕುದುರಿತೇನೋ...ಜ್ವಲಂತನಯನಗಳಿಂದ ನಿಟ್ಟಿಸಿ ನೋಡುತ್ತ ಕೇಳಿದ,

"ಒಬ್ಬಳೇ ಎಲ್ಲಿಗೆ ಹೋಗ್ತಿದ್ದಿಯಾ ?"

"........"

"ಮುಂದೆ ಹೋಗಬೇಡ ಹೆಣ್ಣೇ ! ಅತ್ತಲಾಗಿ ಹಳ್ಳಿಗಿಳ್ಳೀ ಏನಿಲ್ಲ."

ನಿರ್ಮಲ ಮಾತಾಡದೆ ಮುಂದುವರಿದಳು.

ತಲೆಯಮೇಲೆ ಹೊತ್ತ ಭಾರವಾದ ಹೊರೆಯಿಂದ ಅವನ ನಡಿಗೆ, ನಿಧಾನವಾಗಿತ್ತು. ಮೈಯ್ಯಲ್ಲಿ ಬೆವರು ಹುಚ್ಚೆದ್ದು ಸುರಿಯುತಿತ್ತು. ಆದರೂ ಹತ್ತಿರ ಹತ್ತಿರ ಬರತೊಡಗಿದ. ನಿರ್ಮಲ ಸಿಟ್ಟಿನಿಂದ ಸಿಂಹಿಣಿಯಂತೆ ತಿರುಗಿನಿಂತು "ಹೋಗ್ತೀಯೋ ಇಲ್ಲವೋ ?" ಎಂದಳು. ಅವನು ಅಷ್ಟಕ್ಕೂ ಮಣಿಯದೆ ಆಶಾಭರಿತ ಲೋಚನಗಳಿಂದ ನೋಡುತ್ತ ಅಂದ "ಒಬ್ಬಳೇ ಇದ್ದೀ....ನಾನೂ ಒಬ್ಬೊಂಟಿಗ. ನನ್ನ ಮನೆಗಾದರೂ ಬಾ. ಚೆಂದಾಗಿ ಬಾಳಬಹುದು !" ತಲೆಯ ಮೇಲೆ ಭಾರವಾದ ಹೊರೆ ಇಲ್ಲದಿದ್ದರೆ ಆತ ಇನ್ನಾವ ಕ್ರಮ ಕೈಕೊಳ್ಳುತಿದ್ದನೋ....ಕೆಳಗೆ ಹಾಕಿದನೆಂದರೆ ಎತ್ತಿ ಮೇಲೆ ಇಡುವವರಿಲ್ಲ. ನಿಡುಗಣ್ಣುಗಳು ನುಂಗಿ ಬಿಡುವಂತೆ ನಿಟ್ಟಿಸುತ್ತಿವೆ.

ನಿರ್ಮಲ ತಿರುಗಿ ನೋಡದೆ ನಡೆದಳು. ನರನಾಡಿಗಳಲ್ಲಿ ಬೆಂಕಿಯ ಝುರಿಯಂತೆ ರೋಷ ಹರಿದಾಡಿತು. ದೂರ ಸಾಗದ ಮೇಲೆ ಒಮ್ಮೆ ಹಿಂತಿರುಗಿ ನೋಡುವ ಸಾಹಸ ಮಾಡಿದಾಗ ಅವನೂ ಇತ್ತಲೇ ನೋಡುನೋಡುತ್ತ ಹೋಗುತಿದ್ದುದು ಕಂಡು ದೇಹದಾದ್ಯಂತ 'ಜುಂ' ಎಂದಿತು. ಒಡನೆ ಅಂತರಾತ್ಮ "ಈ ನರಕ ಪ್ರಪಂಚದಿಂದ ನನ್ನನ್ನು ಪಾರುಮಾಡು !" ಎಂದು ದೇವರನ್ನು ಬೇಡಿಕೊಂಡಿತು.

ಅವನು ಅಲ್ಲಿಂದಲೇ ಕೂಗಿ ಹೇಳಿದ "ಅತ್ತ ಯಾಕೆ ಹೋಗ್ತಿ ಹೆಣ್ಣೇ ! ಅಲ್ಲೇನಿದೆ ಅಂತ ತಿಳಿದಿದ್ದೀ ?"

"........"

ಅದೇ ದನಿ ಪುನಃ ಮೊಳಗಿತು "ಹೋಗು, ಹೋಗು! ನಿನಗಲ್ಲಿ ದೊಡ್ಡಯ್ಯನ ಕೆರೆಯೇ ಗತಿ!"

ನಿರ್ಮಲ ಹೆಜ್ಜೆಗಳನ್ನು ಇನ್ನಷ್ಟು ವೇಗಗೊಳಿಸಿದಳು. ಹೃದಯಸ್ಥಿತ ಮಹಾಜ್ವಾಲೆ ರೋಮರೋಮವನ್ನೂ ಉತ್ತೇಜಿತಗೊಳಿಸುತಿತ್ತು. ತೀವ್ರ ಗತಿಯಲ್ಲಿ ತುಸುದೂರ ನಡೆದಮೇಲೆ ಹಿಂದಿರುಗಿ ನೋಡಿದಾಗ ಆ ಧೂರ್ತ ಕಣ್ಮರೆಯಾಗಿದ್ದ. ಎಲ್ಲಾದರೂ ಹೊರೆಯನ್ನು ಇಳುಹಿ ಹಿಂಬಾಲಿಸಿ ಬಂದರೂ ಬಂದಾನು ಎನಿಸಿ ಮೈನಡುಗಿತು. ಒಂದೇ ಉಸಿರಿಗೆ ಓಡಿದಳು.

ಮುಂದೆ ಮಹಾ ವಿಸ್ತಾರವಾದ ಪುಷ್ಕರಣಿ....!

ಅರುಣನ ಉಜ್ವಲ ಕಿರಣಗಳಿಂದ ಥಳಥಳಿಸುವ ನೀರು. ದೂರದ ಅಂಚಿನಲ್ಲಿ ಒಂದಿಬ್ಬರು ಬೆಸ್ತರಂತೆ ತೋರುವ ಮಂದಿ ಬೇರೆ ಇದ್ದಾರೆ....ಅಯ್ಯೊ, ಇಲ್ಲಿಯೂ ಜನರಿರಬೇಕೇ? ಎಂದು ಅಂತರಾತ್ಮ ತಳಮಳಿಸಿ ದೇಹದಾದ್ಯಂತ ಕಂಪನದ ಅಲೆ ಹರಿದಾಡಹತ್ತಿದರೂ ಧೂರ್ತಗತಿಯಲ್ಲಿ, ಸಿಂಹಧೈರ್ಯದಲ್ಲಿ ಚೇತನ ಮುಂದಾಗಿತ್ತು.

ಬೆಸ್ತರು ಬಹಳ ದೂರದಲ್ಲಿದ್ದಾರೆ. ಅವರ ಗಮನ ಇತ್ತ ಹರಿಯುವುದರೊಳಗಾಗಿ ನಾನೀ ಭುವಿಯಲ್ಲಿ ಇರುವ ಪ್ರಮೇಯ ಬರುವುದಿಲ್ಲ. ಗಮ್ಯಸ್ಥಾನ. ದೊಡ್ಡಯ್ಯನ ಕೆರೆಯ ಹೃದಯದಲ್ಲಿ! ನನ್ನನ್ನು ಅನಂತಾನಂತದೆಡೆಗೆ ಒಯ್ಯುವ ಚೇತನ ಅದೇ! ಇನ್ನು ಯಾರೂ ನನ್ನನ್ನು ತಡೆಯದಿದ್ದರೆ ಸಾಕು.

ಹೇ! ಭಗವನ್! ನನ್ನನ್ನು ನಿನ್ನ ಉಡಿಯಲ್ಲಿ ಸೇರಿಸಿಕೊ!

ಸಂಧ್ಯಾ ಸೂರ್ಯನ ಅರುಣಕಿರಣಗಳ ಅದ್ಭುತ ಪ್ರೇಮಧಾರೆ ವಾರಿರಾಶಿಯನ್ನು ನಿತಾಂತ ಭಾವುಕತೆಯಿಂದ ರಾಗರಂಜಿತಗೊಳಿಸಿತ್ತು. ತೀರದಲ್ಲಿ ನೆಲೆ ನಿಂತ ಅಶ್ವತ್ಥ ವೃಕ್ಷದ ತಾಮ್ರವರ್ಣರಂಜಿತ ಕೋಮಲ ಕಿಸಲಯ ಸಂಪತ್ತಿ ಜ್ವಲಂತ ಆಗ್ನೇಯ ಗಿರಿಯಂತೆ ಕಂಗೊಳಿಸುತಿತ್ತು. ಪುಷ್ಕರಣಿಯ ವಾಮಾಂಗದ ಮೇಲೆ ಪಶ್ಚಿಮಾದ್ರಿಯ ನೆರಳು ಮೈ ಚಾಚಿತ್ತು. ಪಶ್ಚಿಮ ದಿಗ್ದೇಶದಲ್ಲಿ ಮಹಾರುದ್ರನ ಪಿನಾಕದಂತೆ ಮೂಡಿ ಬಂದ ಮಂದಾಕಿನೀ ಲತೆ ಮನಮೋಹಕವಾಗಿತ್ತು. ಪರಮ ಭೂಯಿಷ್ಠಳಾದ ದಿವಸಲಕ್ಷ್ಮಿ ಸಂನ್ಯಾಸ ಸ್ವೀಕರಿಸಲು ಅಭಿಶಸ್ತ ಹೆಜ್ಜೆಗಳನ್ನು ಕ್ರಮಬದ್ಧವಾಗಿ ಮುಂದಿಡುತಿದ್ದಾಳೆ. ಉಜ್ವಲೋಜ್ವಲ

ಅರುಣಾರುಣ ದಿಕ್ತಟದಲ್ಲಿ ರಂಜಿಸುತಿದ್ದಾನೆ.

ಅದೇನು ನಿಸ್ಸಂಗದಾಣವೇ ?

ತೀರದಲ್ಲಿ ಬೃಹದ್ ಅಶ್ವತ್ಥ ವೃಕ್ಷ; ಅದರಿಂದಾಚೆ ಒಂದು ಸಣ್ಣ ಪುರಾತನ ಗುಡಿ. ಹಿಂಡು ಹಿಂಡಾಗಿ ನೆರೆದ ಸಾರಸಗಳು, ಹಾಲು ಕೊಕ್ಕರೆಗಳು, ಅಲ್ಲಲ್ಲಿ ಶೋಭಿಸುವ ನೈದಿಲೆಗಳು, ಜಲವಿಹಾರೀ ಪಕ್ಷಿಗಳು, ಮೈತುಂಬಿ ಶೋಭಿಸುವ ಅಗಾಧವಾದ ಜಲರಾಶಿ....ಸಕಲ ಜೀವಾಜೀವಗಳಿಂದ ಕೂಡಿದ ಮಹಾ ಪುಣ್ಯವೇದಿ....!

ನಿರ್ಮಲ ದೈನ್ಯ ನೋಟವನ್ನು ಅತ್ತ ಹಾಯಿಸಿದಳು. ಥಳಥಳಿಸುವ ಪುಷ್ಕರಣಿಯು ಬಾಬಾರೆಂದು ಕರೆಯುತ್ತಿದೆ, ಸಾಂತ್ವನಗೈದು ಉಡಿಯಲ್ಲಿಟ್ಟುಕೊಳ್ಳುವ ಮಾತೃಕೆಯಂತೆ. ಒಂದೆರಡು ಘಳಿಗೆ ಮಂತ್ರ ಮುಗ್ಧಳಂತೆ ನಿಶ್ಚಲ ಭಂಗಿಯಲ್ಲಿ ನಿಂತಳು. ಕೊನೆಯದಾಗಿ ಅದ್ಭುತ ಪ್ರಕೃತಿಗೊಂದು ಭಾವೋದ್ವೇಗ ಪೂರ್ಣ ನಮಸ್ಕಾರ....

ಆದರೆ !

ಉತ್ತರೀಯವನ್ನು ಹಿಡಿದೆಳೆಯುತ್ತಿರುವವರಾರು ?

ಒಮ್ಮೆಗೇ ದೇಹದಾದ್ಯಂತ ಗಡಗಡ ನಡುಗಿದಳು ನಿರ್ಮಲ. ಆ ಧೂರ್ತ ಹೊರೆಯನ್ನೊಗೆದು ಇತ್ತ ಬಂದಿದ್ದಾನೆಯೇ ? ಅಯ್ಯೊ, ದೇವರೇ !!

ಹಿಂದಿರುಗಿ ನೋಡುವುದಕ್ಕೂ ಸಹ ಸಾಧ್ಯವಾಗದು. ಶರೀರ ಅರಳೀ ಎಲೆಯಂತೆ ಗಡಗಡ ನಡುಗಿತು.

"ಮಿಸ್ !....ಮಿಸ್ ! ಇಲ್ಲಿಗ್ಯಾಕೆ ಬಂದಿರಿ ನೀವು ?"

ಎಂತಹ ಮೋಹಕ ದನಿ ?

ನಿರ್ಮಲ ತಟ್ಟನೆ ಹಿಂದಿರುಗಿ ನೋಡಿದಳು. ಧಾರುಣಿ ಮನ ಮೋಹನೀಯ ನಗೆಯೊಡನೆ ಇತ್ತಲೇ ನಿಟ್ಟಿಸುತಿದ್ದಾಳೆ. ಎಂತಹ ಆಶ್ಚರ್ಯ....? ಪ್ರಯತ್ನಿಸಿದರೂ ತುಟಿಗಳು ಬಿರಿಯಲಿಲ್ಲ. ನಿರ್ಮಲ ಮೂಕವಿಸ್ಮಿತಳಾಗಿನಿಂತು ಬಿಟ್ಟಳು ! ಹೃದಯ ಆನಂದಾವೇಗದಿಂದ ಮಿಡಿಯಿತು !

"ನೀವು ಏನು ಮಾಡ್ತಿದೀರಾ ಮಿಸ್ ?" ಎಳೆದನಿ ಹೃದಯಂಗಮವಾಗಿ ಮೊಳಗಿತು.

"ನಾನೇ ?....ದೂರಪಯಣ ಕೈಕೊಂಡಿರುವೆ."

"ಓ....ಇಷ್ಟರಲ್ಲೇ ?" ಹಾಸ್ಯಾಸ್ಪದವಾಗಿ ನುಡಿದ ಧಾರುಣಿ ಪುನಃ ಅತ್ಯಂತ ಗಂಭೀರ ಧ್ವನಿಯಲ್ಲಿ ನುಡಿದಳು "ನಿಮ್ಮ ಕೆಲಸ ನೀವು ಮುಗಿಸೇ ಇಲ್ಲ! ಈಗಲೇ ಅನಂತಾನಂತ ಪಯಣ ಸಾಧ್ಯವೇ? ಒಂದು ವೇಳೆ ನೀವು ಪ್ರಯತ್ನಿಸಿದರೂ ಭಗವಂತ ನಿಮ್ಮನ್ನು ಸ್ವರ್ಗದ್ವಾರದಿಂದ ಹೊರ ದಬ್ಬಿಯಾನು!"

ಎಂತಹ ಅದ್ಭುತ ವಿಚಾರಧಾರೆ? ಆ ಮುಹೂರ್ತದಲ್ಲಿ ಸೋಲೊಪ್ಪಿ ಅವಳನ್ನು ಅತ್ಯಂತ ಆತ್ಮೀಯತೆಯಿಂದ ಗಾಢಾಲಿಂಗನೆ ಮಾಡಿಕೊಂಡಳು ನಿರ್ಮಲ.

"ನಿಮ್ಮನ್ನು ಡಾ|| ಹಿಲ್ಡಾ ಕರೆಯುತಿದ್ದಾರೆ!"

"ನಿಜವಾಗಿ....?"

"ಹೌದು, ಅಲ್ಲಿ ನೋಡಿ!"

ನಿರ್ಮಲ ತಟ್ಟನೆ ಹಿಂದಿರುಗಿ ನೋಡಿದಳು. ಅಲ್ಲಿ....ಅದೇ ಅಂಗಳದಲ್ಲಿ ಮುರಿದ ವಾಹನವೊಂದರ ದುರಸ್ತಿಯಲ್ಲಿ ತೊಡಗಿದ್ದಾಳೆ ಡಾ|| ಹಿಲ್ಡಾ! ಒಬ್ಬಳೇ ಸಹಾಯಕರಿಲ್ಲ; ಮೈ ಕೈಯೆಲ್ಲಾ ಮಸಿ!

ನಿರ್ಮಲ ತಟ್ಟನೆ ಕಣ್ದೆರೆದಳು. ಕನಸಿನ ಪ್ರಪಂಚದಿಂದ ಮುಕ್ತ ಮನಸ್ಸು ಸುತ್ತಮುತ್ತ ಹರಿದಾಡಿತು.

೩೬

....ನಿರ್ಮಲ ಹೊದ್ದಿಕೆಯನ್ನು ಅತ್ತ ತಳ್ಳಿ ತಟ್ಟನೆ ಎದ್ದು ಕುಳಿತಳು....

ಮುಖಭಾವ ಸುಖದುಃಖಗಳ ನೆಲೆಯಾಗಿತ್ತು....ಕಣ್ಣುಗಳಲ್ಲಿ ಅಚ್ಚರಿಯ ನೆರೆಯುಕ್ಕುತಿತ್ತು....

ನೋಟ ಗಡಿಯಾರದ ಕಡೆ ಹರಿಯಿತು. ಹೊತ್ತು ಆಗಲೇ ಎಂಟರ ಸಂಖ್ಯೆಯ ಅಂಚನ್ನು ದಾಟಿಬಿಟ್ಟಿದೆ. ಎಂದೂ ಆರೀತಿ ಮಲಗಿರದ ನಿರ್ಮಲಳಿಗೆ ಎಲ್ಲಿಲ್ಲದ ಆಶ್ಚರ್ಯ. ಕಿಟಕಿ ಬಾಗಿಲು ಮುಚ್ಚಿಬಿಟ್ಟಿದ್ದುದರಿಂದ ಒಳಗೆಲ್ಲ ಮಸುಗತ್ತಲೆ ಆವರಿಸಿತ್ತು. ರಾತ್ರಿ ನಿದ್ದೆ ಬಾರದೆ ಬೆಳಗಿನ ಝಾವದಲ್ಲಿ ನಿದ್ದೆ

ಬಂದಿರುವುದರಿಂದ ಎಚ್ಚರವಾಗಿಲ್ಲ....ಎಂದುಕೊಳ್ಳುತ್ತ ಹಾಸಿಗೆ ಮಡಿಸುತ್ತಿರುವಾಗ ಅಲ್ಲಿಗೆ ಬಂದ ತಾಯಿ "ನಿನಗೆ ಚೆನ್ನಾಗಿ ನಿದ್ದೆ ಬಂದಿತ್ತು. ಅದಕ್ಕೇ ಕಿಟಕಿ ಮುಚ್ಚಿದೆ" ಎಂದಳು. ತುಟಿಗಳಲ್ಲಿ ಎಳೆನಗು ಮೂಡಿ ಮಾಯವಾಯಿತು.

"ಸರಿಹೋಯ್ತು ! ನಾನಿನ್ನು ತಯಾರಾಗುವುದೆಂದಿಗೆ ?"

ಪ್ರಾಸಂಗಿಕವಾಗಿ ಉತ್ತರಿಸಿ ಪ್ರಾತರ್ವಿಧಿಯಲ್ಲಿ ತೊಡಗಿದಳು ನಿರ್ಮಲ. ಮನಸ್ಸು ಕನಸಿನ ಚಿತ್ರದಲ್ಲಿ ಪೂರ್ಣ ಮುಳುಗಿಹೋಗಿತ್ತು. ಧಾರುಣಿ ಎಂತಹ ಪಾಠ ಕಲಿಸಿದಳು ? ಆ ಪುಟ್ಟ ಹುಡುಗಿಯ ಮುಂದೆ ಎಂತಹ ಸೋಲು ? ಡಾ॥ ಹಿಲ್ಡಾ ಮುರಿದ ವಾಹನವನ್ನು ದುರಸ್ತಿ ಮಾಡುತಿದ್ದುದರಲ್ಲೂ ಎಂತಹ ಅರ್ಥವಿದೆ ...? ಎಂಬ ಪ್ರಶ್ನೆ ಮನದಲ್ಲಿ ಮೂಡಿದಾಗ ದೇಹದಾದ್ಯಂತ ಇಮ್ಮಡಿ ವೇಗದಲ್ಲಿ ನೆತ್ತರಿನ ಝುರಿ ಹರಿದಾಡಿತು. ಹೃದಯ ಮೃದಂಗ ದ್ರುತ ಗತಿಯಲ್ಲಿ ಮಿಡಿಯುತಿತ್ತು.

ತಾನೀಗ ಯಾವ ಕ್ರಮ ಕೈಗೊಳ್ಳಬೇಕು ? ಯಾವ ರೀತಿಯಲ್ಲಿ ಕದಡಿ ಬಗ್ಗಡವಾದ ಮನಸ್ಸಿಗೆ ಶಾಂತಿಯನ್ನು ಪಡೆಯಬೇಕು ? ಎಂಬುದು ಹಿರಿಯ ಪ್ರಶ್ನೆ. ಆತ್ಮಹತ್ಯವನ್ನು ಕುರಿತು ತೀವ್ರವಾಗಿ ಚಿಂತಿಸುತಿದ್ದ ಮನೋಭಾವಕ್ಕೆ ಧಾರುಣಿ ಎಂತಹ ಉತ್ತರ ನೀಡಿದ್ದಾಳೆ! ಆದರೂ....ಸಹ....ಈ ಜೀವನವನ್ನು....ನಾನು... ನಿರ್ಣಯಿಸಲಾರೆ....!

ಅದೇ ವೇಳೆಗೆ ಒಳಗೆ ಹೆಜ್ಜೆ ಇಟ್ಟ ವಿಮಲ ಅತ್ಯಾಶ್ಚರ್ಯದಿಂದ ಕೇಳಿದಳು,

"ಇದೇನು ? ಇನ್ನೂ ಹೊರಡುವುದರಲ್ಲಿದ್ದಿ ?"

"ಇಂದೇಕೋ ಏಳುವುದೇ ಹೊತ್ತಾಯ್ತು ! ಮೈಯಲ್ಲಿ ತುಂಬ ಆಲಸ್ಯ !"

"ಇರಲಿ, ಕೆಲವೊಮ್ಮೆಯಾದರೂ ವಿಶ್ರಾಂತಿ ಬೇಕಲ್ಲ ?"

ಅನಂತರ,

ಇಬ್ಬರೂ ಅವಸರವಾಗಿ ಮೆಟ್ಟಿಲಿಳಿದರು. ಹತ್ತು ಮಾರು ಕಳೆಯುವವರೆಗೂ ಗಂಭೀರಗತಿಯಲ್ಲಿ ಹೆಜ್ಜೆ ಹಾಕುತಿದ್ದ ನಿರ್ಮಲ ನಾನಾ ವಿಚಾರಧಾರೆಯನ್ನು ತನ್ನಲ್ಲೇ ಜೀರ್ಣಿಸಿಕೊಂಡು ಕನಸಿನ ಚಿತ್ರವನ್ನು ವಿಶದವಾಗಿ ತಿಳಿಸಿ ಸಂಕಟತಪ್ತ ವಾಣಿಯಲ್ಲಿ ನುಡಿದಳು "ನಾನೊಮ್ಮೆ ಆತ್ಮಹತ್ಯೆ ಮಾಡಿಕೊಂಡು ಈ ದುಃಖಭರಿತ ಆತ್ಮಕ್ಕೆ ಶಾಂತಿಯನ್ನು ನೀಡಬೇಕೆಂಬ ನಿರ್ಧಾರಕ್ಕೆ

ಬಂದಿದ್ದೆ. ಆದರೆ ಆ ಪುಟ್ಟ ಬಾಲಿಕೆ ಅದಕ್ಕೆ ಎಂತಹ ಉತ್ತರ ನೀಡಿದ್ದಾಳೆ? ಪ್ರತಿ ಹಂತ ಹಂತದಲ್ಲೂ ಈ ಜೀವ ಸೋಲುತ್ತಲೇ ಇದೆ. ಇದರ ಅರ್ಥ ವೇನೋ ನನಗೆ ತಿಳಿಯುತ್ತಲೇ ಇಲ್ಲ."

"ಎಲ್ಲಿಯಾದರುಂಟೇ? ನಿನ್ನಂತಹ ತೀಕ್ಷ್ಣಮತಿ ಈ ಕ್ರಮ ಕೈಗೊಳ್ಳುವುದು? ಛೀ! ಛೀ! ಎಂತಹ ಪ್ರಮಾದವಾಗುತಿತ್ತು? ನಿನ್ನ ಶೋಕ ಜ್ವಾಲೆ ಧಾರುಣಿಯ ಅಂತರಾತ್ಮವನ್ನು ಸುಟ್ಟಿರುವುದರಿಂದಲೇ ಅವಳು ನಿನ್ನ ಸಹಾಯಕ್ಕೆ ಧಾವಿಸಿ ಬಂದಿದ್ದಾಳೆ! ನಿನ್ನ ಮನಸ್ಸು ತುಂಬ ನೊಂದಿರುವುದ ರಿಂದ ವಿಚಾರ ಶಕ್ತಿಯನ್ನು ಸಂಪೂರ್ಣವಾಗಿ ಕಳೆದುಕೊಂಡಿದೆ. ಸದ್ಯಕ್ಕೆ ಯಾವ ವಿಚಾರವನ್ನೂ ತಲೆಗೆ ಹಾಕಿಕೊಳ್ಳಬೇಡ. ನನ್ನನ್ನು ಕೇಳದೆ ಯಾವ ನಿರ್ಧಾರವನ್ನೂ ಮಾಡಬೇಡ." ಎಂದು ಅಂಗಲಾಚಿದಳು. ಅಕ್ಷರ ಅಕ್ಷರವೂ ಎದೆಯಾಳದ ಸಂಕಟ ಸಂಪುಟದಿಂದ ಹರಿದುಬಂದುವು. ಭುಜದ ಮೇಲೆ ಕೈಹಾಕಿ ಬಿಗಿಯಾಗಿ ಅದುಮಿ ಹಿಡಿದುಕೊಂಡಳು. ಮನಃಪ್ರಾಣಗಳು ಅಶಾಂತಿ ಯಿಂದ ತುಂಬಿಹೋಗಿದ್ದುವು.

"ಇಲ್ಲ....ಇಲ್ಲ, ಅಷ್ಟೊಂದು ಭಯಪಟ್ಟುಕೊಳ್ಳಬೇಡ. ಆಗ ಮನಸ್ಸು ತುಂಬ ಕೆಟ್ಟಿತ್ತು; ಇನ್ನು ಬೇರೆ ಹಾದಿಗೆ ಹಚ್ಚಬೇಕಾಗಿದೆ....ಹೇಗೆ, ಎಂತು ಎಂಬುದನ್ನು ಯೋಚಿಸಿ ನಿರ್ಧರಿಸಬೇಕು."

ಅನಂತರ ಇಬ್ಬರೂ ಪರಸ್ಪರ ವಿಚಾರವಿನಿಮಯವನ್ನು ಅದೆಷ್ಟು ಹೊತ್ತು ನಡೆಸಿದರೋ....ಯಾವ ಯಾವ ವಿಚಾರಸರಣಿ ಧಾರೆಧಾರೆಯಾಗಿ ಹರಿದುಹೋಯಿತೋ ಊಹಿಸುವುದು ಕಷ್ಟ. ಕೊನೆಯದಾಗಿ ವಿಮಲ ಆಧು ನಿಕ ಸಭ್ಯತೆಯನ್ನು ಕುರಿತು ವಿಮರ್ಶಿಸುತ್ತ "ಈ ಆಧುನಿಕ ಪ್ರಪಂಚದಲ್ಲಿ ಸಭ್ಯತೆಯ ಸೋಗು ಹಾಕಿದವರ ದೃಷ್ಟಿಯಲ್ಲಿ ನಾವು ವಿಚಿತ್ರ ಪಶುಗಳಂತೆ ತೋರಿದರೆ ಅದೇನೂ ಆಶ್ಚರ್ಯವಲ್ಲ." ಎಂದಾಗ ಕಣ್ಣುಗಳಲ್ಲಿ ಉಜ್ವಲ ಕಾಂತಿಯು ಮಿನುಗುತಿತ್ತು. ಒಂದು ಘಳಿಗೆ ಸುಮ್ಮನಿದ್ದು ಪುನಃ ಮುಂದು ವರಿದಳು. "ನಿನ್ನಲ್ಲಿರುವ ಭಕ್ತಿ ಅನುರಾಗಗಳ ಮಾರ್ದವತೆಯಲ್ಲಿ ಹೊರ ಜಗತ್ತಿನ ಯಾವುದೇ ಬಗೆಯ ಕಲ್ಮಶವನ್ನು ನೀನು ಕಂಡುಕೊಳ್ಳದಿದ್ದರೆ ಅದೇನೂ ವಿಶೇಷವಲ್ಲ. ಪ್ರೀತಿ ವಾತ್ಸಲ್ಯಗಳ ಆರ್ದ್ರತೆಯೆಂಬುದು ಸಾಮಾನ್ಯ ವಸ್ತುವಲ್ಲ. ಯುಕ್ತರೀತಿಯಲ್ಲಿ ಅದನ್ನು....ಹೋಗಲಿ ಬಿಡು, ಇನ್ನು ಆದ

ನ್ನೆಲ್ಲ ಪ್ರಸ್ತಾಪಿಸುವುದಕ್ಕಿಂತ ಭವಿತವ್ಯವನ್ನು ಕುರಿತು ಚರ್ಚಿಸುವುದು ಲೇಸು. ಎಲ್ಲಿ ಇಂತಹ ಅತ್ಯಾಚಾರ ನಡೆಯುತ್ತಿರುತ್ತದೋ–ಎಲ್ಲಿಯ ಜನ ಕಣ್ಣೀರಿನಲ್ಲಿ ಕೈತೊಳೆಯುತ್ತಾರೋ ಅಲ್ಲಿದೆ ಈ ಬಾಳಿನ 'ಸಾರ್ಥಕತೆ' ಎಂಬುದನ್ನು ನೀನು ಕಂಡುಕೊಂಡರೆ ಒಮ್ಮೆಗೇ ಪರಿಹಾರವನ್ನು ಕಂಡುಕೊಳ್ಳುತ್ತಿ !"

ನಿರ್ಮಲ ಆತ್ಮಪೂರ್ವಕವಾಗಿ ಆ ವಿಚಾರಧಾರೆಯನ್ನು ಸ್ವಾಗತಿಸಿದಳು. ಆದರೂ ಶೋಕವ್ಯಾಕುಲದಗ್ಧಚಿತ್ತ ಅರಸುತಿದ್ದುದು ನಾರೀತತ್ತ್ವಕ್ಕೆ ಅನುಗುಣವಾದ ಪ್ರಾಧಾನ್ಯ.

"ನಿನಗೇನನ್ನಿಸುತ್ತೆ ? ಏಕೆ ನೀನು ಮಾತಾಡುತ್ತಲೇ ಇಲ್ಲ ?"

ಅದೇ ವೇಳೆಗೆ ಇಬ್ಬರೂ ಶಾಲೆಯ ಆವರಣಕ್ಕೆ ಕಾಲಿಟ್ಟುದರಿಂದ ಅಂತರಂಗಿಕ ಭಾವಧಾರೆ ಅಷ್ಟಕ್ಕೇ ತುಂಡುಗಡಿಯಿತು. ವಿಶಾಲನಯನಗಳಲ್ಲಿ ಹರಿದ ಅತುಲನೀಯ ದೀಪ್ತಿ ಉಜ್ವಲವಾಗಿದ್ದರೂ ಸಿಂಧೂರ ಕಾಂತಿಯನ್ನು ತಳೆದಿದ್ದುವು. ಮೆಟ್ಟಲು ಹತ್ತುತಿದ್ದಾಗಲೇ ಡಾ|| ಹಿಲ್ಡಾಳ ದರ್ಶನವಾಯಿತು. ಒಮ್ಮೆಲೇ ಏಕಕಂಠದಂತೆ ಎರಡೂ ದನಿಗಳು ಮೊಳಗಿದುವು.

"ಗುಡ್‌ಮಾರ್ನಿಂಗ್ ಪ್ರಿನ್ಸಿಪಲ್ !"

"ಗುಡ್‌ಮಾರ್ನಿಂಗ್ ಗರ್ಲ್ಸ್ !"

ಡಾ|| ಹಿಲ್ಡಾ ನಿರ್ಮಲೆಯನ್ನು ಕುರಿತು "ಆಫೀಸಿಗೆ ಬಾ." ಎಂದಳು, ಅನುರಾಗಪೂರ್ಣ ದನಿಯಲ್ಲಿ.

ನಿರ್ಮಲ ಹಿಂಬಾಲಿಸಿದಳು. ಆಫೀಸಿನಲ್ಲಿ ಯಾರೂ ಇರಲಿಲ್ಲ ; ಇಬ್ಬರೂ ಮೇಜಿನ ಬಳಿ ಕುಳಿತರು. ಡಾ|| ಹಿಲ್ಡಾ ಮಾತು ತೆಗೆದಳು,

"ನಿನ್ನ ವಿಚಾರವೆಲ್ಲ ಗೊತ್ತಾಯ್ತು. ನೀನು ಅದಕ್ಕಾಗಿ ಅಷ್ಟೊಂದು ತಲೆ ಕೆಡಿಸಿಕೊಳ್ಳಬೇಕಾಗಿಲ್ಲ....ಯಾವ ಧೂರ್ತ ಸಾಹಸಕ್ಕೂ ಕೈಹಾಕಬೇಡ. ನಿನ್ನ ಮನಸ್ಸಿಗೆ ಶಾಂತಿ ಇಲ್ಲವಾದರೆ ನನ್ನ ಬಳಿಯೇ ಇದ್ದುಬಿಡು. ಕೆಲವೇ ದಿನಗಳಲ್ಲಿ ಧೈರ್ಯ ಮೂಡಿಸುವೆ. ಯೋಚಿಸಿನೋಡು ; ಖಂಡಿತ ಆತ್ಮವಿಶ್ವಾಸ ಕಳೆದುಕೊಳ್ಳಬಾರದು."

ನಿರ್ಮಲ ಚಿಂತಾಮಗ್ನಳಾಗಿ ಕುಳಿತಿದ್ದು ಅನಂತರ ಗದ್ಗದ ಕಂಠದಿಂದ ನುಡಿದಳು,

"ನನ್ನ ಹೃದಯಕುಂಡ ದುಃಖದಗ್ಧವಾಗಿದೆ. ಎಂದು ಹೇಳಿಕೊಳ್ಳು

ವುದಕ್ಕೆ ಖಂಡಿತ ಲಜ್ಜೆಯೆನಿಸುತ್ತದೆ. ಆದರೂ 'ಮಾನಹಾನಿ' ಎಂಬುದು ಸ್ತ್ರೀ ಜನ್ಮಕ್ಕೆ ಸಾಮಾನ್ಯವಲ್ಲ. ಈ ಪುಟ್ಟ ಹೃದಯ ಆ ದುರ್ದಾಂತ ವ್ಯಘಾತವನ್ನು ಸಹಿಸಿಕೊಳ್ಳಲಾರದು. ಬಹಳ ಕಷ್ಟದಿಂದ ನಾನು ನನ್ನನ್ನು ನಿಗ್ರಹಿಸಿಕೊಳ್ಳುತ್ತಿರುವೆ. ಆದರೂ ನನ್ನ ಹತೋಟಿಯನ್ನು ಮೀರುವಷ್ಟು ಬೆಳೆಯುತ್ತಿದೆ ಪರಿತಾಪ."

"ಮಗೂ!" ತಲೆಯಮೇಲೆ ಕೈಯಿಟ್ಟು ಹೇಳಿದಳು ಡಾ|| ಹಿಲ್ಡಾ "ಯಾವುದನ್ನೂ ಅಷ್ಟೊಂದು ಗಾಢವಾಗಿ ತೆಗೆದುಕೊಳ್ಳಬಾರದು. ಈ ಜಗತ್ತಿಗೆ ನಮ್ಮಿಂದ ಎಷ್ಟು ಸೇವೆ ಸಲ್ಲಿಸಬಹುದೋ ಅಷ್ಟನ್ನು ಸಲ್ಲಿಸುವುದರಲ್ಲೇ ಈ ಜನ್ಮ ಪುನೀತವಾಗಲಿದೆ."

ಆ ಓಜಃಪೂರ್ಣ ವಿಚಾರಧಾರೆ ತನ್ನನ್ನು ತಾನೇ ಉತ್ಸರ್ಗಗೊಳಿಸುವ ಹುಮ್ಮಸ್ಸನ್ನು ಎದೆಯಾಳದಲ್ಲಿ ಮೂಡಿಸಿತು. ಅದೇ ಚಿಂತನೆಯಲ್ಲಿ ತೀವ್ರ ಮುಳುಗಿ ಮೂರ್ತಿಮತ್ತಾಗಿ ಕುಳಿತಳು ನಿರ್ಮಲ. ಮುಖಮಂಡಲ ಮ್ಲಾನವಾಗಿದ್ದರೂ ತಲೆಯಲ್ಲಿ ದ್ವೈದೀಭಾವಗಳ ತರ್ಕವಿತರ್ಕ ನಡೆದಿತ್ತು,

"ಎಲ್ಲಿ ಸುಖದುಃಖಗಳ ಸಹಸ್ರ ಸಹಸ್ರ ಧಾರೆಗಳಲ್ಲಿ ತನ್ನನ್ನು ತಾನೇ ದಲಿತ ದ್ರಾಕ್ಷಿಯಂತೆ ಹಿಂಡಿ ಪರರನ್ನು ಸಂತೃಪ್ತಿಗೊಳಿಸುವ ಸದ್ಭಾವನೆ ಪ್ರಧಾನವಾಗಿದೆಯೋ ಅಲ್ಲಿ ನಾರೀಶಕ್ತಿತತ್ತ್ವದ ಮೂರ್ತರೂಪ ಆವಿರ್ಭವಿಸುತ್ತದೆ. ಸ್ತ್ರೀ ಈ ಜಗತ್ತಿಗೆ ಬರುವುದು ಆನಂದಭೋಗಕ್ಕಾಗಿ ಅಲ್ಲ. ಆನಂದಾಮೃತವನ್ನು ಉಣಬಡಿಸುವುದಕ್ಕಾಗಿ ಇದೇ ನಾರೀತತ್ತ್ವದ ಆಯೋಜನೆ. ಈ ವಿಚಾರವನ್ನು ನೀನು ಕೂಲಂಕಶವಾಗಿ ಯೋಚಿಸಿ ನೋಡಿದರೆ ಖಂಡಿತ ದುಃಖಿಸಲಾರೆ. ಬೇಗನೆ ಮೋಹನಿದ್ರೆಯಿಂದ ಎಚ್ಚತ್ತುಕೊಳ್ಳುವೆ."

ನಿರ್ಮಲ ಒಂದೇ ಬಾರಿಗೆ ಚೇತರಿಸಿಕೊಂಡಂತೆ ನುಡಿದಳು,

"ನನ್ನನ್ನು ಆಶೀರ್ವದಿಸಿ ಡಾಕ್ಟರ್!"

"ಪರಮಾತ್ಮನು ನಿನಗೆ ಮಂಗಳವನ್ನುಂಟು ಮಾಡಲಿ ಶುಭೆ!"

"ಥ್ಯಾಂಕ್ಯೂ ಡಾಕ್ಟರ್!"

ನಿರ್ಮಲ ನಿರ್ಗಮಿಸುವ ಮುನ್ನ–"ನಾನು ನಾಳೆ ಬೆಳಿಗ್ಗೆ ಪುನಃ ನಿಮ್ಮೊಂದಿಗೆ ಭೇಟಿ ತೆಗೆದುಕೊಳ್ಳುವೆ. ದಯವಿಟ್ಟು ಅಪ್ಪಣೆ ಕೊಡಿಸಬೇಕು!"

"ಆಗಬಹುದು ಮಗಳೇ!" ಪ್ರೀತಿಯುಕ್ತ ವಾಣಿಯಲ್ಲಿ ಆಶ್ವಾಸನೆ ನೀಡಿ

ದಳು ಡಾ|| ಹಿಲ್ಡಾ.

ಮರುದಿನ,

ಡಾ|| ಹಿಲ್ಡಾಳ ಕೊಠಡಿಗೆ ಪದಾರ್ಪಣೆ ಮಾಡಿದಾಗ ನಿರ್ಮಲ ತಾಯಿ ತಂಗಿಯರೊಡನೆ ಕೂಡಿಯೇ ಬಂದಿದ್ದಳು. ಮುಖಬಿಂಬ ಅಪೂರ್ವ ರಾಗಾನು ರಾಗಗಳಿಂದ, ಶಾಂತಶೀಲತೆಯಿಂದ ಆನಂದ ಪ್ರಮತ್ತವಾಗಿತ್ತು. ಉಜ್ವಲ ನಯನಗಳ ಕಾಂತಿ ಅಸ್ವಾಭಾವಿಕ ಗುರುತ್ವದಿಂದ ಕೂಡಿತ್ತು.

"ಬಾ ಮಗೂ!" ಸ್ವಾಗತಿಸಿದಳು ಡಾ|| ಹಿಲ್ಡಾ.

ವಿನಯಪೂರ್ವಕವಾಗಿ ವಂದನೆಗಳನ್ನು ಅರ್ಪಿಸಿದಳು ನಿರ್ಮಲ. ಹಿಂದೆಯೇ ಒಳಹೆಜ್ಜೆಯಿಟ್ಟ ವಿಮಲ ಮತ್ತು ಜಾನಕಿಯರೂ ವಂದನೆಗಳನ್ನ ರ್ಪಿಸಿದರು. ಅವರಿಗೆ ಸರಳ ಸ್ಮಿತದೊಡನೆ ಪ್ರತಿವಂದಿಸಿ ಕುಳಿತುಕೊಳ್ಳಲು ಹೇಳಿದಳು ಡಾ|| ಹಿಲ್ಡಾ.

"ಹೇಗಿದೆ ನಿನ್ನ ಚಿತ್ತಸ್ವಾಸ್ಥ್ಯ?" ಅತ್ಯಂತ ಅನುನಯದಿಂದ ಕೇಳಿದಳು ಡಾ|| ಹಿಲ್ಡಾ.

"ನಾನೊಂದು ನಿರ್ಧಾರಕ್ಕೆ ಬಂದಿರುವೆ ಡಾಕ್ಟರ್. ತದನಂತರ ಚಿತ್ತ ಸ್ವಾಸ್ಥ್ಯ ಪಡೆದುಕೊಳ್ಳಲು ಸುಲಭ ಸಾಧ್ಯವಾಯಿತು."

"ಏನದು? ನಾನು ತಿಳಿಯಬಹುದೇ?"

"ನಾನು 'ನನ್' ಆಗಿ ಈ ಜನ್ಮವನ್ನು ಪುನೀತಗೊಳಿಸಿಕೊಳ್ಳಬೇಕೆಂದಿ ರುವೆ. ದಯವಿಟ್ಟು ಆಶೀರ್ವದಿಸಿ ಡಾಕ್ಟರ್!"

"ನಿಜವಾಗಿ?" ಅತ್ಯಾಶ್ಚರ್ಯದಿಂದ ಕಣ್ಣರಳಿಸಿದಳು ಡಾ|| ಹಿಲ್ಡಾ.

"ಹೌದು!"

"ನಿಮ್ಮವರ ಒಪ್ಪಿಗೆ ಇದೆಯೆ?"

"ಅದಕ್ಕೆಂದೇ ನನ್ನ ತಾಯಿ-ತಂಗಿಯರನ್ನು ಕರೆ ತಂದಿರುವೆ."

ಡಾ|| ಹಿಲ್ಡಾಳ ನೋಟ ತಟ್ಟನೆ ಅವರಿಬ್ಬರೆಡೆಗೂ ಹರಿಯಿತು. ಮುಖ ಭಾವ ಆಶ್ಚರ್ಯ-ಸಮಾಧಾನಗಳ ದಿವ್ಯ ಆಗರವಾಗಿತ್ತು. ಒಂದೆರಡು ಘಳಿಗೆ ನಗುಮುಖದಿಂದ ನಿಂತಿದ್ದು ಅನಂತರ ಕೇಳಿದಳು,

"ನಿಮಗೆ ಒಪ್ಪಿಗೆ ಇದೆಯೇ?"

"ಅವಳ ಇಚ್ಛೆಯೇ ನಮ್ಮ ಇಚ್ಛೆ!" ಎಂದಳು ಜನನಿ. ದನಿಯಲ್ಲಿ

ಲಘು ಕಂಪನ ಸಂಭವಿಸಿದರೂ ಅಂಗಯಷ್ಟಿ ನಿಶ್ಚಲವಾಗಿತ್ತು. ದುಃಖ ದುಗುಡಗಳ ಮಾಲಿನ್ಯ ಮುಖದ ಮೇಲೊರೆದಿತ್ತು. ಪ್ರಯತ್ನಪೂರ್ವಕವಾಗಿ ಹರಿಯಬಿಟ್ಟ ಆರ್ದ್ರಹಾಸದ ರೇಖೆಯೊಂದು ಅವಳ ರೂಕ್ಷ ತುಟಿಗಳ ಮೇಲೆ ಕ್ಷಣಕಾಲ ಮಿನುಗಿ ಮಾಯವಾಯಿತು. ಹೃದಯದಾಳದಲ್ಲಿ ಅವಿರಳವಾಗಿ ಸಂಜನಿಸಿದ ಅಶ್ರುಧಾರೆ ಕಣ್ಣುಗಳಂಚಿನಲ್ಲಿ ಸಣ್ಣಗೆ ಬೆಳ್ಳಿಯ ರೇಖೆಯಂತೆ ಮೈದೋರಿತು.

ಡಾ॥ ಹಿಲ್ಡಾ ವಿಮಲೆಯ ಕಡೆ ತಿರುಗಿ ಕೇಳಿದಳು "ನೀನು ಏನು ಹೇಳುತ್ತಿ ?"

"ಅವಳ ಇಚ್ಛೆಗೆ ನಮ್ಮ ಅಭ್ಯಂತರವಿಲ್ಲ."

ದನಿ ಎದೆಯಾಳದಿಂದ ಹರಿದು ಬಂತು. ನಿಂತ ನಿಲುವಿನಲ್ಲಿ ದೃಢ ನಿಶ್ಚಯತೆ ಕಾಣಿಸುತಿತ್ತು.

ಡಾ॥ ಹಿಲ್ಡಾ ಅತ್ಯಂತ ಆತ್ಮೀಯತೆಯಿಂದ ನಿರ್ಮಲಳನ್ನು ಆಲಂಗಿಸಿ ಹೃದಯಕ್ಕೆ ಹೃದಯವನ್ನೊತ್ತಿ ಹಣೆಯಮೇಲೆ ಸಿಹಿ ಮುತ್ತನ್ನೊತ್ತಿ ಹೇಳಿದಳು,

"ಮಗೂ, ನಾರೀಶ್ರೀಹೀನ ತಪಸ್ಯೆ ಪ್ರಪಂಚದ ಅಶುಭ ಕಲ್ಪನೆ. ನಾರೀ ಸಂಸ್ರವವಿಲ್ಲದ ಎಲ್ಲಾ ಆಯೋಜನೆಯೂ ಫೇನ ಬುದ್ಬುದದಂತೆ ವಿಲುಪ್ತವಾಗಿ ಹೋಗುತ್ತದೆ. ನಾರೀ ಸಹಯೋಗವಿಲ್ಲದ ಧರ್ಮಕರ್ಮಗಳ ಆಡಂಬರ ಕೇವಲ ಅಶಾಂತಿಯನ್ನು ಸೃಜಿಸುವುವು."

ವಿಮಲ ಲೀಲಾಸ್ಮಿತದೊಡನೆ ಪ್ರಶ್ನಿಸಿದಳು "ಹಾಗಾದರೆ ಮಹಿಳೆಯರು ಶಾಂತಿದೂತರು ಎಂದಂತಾಯಿತು. ಪ್ರಪಂಚದಲ್ಲಿ ಮಹಿಳೆಯರು ಸರ್ವಮಾನ್ಯತೆಗಾಗಿ ಮುನ್ನುಗ್ಗುತಿದ್ದಾರೆ; ಇನ್ನು ಗುರಿ ಮುಟ್ಟಲು ಹೆಚ್ಚು ಕಾಲ ಕಾಯಬೇಕಾಗಿಲ್ಲ. ಆದರೂ ಜಗತ್ತು ಅಶಾಂತಿಯಿಂದ ತುಂಬಿ ಹೋಗಿದೆ ?"

ಡಾ॥ ಹಿಲ್ಡಾ ಹಸನ್ಮುಖಿಯಾಗಿ ಉತ್ತರಿಸಿದಳು "ನೀನಿನ್ನೂ ಹಸುಳೆ, ಆಳವಾಗಿ ಯೋಚಿಸಿನೋಡು. ಈ ಜೀವನಬದ್ಧ ಪಿಂಡನಾರಿಗೆ ಅಷ್ಟು ಮಹತ್ವವನ್ನು ಕೊಡುವುದು ಪ್ರಯೋಜನವಿಲ್ಲ. ನಾನು ಹೇಳುತ್ತಿರುವುದು ನಾರೀತತ್ತ್ವದ ವಿಚಾರ. ಪಿಂಡನಾರಿಯರ ದಳ ಎಲ್ಲಿ ಸೇರಿಕೊಂಡರೂ ಸಾಧನೆ ಅಲ್ಪ; ಅಶಾಂತಿ ಹೆಚ್ಚು."

ವಿಮಲ ತಲೆದೂಗಿ ಒಪ್ಪಿಗೆ ಸೂಚಿಸಿದಳು.

ಡಾ|| ಹಿಲ್ಡಾ ಮುಂದುವರಿದಳು "ಈ ನಾರೀತತ್ತ್ವದ ಮೂಲಕ ಪಯಣಿಸಿದರೆ ಮಾತ್ರ 'ಅನಂತಾನಂತ' ವನ್ನು ಸೇರುವುದು ಸಾಧ್ಯ. ಮತ್ತೆಲ್ಲಾ ಆಯೋಜನೆಗಳು ಕೇವಲ ಆಡಂಬರ."

ಜಾನಕಿ ವಿಮಲೆಯರು ನಾರೀತತ್ತ್ವದ ತಪಸ್ವಿನಿಗೆ ವಂದನೆಯನ್ನರ್ಪಿಸಿ ಹೊರಬಿದ್ದರು.

**ಸಂಪೂರ್ಣಂ**

# ಮಲ್ಲಿಕಾ ಕೃತಿಗಳು

| | | ರೂ. ಪೈ. |
|---|---|---|
| ಜೀವನಗಂಗಾ | (ಕಾದಂಬರಿ) | 10-00 |
| ಡಾ॥ ಅಘೋರ | ,, | 12-00 |
| ಡಾ॥ ಕಮಲೇಶ್ | ,, | 12-00 |
| ವಂದೇಮಾತರಂ | ,, | 15-00 |
| ಅನಂತಾನಂತದೆಡೆಗೆ | ,, | 8-00 |
| ರತ್ನಗರ್ಭಾವಸುಂಧರಾ | (ಕಥಾ ಸಂಕಲನ) | 6-00 |
| ಬಹುರತ್ನಾವಸುಂಧರಾ | ,, | 6-00 |
| ಲಿಯೋನಾ | ,, | 6-00 |
| ಶ್ರೀಮುಖಿ | ,, | 6-00 |
| ಪೂಜಾವಸಾನಸಮಯೆ....! | (ಕವಿತಾ ಸಂಕಲನ) | 4-00 |
| ಧ್ಯಾನಾವಸಾನಸಮಯೆ....! | ,, | 4-00 |
| ಗಾನತೀರ್ಥ | ,, | 6-00 |
| ನಾದ ಬಿಂದು | ,, | 6-00 |
| ವಿಜಯಗಾಥಾ | (ದೇಶಭಕ್ತಿ ಗೀತೆ) | 3-00 |

## ಸದ್ಯದಲ್ಲಿಯೇ ಪ್ರಕಟವಾಗಲಿರುವ ಕೃತಿ

ಶಿಲಾಚೇತನ

---

## ಮುಂಬರಲಿರುವ ಕೃತಿಗಳು

ಶೇಷ ರತ್ನ ಶ್ಯಾಂ-ಶಾಂತಿ ಹೇಮ-ಗಂಗಾ

ಭಗವಾನ್‌ಸೂರಿ ಗೂಢಚಾರ